# ವಿಜ್ಞಾಪನೆ

Purchased at Belgaum with Second hand Book Dealer. on 19.2.1961
[illegible]

ಆಸ್ತಿಕ ಮಹಾಶಯರೇ !

ಕರ್ಣಾಟಕ ಕವಿಗಳಲ್ಲಿ ಮಹಾನುಭಾವರಾದ ಪ್ರಾಚೀನರೂ ಮತ್ತು ಆಧುನಿಕರೂ ಸಹ, ಅನೇಕ ಪುರಾಣೇತಿಹಾಸಗಳನ್ನು ಗದ್ಯ–ಪದ್ಯಾತ್ಮಕಗಳಾಗಿ ರಚಿಸಿ ವಿಶೇಷವಾದ ಕೀರ್ತಿಯನ್ನು ಗಳಿಸಿರುವರು. ಪಾಮರನಾದ ನಾನು **ಮಾಧವೀಯಶಂಕರವಿಜಯ**ವೆಂಬ ಸಂಸ್ಕೃತಕಾವ್ಯವನ್ನು ಸಕಲ ಜನವೇದ್ಯವಾಗುವಂತೆ ವಿರಚಿಸಬೇಕೆಂದು ಆಶಾಬದ್ಧನಾದೆನು. ಕರ್ಣಾಟಕ ಭಾಷೆಯಲ್ಲಿ ಮಹಾಭಾರತವನ್ನು ವಿರಚಿಸಿ ಪ್ರಸಿದ್ಧನಾಗಿರುವ ಮಹಾತ್ಮನಾದ **ಕುಮಾರವ್ಯಾಸಕವಿಯ** ಪದ್ಯಕಾವ್ಯಗಳನ್ನು ವಿಶೇಷವಾಗಿ ಓದಿ ಉಂಟಾದ ಶಬ್ದಪರಿಚಯದಿಂದ ಈ ಗ್ರಂಥ ರಚನೆಗೆ ಕೈಯಿಟ್ಟೆನು. **ಶ್ರೀ ಶೃಂಗೇರಿ ಜಗದ್ಗುರು ಮಹಾಸಂಸ್ಥಾನದ ಆಶೀರ್ವಾದವೂ, ಶ್ರೀ ಕೂಡ್ಲಿ ಶ್ರೀ ಶೃಂಗಗಿರಿ ಜಗದ್ಗುರು ಮಹಾಸಂಸ್ಥಾನದ ಪೂರ್ಣಾನುಗ್ರಹವೂ** ಲಭಿಸಿದವು. ಗ್ರಂಥವು ಮಂಗಳವಾದನಂತರ ಶ್ರೀ ಕಾಂಚೀ ಕಾಮಕೋಟಿ ಪೀಠಾಧಿಪ ಶ್ರೀಮಜ್ಜಗದ್ಗುರು **ಶ್ರೀಮಚ್ಛಂಕರಾಚಾರ್ಯಸ್ವಾಮಿಗಳವರ ಶ್ರೀಮಠದ** ಪರಮಾನುಗ್ರಹರೂಪವಾದ ಮಹದಾಶೀರ್ವಾದವೂ ಲಭಿಸಿತು. **ಮೈಸೂರು ಶ್ರೀಮನ್ಮಹಾರಾಜರವರ** ಉದಾರವಾದ ಕೃಪಾಪೋಷಣೆಯು ದೊರಕಿತು. **ಶ್ರೀಮಚ್ಛಂಕರಾಚಾರ್ಯ ದ್ವಾರಕಾಸಂಸ್ಥಾನ ಮುಳಬಾಗಿಲು ಶ್ರೀಮಠ, ಶ್ರೀ ಆವನೀ ಜಗದ್ಗುರುಶ್ರೀಮಠ ಮತ್ತು ಶ್ರೀ ಸ್ವರ್ಣವಲ್ಲೀ ಸಂಸ್ಥಾನ ಶ್ರೀಮಠ** ಇವುಗಳ ಮಹದನುಗ್ರಹವೂ ಲಭಿಸಿದವು. ಉದಾರಸುರಭೂಜರಾದ ಕೆಲವು ಮಹನೀಯರುಗಳು **ಪೋಷಕರಾಗಿ** ಸಹಾಯ ಮಾಡಿದರು. ಪ್ರಾರಂಭದಿಂದ ಸಂಪೂರ್ಣ ಕೃಪೆಯಿಟ್ಟು ಸಹಾಯಮಾಡಿರುವ **ಮಹನೀಯರುಗಳೆಲ್ಲರಿಗೂ** ಕೃತಜ್ಞತಾಪೂರ್ವಕವಾದ ನನ್ನ ಅನಂತ ಅಭಿವಂದನೆಗಳನ್ನು ಸಮರ್ಪಿಸುವೆನು.

ಸುಜನಪಾದಸೇವಕ

**ಪೌರಾಣಿಕ ಸಾಲಿಗ್ರಾಮ ಶ್ರೀಕಂಠಶಾಸ್ತ್ರೀ**

ಗ್ರಂಥಕರ್ತ.

ತಾ. 1935

# ಅ ಭಿ ವಂ ದ ನೆ.

---

**ಮಹಾಶಯರೇ !**

ಶ್ರೀ ಶಂಕರವಿಜಯದ ಗದ್ಯ ಮತ್ತು ಪದ್ಯಾತ್ಮಕವಾದ ಗ್ರಂಥವು ಮಹನೀಯರಾದ ಚಂದಾದಾರರ ವಿಶ್ವಾಸದಿಂದ ಪ್ರಕಟವಾಗಿ ಪ್ರಥಮ ಮುದ್ರಣದ ಪುಸ್ತಕಗಳೆಲ್ಲವೂ ವಿಕ್ರಯಿಸಲ್ಪಟ್ಟು ದ್ವಿತೀಯ ಮುದ್ರಣಕ್ಕೆ ಅವಕಾಶವನ್ನು ಪಡೆದಿರುವುದು. ಪ್ರಥಮ ಮುದ್ರಣವು ಪೂರ್ತಿಯಾಗಿ ಮಹಾಜನರ ಹಸ್ತಗತವಾದುದಕ್ಕೆ-- ಮೈಸೂರು ಮಹಾ ಸಂಸ್ಥಾನದ ವಿದ್ಯಾಭ್ಯಾಸ, ರೆವಿನ್ಯೂ ಮತ್ತು ಮುಜರಾಯಿ ಇಲಾಖೆಗಳ ಸಹಾಯವೂ, ಮದ್ರಾಸಿನ ಟೆಕ್ಸ್ಟ್ ಬುಕ್ಕು ಕಮಿಟಿಯ ಪ್ರೋತ್ಸಾಹವೂ, ಮಹಾ ಜನಗಳ ಉದಾರಾಶ್ರಯವೂ ದೊರೆತುದು ಸಾಧಕವಾಗಿರುತ್ತಾಗಿ, ನನ್ನ ಅನಂತ ಅಭಿವಂದನೆಗಳು ಮೈಸೂರು ಮತ್ತು ಮದ್ರಾಸ್ ಸರ್ಕಾರಕ್ಕೂ ಮಹಾ ಜನಗಳಿಗೂ ಸಲ್ಲತಕ್ಕದ್ದಾಗಿವೆ.—ಪ್ರಥಮ ಮುದ್ರಣವು ಪೂರ್ತಿಯಾದನಂತರ ಶ್ರೀ ಕಾಂಚೀಕಾಮಕೋಟಿ ಪೀಠಸ್ಥಿತ ಶ್ರೀಮಜ್ಜಗದ್ಗುರು ಶ್ರೀ ಶಂಕರಾಚಾರ್ಯರವರು ಅನುಗ್ರಹಿಸಿ ನನ್ನನ್ನು "ನವನವಕಾಳಿದಾಸ" ನೆಂದೂ ಶ್ರೀಮಜ್ಜಗದ್ಗುರು ದ್ವಾರಕಾ ಪೀಠಾಧೀಶರು ಪೂರ್ಣಾನುಗ್ರಹದಿಂದ "ಪೌರಾಣಿಕ ಶಿರೋಮಣಿ" ಯೆಂದೂ ಕರೆದಿರುವುದು ಈಗ ನಾನು ಮಹಾಜನರಿಗೆ ವಿಜ್ಞಾಪಿಸಿಕೊಳ್ಳುವ ಹೊಸ ವಿಷಯವಾಗಿರುವುದು. ದ್ವಿತೀಯ ಮುದ್ರಣದ ಪುಸ್ತಕಗಳ ವಿಕ್ರಯದಿಂದ ದೊರೆಯುಬಹುದಾದ ಲಾಭಾಂಶವು, ಈಚೆಗೆ ಶ್ರೀಮತ್ತ್ರಿಪುರಸುಂದರೀದೇವಿಯ ಅಂಕಿತದಿಂದ ರಚಿತವಾಗಿರುವ ಹದಿನಾಲ್ಕು ಸಾವಿರದ ಐವತ್ತು ಭಾಮಿನೀಷಟ್ಪದೀ ಪದ್ಯರೂಪದ ಶ್ರೀ ದೇವೀಭಾಗವತ ಮಹಾಪುರಾಣವೆಂಬ ಗ್ರಂಥರಚನಾ ಶಾಂತಿರೂಪವಾದ ಶ್ರೀ ಗಾಯತ್ರೀಯಾಗಕ್ಕಾಗಿ ವಿನಿಯೋಗಿಸಲ್ಪಟ್ಟಲ್ಲಿ ನನ್ನ ಜನ್ಮವು ಸಫಲವಾಗುವುದೆಂದು ನಿಶ್ಚಯಿಸಿರುವೆನು. ಈ ಭಾಗದಲ್ಲಿ ಸಹಾಯ ಮಾಡುವ ಆಸ್ತಿಕ ಮಹಾಶಯರಿಗೆ ನನ್ನ ಅನಂತ **ಅಭಿವಂದನೆಗಳು.**

ಸುಜನ ಪಾದಸೇವಕ,

**ಪೌರಾಣಿಕ ಸಾಲಿಗ್ರಾಮ ಶ್ರೀಕಂಠಶಾಸ್ತ್ರೀ.**

ತಾ| 1951.

# ವಿಷಯಾನುಕ್ರಮಣಿಕೆ





ಸುಜನಪಾದಸೇವಕ

ನವನವಕಾಳಿದಾಸ ಕುಮಾರಮಾಧವ

**ಪೌರಾಣಿಕ ಸಾಲಿಗ್ರಾಮ ಶ್ರೀಕಂಠಶಾಸ್ತ್ರೀ**

|| ಶ್ರೀ ||

ಪಾರ್ವತೀಸಮೇತ ಶ್ರೀ ಶ್ರೀಕಂಠೇಶ್ವರ ಸ್ವಾಮಿನೇನಮಃ.

ಕರ್ಣಾಟಕ

# ಶಂಕರವಿಜಯ.



## ಪದ್ಯ ಕಾವ್ಯ.

ಅಖಂಡಮಂಡಲಾಕಾರಂ ವ್ಯಾಪ್ತಂ ಯೇನ ಚರಾಚರಂ |
ತತ್ಪದಂ ದರ್ಶಿತಂ ಯೇನ ತಸ್ಮೈಶ್ರೀಗುರವೇನಮಃ ||

ಭಾಮಿನೀ ಷಟ್ಪದಿ.

## ಪೀಠಿಕಾ ಸಂಧಿ.



ಶ್ರೀಗಿರಿಜೆಯಧಿನಾಥ ಶಂಕರ |
ಭೋಗಿಭೂಷಣ ಭಕ್ತವತ್ಸಲ |
ನಾಗಚರ್ಮಾಂಬರನೆ ಸುರಮುನಿಪೂಜಿತಾಂಘ್ರಿಯುಗೆ ||
ಆಗಮಾರಾಧಿತನೆ ಚಿನ್ಮಯ |
ಯೋಗಿಹೃದಯಾಂಬುಜ ನಿವಾಸನೆ |
ಭೂ ಗಗನ ಸಲಿಲಾತ್ಮ ಪೊರೆ ಶ್ರೀಕಂಠ ಸಜ್ಜನರ || ೧

ಜನಕಜಾನನಕಮಲಮಿತ್ರನೆ |
ಮನುಕುಲಾಂಬುಧಿಸೋಮ ರಾಮನೆ |
ಮುನಿಪಕೌಶಿಕಯಾಗರಕ್ಷಕ ಭಕ್ತಸುರಧೇನು ||
ಘನಮಹಿಮ ದಶಮೌಳಿಕುಲಘನ |
ವನಧಿಬಡಬಾನಲನೆ ರಕ್ಷಿಸು |
ನೆನೆವ ಶರಣರನೊಲಿದು ಸೀತಾರಾಮ ನಿಸ್ಸೀಮ || ೨

ವಿಘ್ನ ವಾರಿಧಿ ಕುಂಭಸಂಭವ |
ವಿಘ್ನ ಜಲಧರ ಚಂಡಮಾರುತ |
ವಿಘ್ನ ಸಾಮಜ ಕುಲಕೆ ಪಂಚಾನನನೆ ಶಿವಸುತನೆ ||
ವಿಘ್ನ ಭೂಧರ ಕುಲಕೆ ವಜ್ರನೆ |
ವಿಘ್ನ ಫಣಿಕುಲ ವೈನತೇಯನೆ |
ವಿಘ್ನವನು ಪರಿಹರಿಸಿ ಪೊರೆಯುವುದೆನ್ನ ವಿಘ್ನೇಶ ||

ಸರಸಿಜಾಸನರಾಜ್ಞಿ ಶಾರದೆ |
ವರಸುಗುಣೆ ಕಲ್ಯಾಣಿ ಸುರನುತ |
ಚರಣಸಾರಸಯುಗಳೆ ನಿಗಮಾಗಮ ವಿರಾಜಿತೆಯೆ ||
ಸರಸತಿಯೆ ನೀನೊಲಿದು ರಕ್ಷಿಸು |
ನಿರತವೆನ್ನಯ ಜಿಹ್ವೆಯಗ್ರದೊ |
ಳಿರುತ ಸನ್ಮತಿಯಿತ್ತು ಕಾವ್ಯವ ನುಡಿಸು ವಾಗ್ದೇವಿ || ೪

ಹೈಮವತಿ ಶಿವದಯಿತೆ ಶಾಂಭವಿ |
ಸೋಮಸನ್ನಿಭಮುಖಸುಶೋಭಿತೆ |
ವಾಮದೇವಸುವಾಮಪಾರ್ಶ್ವಸ್ಥಿತೆ ಮಹಾದೇವಿ ||
ಪ್ರೇಮದಿಂದಲೆ ಭಕ್ತನಿಕರಕೆ |
ಕಾಮಿತಾರ್ಥವನಿತ್ತು ರಕ್ಷಿಸು |
ಕಾಮಹರನರ್ಧಾಂಗಿ ಶಂಕರಿ ವರದೆ ಕಲ್ಯಾಣಿ || ೫

ಕ್ಷೀರವಾರಿಧಿತನಯೆ ವೈಷ್ಣವಿ |
ವಾರಿರುಹಮಂದಿರೆಯೆ ರಕ್ಷಿಸು |
ಚಾರುಮಂಗಳಗಾತ್ರೆ ಸುಚರಿತೆ ಹರಿದಯಾಪಾತ್ರೆ ||
ವಾರಿಜಾಸನಮುಖ್ಯ ಸುರರಿಗೆ |
ಪಾರವೈಭವವಿತ್ತು ಸಲಹುವ |
ನೀರಜಾಂಬಕನರಸಿ ಕಮಲಾದೇವಿಯೊಲಿದೆನ್ನ || ೬

ಸರಸಿಜಾಸನಪೌತ್ರ ನಿರ್ಮಲ |
ತರಸುಯೋಗಿಶ್ರೇಷ್ಠ ಹರಿಹರ |
ಚರಣ ಪೂಜಕನಮಿತಗುಣಗಣಭರಿತ ಪಾವನನು ||
ವರಮರೀಚಿಕುಮಾರನೆನ್ನನು |
ಪೊರೆದುಕಾವ್ಯಕೆ ಶುಭವನೀಯಲಿ |
ಗುರುವರನು ಜಗದಾದಿಕಶ್ಯಪನೆನಿಪ ಮುನಿವರನು || ೭

ವೇದಮತವನು ಪೊರೆಯಲುದಯಿಸಿ |
ಬೋಧಿಸುತಲದ್ವೈತ ತತ್ವವ |
ಭೇದವನು ಖಂಡಿಸುತ ಸಲೆ ಬೌದ್ಧಾದಿನಾಸ್ತಿಕರ ||
ವಾದದಿಂ ಪರಿಭವಿಸಿ ಜಗದೊಳು |
ಮೋದದಿಂ ಷಣ್ಮತಸ್ಥಾಪಕ |
ನಾದಗುರುವರ ಪೊರೆಗೆ ನಮ್ಮನು ಶಂಕರಾಚಾರ್ಯ || ೮

ವ್ಯಾಸಮುನಿಯುಪದೇಶ ಮಾಡಿದ |
ಭಾಸುರದ ಭಾರತದ ಕಥೆಯನು |
ದೇಶಿಕರು ನಲಿವಂತೆ ವರಕರ್ಣಾಟಭಾಷೆಯಲೀ ||
ಆ ಸರೋಜಾಂಬಕನ ದಯೆಯಿಂ |
ತೋಷದಲಿ ರಚಿಸಿದ ಕುಮಾರ |
ವ್ಯಾಸ ಮೊದಲಾದಾದಿಕವಿಗಳಿಗೊಲಿದು ವಂದಿಸೆನು || ೯

ಯತಿಪವಿದ್ಯಾರಣ್ಯ ಮುದದಿಂ |
ಮತಿವರೇಣ್ಯನು ಶಂಕರಾರ್ಯನು |
ಕ್ಷಿತಿಯೊಳಾವರಿಸಿರ್ದ ಪಾಷಂಡಾದಿಮತಗಳನು ||
ಅತಿಶಯದವಾದದಲಿ ಜಯಿಸಿದ |
ಕಥೆಯನಭಿವರ್ಣಿಸಿದನದ ಪಶು |
ಪತಿಯದಯೆಯಿಂದಾನು ವಿವರಿಪೆನೀಗಲಾಪನಿತ || ೧೦

ಓದಿದವ ನಾನಲ್ಲ ವಿದ್ಯೆಯ |
ನೋದಿದವವ ನಾನಲ್ಲ ಶಾಸ್ತ್ರವ |
ನಾದರದಿ ಕಾವ್ಯವನು ವಿರಚಿಪ ಶಕ್ತ ನಾನಲ್ಲ ||
ಆದಿಶಂಕರನೇನ ಚಿತ್ತಕೆ |
ಬೋಧಿಪನೊ ನಾನದನು ಬರೆಯುವೆ |
ನಾದರದೊಳಾಲಿಪುದು ಸುಜನರು ಲೇಸನೀಕ್ಷಿಪುದು |

ವರಮಹೀಶೂರಾಖ್ಯ ದೇಶವ |
ನರಪಧರ್ಮದೊಳೊಲ್ದು ಪಾಲಿಸಿ |
ಮೆರೆವ ನಾಲ್ವಡಿ ಕೃಷ್ಣಭೂಪನ ರಾಜಮಂದಿರದಿ ||
ವರಪದಾತಿಯ ಮುಖ್ಯಶಾಖೆಯೊ |
ಳಿರುವ ಭಯಭಕ್ತಿಯಲಿ ಸೇವಾ |
ಪರನೆನಿಸಿ ರಂಜಿಸುವ ವರಭೂದೇವ ಕುಲದವನು ||

ಪರಮಕಾಶ್ಯಪಗೋತ್ರ ಜಾತನು |
ಮೆರೆವ ಬೊಬ್ಬುರಕರ್ಮಿ ಕುಲದವ |
ನುರುವ ಪೌರಾಣಿಕನ ಕುಂದೂರಾರ್ಯ ನಾಮಕನ ||
ವರಸುತನು ಬುಧಜನಕೆ ವಂದಿಸಿ |
ಹಿರಿಯರನುಮತಿಯಿಂದ ರಚಿಸಿದ |
ಗುರುವರ ಸುಚರಿತೆಯನು ಶ್ರೀಕಂಠಾಖ್ಯನಾದರದೆ ||

ಸುರವರರ ಭಾಷೆಯಲಿ ರಂಜಿಪ |
ಪರಮ ಶಂಕರವಿಜಯ ಕಾವ್ಯದ |
ಪರಿಯನರಿಯಲಸಾಧ್ಯ ಮದರಿಂ ಸಕಲಜನಮನಕೆ ||
ಹರಿಸಮುಸ್ಪಂದದಲಿ ಕಾವ್ಯವ |
ವಿರಚಿಪುದು ಕನ್ನಡದೊಳೆಂದೆನೆ |
ಗುರುವರನ ನೇಮದಲಿ ರಚಿಸಿದನೀಮಹಾಕಥೆಯ || ೧೪

ಶ್ರುತಿಮತವ ನೆರೆಪೊರೆವ ಶಂಕರ |
ಯತಿಯಪರರೂಪದಲಿ ರಂಜಿಸಿ |
ಸುತಪಗೈದ ಶಿವಾಭಿನವನರಸಿಂಹಭಾರತಿಯ ||
ನುತಕರಾಂಬುಜಜಾತ ಸನ್ನುತ |
ಯತಿಪತಿಯ ಕರುಣವನು ಪಡೆದೀ |
ಕೃತಿಯಪೇಳ್ವೆನು ಸಜ್ಜನರು ಲಾಲಿಪುದು ಕರುಣದಲಿ || ೧೫

ಯತಿ ಗಣ ಪ್ರಾಸಾದಿ ಕಾವ್ಯದ |
ಪಥವನರಿಯದ ಮೂಢಮನುಜನ |
ಕೃತಿಯಿದೆನ್ನುತ ಜರೆದುನೂಕದೆ ಪರಮಕೃಪೆಯಿಂದ ||
ಸುತರ ಮಾತನು ಹಿತದಿ ಮಾತಾ |
ಪಿತೃಗಳಾಲಿಸಿ ನಲಿವ ತೆರದಲಿ |
ಕೃತಿಯನವಧರಿಸುವುದು ಸುಜನರು ಸಕಲ ಸೂರಿಗಳು || ೧೬

ಪತಿತಪಾವನನೆನಿಪ ಗಿರಿಜಾ |
ಪತಿಯು ಧರ್ಮವನಳಿವ ನಾಸ್ತಿಕ |
ಮತವ ಖಂಡಿಸಲುದಯಿಸಿದನವನಿಯಲಿ ಯತಿಯಾಗಿ ||
ಹಿತವಗೈದಾ ಪರಮಶಂಕರ |
ನತುಳ ಚರಿತೆಯ ಕೇಳ್ವ ಸುಜನರಿ |
ಗತಿಶಯದ ಮಂಗಳವೆಯಪ್ಪುದು ಶಾಸ್ತ್ರಸಿದ್ಧವಿದು || ೧೭

ಪೀಠಿಕಾಸಂಧಿ ಪದ್ಯ ೧೭ ಕ್ಕೆ ಮಂಗಳ.



# ಎರಡನೆಯ ಸಂಧಿ.

ಸೂಚನೆ || ಸುರರು ಸಂಪ್ರಾರ್ಥಿಸಲು ಗಿರಿಜಾ |
ವರನು ಭೂಸುರನಾಗಿ ಜನಿಯಿಸಿ |
ಧರಣಿಯಲಿ ಧರ್ಮವನು ಪಾಲಿಪೆನೆಂದು ಕರುಣಿಸಿದ ||

ಧರೆಯಮರಭೃಗುಗೋತ್ರಜಾತರು |
ಪರಮಪಾವನ ಶೌನಕಾದಿಗ |
ಳುರುವ ತಪವನು ರಚಿಸಿ ಶಮೆದಮೆಯಾಂತು ನೈಮಿಶದಿ ||
ಇರುತಿರಲು ಸೂತಾಖ್ಯ ಮುನಿಪತಿ |
ಸರಸಿಜಕೆ ಮೈದೋರ್ಪ ರವಿಯವೊ |
ಲ್ಬರುತಲಿರ್ದನು ತತ್ತಪೋಧನರಿದಿರೊಳತಿಮುದದಿ || ೧

ಬಂದಮುನಿಪಂಗರ್ಘ್ಯಪಾದ್ಯವ |
ನಂದಮಿಗೆ ವಿರಚಿಸುತ ತಾಪಸ |
ವೃಂದವತಿಸಂಭ್ರಮದಲಾಸನವಿತ್ತು ಸತ್ಕರಿಸಿ ||
ಅಂದುಕುಶಲವ ಕೇಳಲತುಳಾ |
ನಂದವಾನುತ ರೋಮಹರ್ಷಿಣಿ |
ಸಂದ ಕುಶಲವಪೇಳಿ ಪೊಗಳಿದನಾತಪೋಧನರ || ೨

ಋಷಿಗಳಿರ ಭೃಗುವಂಶವಾರಿಧಿ |
ಶಶಿಗಳಿರ ಲೋಕವನು ಮೋಹಿಪ |
ವಿಷಯಗಳ ನೆರೆತೊರೆದು ಸಂತತ ಭಕ್ತಿಭಾವದಲಿ ||
ಬಿಸಜನಾಭನ ದಿವ್ಯಚರಿತೆಯ |
ನೊಸೆದುಲಾಲಿಪ ನಿಮ್ಮಪೋಲ್ವರು |
ವಸುಮತಿಯೊಳಾರುಂಟು ನೀವೇ ಧನ್ಯತಮರೆಂದು || ೩

ಎಂದ ಮಾತನು ಕೇಳಿ ವಿಪುಲಾ |
ನಂದದಲಿ ಮುಳುಗುತ್ತ ಶೌನಕ |
ನಂದು ಸೂತಗೆ ನಮಿಸಿ ಕೈಮುಗಿದೆಂದನಿಂತೆಂದು ||
ಅಂದವಹ ಪೌರಾಣಸೂಕ್ತಿಗ |
ಳಿಂದ ಭುವನದ ದುರಿತ ಶಿಖಿಯನು |
ನಂದಿಸುವ ಮುನಿವರನೆ ಲಾಲಿಪುದೆನ್ನ ಬಿನ್ನಪವ || ೪

ಕಲಿಯುಗದೊಳಿರ್ಸಾಸಿರಬುದವು |
ಕಳೆದಬಳಿಕಾ ಶಿವನು ಭುವನದೆ |
ವಿಲಸಿತದ್ವಿಜನಾಗಿ ಜನಿಯಿಸಿ ನಾಸ್ತಿಕಾದಿಗಳ ||
ಗೆಲಿದು ಪರಮಾದ್ವೈತತತ್ವವ |
ನೊಲಿದು ಬೋಧಿಪನೆಂದು ಗಿರಿಜಾ |
ಲಲನೆಗೊರೆದಿಹನೆಂದು ಕೇಳ್ದೆವು ಶಿವರಹಸ್ಯದೊಳು || ೫

ಕಂತುಹರ ಜನಿಯಿಸಿದನವನಿಯೊ |
ಳೆಂತು ಮತ್ತಾತನನು ಪಡೆದವ |
ರೆಂತು ಪುಣ್ಯವನೆಸಗಿ ಮಾತಾಪಿತೃಗಳೆನಿಸಿದರು ||
ಸಂತಸದಿ ನಮಗಿದನು ಪೇಳೆನೆ |
ಚಿಂತಿಸುತ ಗುರುಪದವ ಸೂತನು |
ದಂತಿಚರ್ಮಾಂಬರನ ಚರಿತೆಯ ನೊರೆಯಲನುವಾದ || ೬

ಕೇಳು ಶೌನಕ ಬಹುಚರಾಚರ |
ಜಾಲವನು ಧರಿಸುವ ಧರಣಿಯ |
ಮೇಲೆಸೆವ ನಾನಾವಿಧದ ಜೀವಗಳ ಜೀವನವ ||
ಕಾಲಕಾಲಕೆ ಕೊಟ್ಟು ಲೋಕವ |
ಪಾಲಿಸಲು ಕಮಲಜನು ಹೇಮವ |
ಮೇಳವಿಸಿ ತಾನಿಟ್ಟನೆನೆ ಕನಕಾದ್ರಿರಂಜಿಪುದು || ೭

ಕನಕಗಿರಿಗೀಶಾನ್ಯ ಭಾಗದೆ |
ಘನವೆನಿಪ ದೇದೀಪ್ಯಮಾನದೆ |
ಮಿನುಗುತಿಹ ರಜತಾದ್ರಿಯಾಮುಂದರದಿ ಪಾಲ್ಗಡಲ ||
ದನುಜರಮರರು ಸೇರಿ ಮಥಿಸ |
ಲ್ಕನುನಯದಲೊದಗಿರ್ದ ಬೆಣ್ಣೆಯು |
ನನಿತುವನು ಕೂಡಿಟ್ಟತೆರದಲಿ ಮೆರೆವುದತಿಶಯದಿ || ೮

ಆ ಗಿರಿಯ ತಪ್ಪಲಲಿ ಮುನಿಕುಲ |
ವಾಗೆಮಾರಾಧಿತನನಭವನ |
ಭೋಗಿಭೂಷಣಶಿವನನಗಜಾಲೋಲಶಂಕರನ ||
ನಾಗಚರ್ಮಾಂಬರನ ನಮಿತನ |
ಭೂ ಗಗನ ಸಲಿಲಾಗ್ನಿ ಮಾರುತ |
ನಾಗಿ ರಂಜಿಪ ಭವನ ಪೂಜಿಸುತಿರ್ದುದನವರತ || ೯

ಕೆಲಬರುರುಯಜ್ಞಾದಿಕರ್ಮದೆ |
ಕೆಲರು ಘನತರ ಯೋಗಮಾರ್ಗದೆ |
ಕೆಲರು ಶೈವಾಗಮದ ರೀತಿಯಲರ್ಚಿಸುವಕತದೆ ||
ಕೆಲಬರುಜ್ವಲಿಪಗ್ನಿ ಮಧ್ಯದೆ |
ಸಲಿಲಮಧ್ಯದೆ ಕೆಲರು ತಪದಿಂ |
ದೊಲಿಸುತಿರ್ದರು ಶಿವನನಾಕೈಲಾಸಪರ್ವತದೆ || ೧೦

ಭರಿತ ಫಲರಾಜಿಯಲಿ ರಂಜಿಪ |
ತರುಗಳಿಂದಲೆ ರಜತಮಯವಾ |
ದರೆಗಳಿಂದಲಿ ಚರಿಪ ನಾನಾ ಖಗ ಮೃಗಂಗಳಲಿ ||
ಸರಸಿಯಲಿ ಸರಸಿಜದ ಗಂಧವ |
ಬೆರೆಸಿ ಬೀಸುವ ಮಂದಮಾರುತ |
ಸರಣಿಯಲಿ ಶೋಭಿಪುದು ಶಂಭುನಿವಾಸ ಕೈಲಾಸ || ೧೧

ಇಂತೆಸೆವ ರಜತಾದ್ರಿ ಶಿಖರದೊ |
ಳಂತರಾತ್ಮನು ತನ್ನ ನೆನೆವರಿ |
ಗಂತವಿಲ್ಲದ ಸುಖವನೀಯುತಲಖಿಳಲೋಕಗಳ ||
ಸಂತಸದಿ ರಕ್ಷಿಸುತ ಗಿರಿಜಾ |
ಕಾಂತೆಯಿಂದೊಡಗೂಡಿ ಮೆರೆದನ |
ನಂತವೈಭವವಾಂತು ಲೋಕಾಧಾರನೆಂದೆನಿಸಿ || ೧೨

ಒಂದುದಿನ ಕೈಲಾಸಶಿಖರದೊ |
ಳಿಂದುಶೇಖರ ಸಕಲ ಸುರಮುನಿ |
ವೃಂದ ಸೇವಿಸುತಿರಲು ಪರಮಾನಂದಯುತನಾಗಿ ||
ಬಂಧುರಾಸನದಲ್ಲಿ ಮಂಡಿಸು |
ತಂದಮಿಗೆ ಗುಹ ವೀರಭದ್ರರು |
ಸಿಂಧುರಾಸ್ಯ ಸಮೇತ ಸಭೆಯೊಳಗಿರಲು ಸಂತಸದಿ || ೧೩

ಅಮರಮುನಿಗಳ ವೇದಘೋಷದೆ |
ಸುಮನಸರ ಸಂಗೀತ ವಾದ್ಯದೆ |
ಕಮಲಜಾತಿಗಳೆರಗಿ ನುತಿಸುವ ಪರಮ ಸಂಭ್ರಮದೆ ||
ವಿಮಲಮಹಿಮೋಪೇತದಾಗಮ |
ರಮಣಿಯರ ಜಯರವದೆ ಗಿರಿಜಾ |
ರಮಣನೋಲಗಸಾಲೆ ಮೆರೆದುದು ನೂತ್ನವಿಭವದಲಿ || ೧೪

ಸುರರು ಖಚರರು ಕಿನ್ನರರು ಕಿಂ |
ಪುರುಷರುರಗರು ಮನುಮುನೀಶ್ವರ |
ರುರುಸುವಿದ್ಯಾಧರರು ವರಗಂಧರ್ವಗುಹ್ಯಕರು ||
ಗರುಡರಪ್ಸರಸಾಶ್ವಿನೇಯರು |
ತರಣಿಶಶಿಭೌಮಾದಿದೇವಾ |
ಸುರರು ನೆರೆದಿಹರುನ್ನತದ ಶಿವಸಭೆಯೊಳೊಲವಿನಲಿ || ೧೫

ಇಂತು ಕೈಲಾಸಾದ್ರಿಯಲಿತಾ |
ನಿಂತು ತನ್ನನು ಭಜಿಪ ಶರಣರ |
ಚಿಂತಿತಾರ್ಥವನಿತ್ತು ಸಲಹುತ ಬಹುಚರಾಚರದಿ ||
ಅಂತರಂಗಸ್ಥಾಯಿಯೆನಿಸುತ |
ಕಂತುಹರನಾ ಸಕಲತತ್ವದೆ |
ತಂತುಪಟಕಾಧಾರವಾಗಿಹ ತೆರದೊಳೆಸೆದಿಹನು || ೧೬

ಇರಲು ಕೈಲಾಸಾದ್ರಿಶಿಖರಕೆ |
ಸುರಮುನಿಗಳೊಡಗೂಡಿ ಧರಣೀ |
ಸುರಮುನಿಗಳೈತಂದು ಹೊಗುತಾಭವನ ಭವನವನು ||
ಮೆರೆವ ಸದ್ಯೋಜಾತವೊದಲಹ |
ನಿರುಪಮಾನನಪಂಚಕದ ಪುರ |
ಹರನ ಪಂಚಬ್ರಹ್ಮರೂಪನ ಕಂಡರಿದಿರಿನಲಿ || ೧೭

ಧರಿಸಿದಾಗಜಚರ್ಮದುಡುಗೆಯ |
ಮೆರೆವನಾಗನ ಹೆಡೆಯುಮೇಖಲೆ |
ಯುರದೊಳೆಸೆವ ಭುಜಂಗಮುಯುವೆನಿಪತುಳಹಾರಗಳ ||
ಕರದೊಳೊಪ್ಪುವ ಶೂಲಡಮರುಗ |
ಹರಿಣ ಜಪಮಾಲೆಗಳ ಮುಡಿಯೊಳು |
ಮೆರೆವ ಗಂಗೆಯು ಚಂದ್ರರೇಖೆಯು ಶಿವನ ನೋಡಿದರು || ೧೮

ಕಾಮಹರನನು ತನ್ನ ಶರಣರ |
ಕಾಮಿತಾರ್ಥವನೀವ ಶಿವನನು |
ವಾಮದೇವನ ಪರಮಪಾವನನೆನಿಪ ಶಂಕರನ ||
ವ್ಯೋಮಕೇಶನ ನಿಖಿಲಲೋಕ |
ಕ್ಷೇಮಕಾರಣನೆನಿಪ ಗಿರಿಶನ |
ಸಾಮಗಾನಪ್ರೇಮನನು ಕಂಡೆರಗಿದರು ಮುದದೆ || ೧೯

ಜಯುನಮೋ ಜಗದಾದಿಕಾರಣ |
ಜಯುನಮೋ ಭವಭಯುನಿವಾರಣ |
ಜಯುನಮೋ ಕರುಣಾಮುಹಾರ್ಣವ ದೈತ್ಯದಾರಣನೆ ||
ಜಯುಜಯು ಚ್ಯುತಿದೂರ ಶಂಕರ |
ಜಯುಜಯು ತ್ರಿಪುರಾಸುರಾಂತಕ |
ಜಯುಜಯು ಶ್ರೀಕಂಠ ಮುಂಗಳನಿಳಯು ಸಿತಿಕಂಠ || ೨೦

ಎಂದು ನುತಿಸುತ್ತಿರುವ ತಾಪಸ |
ವೃಂದವನು ಕಾಣುತ್ತ ಕರುಣಾ |
ಸಿಂಧು ಭಕ್ತರೊಳಂದು ಪರಮುಸ್ನೇಹ ಪಸರಿಸಲು ||
ಮುಂದಹಾಸಮುಖಾಬ್ಜನಾಗುತ |
ಲಂಧಕಾಸುರಮುಥನ ಕೇಳಿದ |
ಬಂದಹದನೇನದನು ಪೇಳುವುದೆಂದು ಮುನಿವರರ || ೨೧

ನೀಲಕಂಠನೆ ಚಿತ್ತವಿಸು ಸುರ |
ಮೌಳಿಮುಂಡಿತಚರಣ ಸುರರಿಪು |
ಕಾಲನಾರಾಯುಣನು ದೈತ್ಯಾಧಮುರ ನಾರಿಯುರ ||
ಶೀಲವನು ಕಿಡಿಸಲ್ಕೆ ಬೌದ್ಧವಿ |
ಶಾಲರೂಪವನಾಂತು ಪೇಳ್ದನು |
ಲೀಲೆಯಿಂಶ್ರುತಿಗೆಳಿಗೆಪಾರ್ಥವನಧಿಕಯುಕ್ತಿಯುಲಿ || ೨೨

ಆಸಿರಿಯುವಲ್ಲಭನ ಬೋಧೆಗೆ |
ಭೂಸುರರು ಮುರುಳಾಗಿ ತಮ್ಮಯು |
ಲೇಸೆನಿಪ ವಿಧಿವಿಹಿತಕರ್ಮುಗಳೆಲ್ಲವನು ತೊರೆದು ||
ಸೂಸುತಪ್ರಾಮಾಣ್ಯತೆಯು ಶ್ರುತಿ |
ಶಾಸನವನಿರ್ಮೂಲಗೈಯುುತ |
ಮೀಸಲನು ಕಿಡಿಸಿಹರು ವರಯುಜ್ಞಾದಿ ಕರ್ಮುಗಳ || ೨೩

ಧೂರ್ತರವರಿಂ ಕಟ್ಟುದತುಳ |
ಸ್ಮಾರ್ತಕರ್ಮವು ಸಕಲಜನಕುಂ |
ಸ್ವಾರ್ಥತೆಯುಪೆರ್ಚಿಹುದು ನಸಿದುದು ಪರಮಪರಮಾರ್ಥ ||
ಅರ್ಥಕಾಮಿಗಳಾಗಿ ಮನುಜರ |
ನರ್ಥಭಾಜನರಾಗಿ ವರಪರ |
ಮಾರ್ಥಗಳ ನೆರೆತೊರೆದು ದುರ್ಮಾರ್ಗದಲಿವರ್ತಿಪರು || ೨೪

ನರಬಲಿಯ ಕುಡುತಿಹರು ಮತ್ತಾ |
ಸುರೆಯ ಕುಡಿಯುತನಲಿಯುತಿರುವರು |
ನಿರತಪರರುಚ್ಛಿಷ್ಟವನು ತಾವ್ಬಯಸಿ ಭುಂಜಿಪರು ||
ಧರಣಿಯಮರರು ವೇದಕರ್ಮವ |
ನಿರದೆನಿಂದಿಸುತಿಹರು ನಾಸ್ತಿಕ |
ಪರರೆನಿಸಿ ಕಿಡುತಿಹರು ಬೋಧಭ್ರಾಂತಿಯಲಿ ಮುಳುಗಿ || ೨೫

ವೇದಕರ್ಮವನಳಿವಜನರನು |
ಭೇದಿಸುತ ವಿಧಿವಿಹಿತಕರ್ಮವ |
ಸಾಧಿಸುವ ಮಾರ್ಗವನು ಭೋಧಿಸಿ ಧರ್ಮವನು ನಿಲಿಸಿ ||
ಮೇದಿನಿಯೊಳುಳ್ಳಖಿಳನಾಸ್ತಿಕ |
ವಾದಿಗಳ ಪಾಷಂಡಮತದು |
ರ್ಭೇದಕರ ಖಂಡಿಸುತ ರಕ್ಷಿಸು ಜಗವ ಶಶಿಮೌಳಿ || ೨೬

ಎಂದು ಬೇಡುತಲಿರಲು ಲಾಲಿಸು |
ತಿಂದುಧರ ಕರುಣದಲಿ ಸನ್ಮುನಿ |
ವೃಂದಕಭಯವನಿತ್ತು ತಾನೇ ಜಗದೊಳವತರಿಸಿ ||
ಅಂದದಿಂ ಧರ್ಮವನು ರಕ್ಷಿಸಿ |
ಸಂದವೇದವ ಪೊರೆದು ಬಹುವಿಧ |
ದಿಂದ ದುರ್ವಾದಿಗಳ ಖಂಡಿಪೆನೆಂದು ಕರುಣಿಸಿದ || ೨೭

ಪರಮಹಂಸಾಶ್ರಮವನಂಗೀ |
ಕರಿಸಿ ಶಂಕರನಾಮದಿಂದಲಿ |
ಧರೆಯೊಳುದಯಿಸಿ ಪೊರೆವೆ ಸದ್ಬ್ರಾಹ್ಮಣ್ಯವನು ಮುದದೆ ||
ವಿರಚಿಸುವೆನಾ ಬ್ರಹ್ಮಸೂತ್ರಕೆ |
ಪರಮಭಾಷ್ಯವ ಮತ್ತೆನಾಪರಿ |
ಹರಿಪೆನಾದ್ವೈತಾಂಧಕಾರವ ಶಿಷ್ಯರೊಡೆವೆರೆಸಿ || ೨೮

ಮುನಿಗಳಿರನೀವೆಲ್ಲ ಧರೆಯೊಳು |
ಮನುಜರೂಪವ ನಾಂತುಜನಿಯಿಸು |
ತನುನಯದೊಳೆನ್ನನು ನಿರೀಕ್ಷಿಸುತಿಹುದು ನಾಂ ಬಹೆನು ||
ಎನುತಲವದಿರಿಗೊರೆದು ತನ್ನಯ |
ತನಯ ಷಾಣ್ಮಾತುರನ ಕಂಡತಿ |
ಬಿನದದಿಂದಲೆ ನುಡಿದ ಗಿರಿಜಾನಾಥ ನೀಮಾತ || ೨೯

ಕೇಳು ಶಿಖಿವಾಹನನೆ ವೇದವ |
ಪಾಲಿಸಲ್ಬ್ರಾಹ್ಮಣ್ಯವನು ಪರಿ |
ಪಾಲಿಸಿದ ಫಲವಹುದು ಮೊದಲೊಳಗೆನ್ನನುಜ್ಞೆಯಲಿ ||
ಪಾಲಿಸುತ್ತಿಹ ಯೋಗಕಾಂಡವ |
ಲೀಲೆಯಿಂದಲೆ ಜಗದಿಸುರಕುಲ |
ಮೌಳಿವಂದಿತಹರಿ ಪತಂಜಲಿಯೆಂಬನಾಮದಲಿ || ೩೦

ಆದಿಶೇಷನುಪಾಸನಾಖ್ಯೆಯ |
ವೇದಭಾಗವ ಪೊರೆಯುತಿರುವನು |
ಮೋದದಿಂ ಸಂಕರ್ಷಣಾಖ್ಯೆಯಧರಿಸುತವನಿಯೊಳು ||
ಬೋಧಿಸುವೆನಾಂ ಜ್ಞಾನಕಾಂಡವ |
ನಾದರದಿನೀಂ ಕರ್ಮಕಾಂಡವ |
ಮೇದಿನಿಯೊಳವತರಿಸಿ ಬೋಧಿಸು ಜೈಮಿನಿಯ ಮತವ || ೩೧

ವರತನಯ ಲಾಲಿಪುದು ಕಮಲಜ |
ನಿರುವ ನಿನ್ನ ಸಹಾಯಕಾಗಿಯೆ |
ಧರೆಯಮರರೂಪಿನಲಿ ಮಂಡನಮಿಶ್ರನಾಮದಲಿ ||
ಸುರಪತಿಯು ಸೌಗತರನೆಲ್ಲರ |
ಪರಿಭವಿಸಲೋಸುಗವೆ ನಿನ್ನಯ |
ಬರವಹಾರೈಸುವ ಸುಧನ್ವಾಭಿಖ್ಯೆಯಲಿ ನೃಪನಾಗಿ || ೨೯

ಎಂದ ಹರನಾಜ್ಞೆಯನು ಕೇಳ್ದಾ |
ಸ್ಕಂದ ಶಿವನಡಿಗೆರಗುತತುಳಾ |
ನಂದದಲಿ ಪೊರಮಟ್ಟನಲ್ಲಿಂಬಳಿಕ ಮುನಿವರರು ||
ಇಂದುಮೌಳಿಗೆ ನಮಿಸಿ ತಮ್ಮಯ |
ಮಂದಿರವ ಸಾರಿದರು ಮನದೊಳ |
ಗಿಂದಿರಾಧವಮಿತ್ರನಾ ಶ್ರೀಕಂಠನನುನೆನೆದು || ೩೦

ಸಂಧಿ ಎರಡಕ್ಕೆ ಪದ್ಯ ೩೦ ಕ್ಕೆ ಮಂಗಳ.

## ಮೂರನೆಯ ಸಂಧಿ.

ಸೂಚನೆ || ಹರನ ನೆರೆ ತಪದೊಳಗೆ ಮೆಚ್ಚಿಸಿ |
ವರಸುತನು ಜನಿಯಿಸುವ ತೆರೆದೊಳು |
ವರವಪಡೆದನು ಭೂಸುರಾಗ್ರಣಿಶಿವಗುರುವ್ರತಿಪ ||

ಕೇಳಿರೈಮುನಿಗಳಿರ ಶ್ರುತಿಗಣ |
ಮೌಳಿಮಂಡಿತಚರಣನೆನಿಸುವ |
ಶೂಲಪಾಣಿಯದಿವ್ಯಚರಿತಾಮೃತವ ಸುಖಪಥವ ||
ಆಲಿಸುವ ಸಜ್ಜನರ ದುರಿತ |
ವ್ಯಾಳಗಾರುಡ ಭಕ್ತಭವಕುಲ |
ಶೈಲಭೇದನಕುಲಿಶವೆನಿಸುವ ಮುಕ್ತಿಸಾಧನವ || ೧

ಭೂಸುದತಿ ಕಂಠದಲಿ ಧರಿಸಿಹ |
ಭಾಸುರದನಾಲಿಕೆಯು ನಡುವೆ ವಿ |
ಲಾಸದಲಿರಂಜಿಸುವ ನಾಯಕರತ್ನವೆಂಬಂತೆ ||
ದೇಶಗಳೊಳುತ್ಕೃಷ್ಟವೆನಿಸುತೆ |
ಭಾಸಮಾನದಿ ಮೆರೆವ ಕೇರಳ |
ದೇಶತಾಂ ರಂಜಿಪುದು ಬಹುಳೈಶ್ವರ್ಯಯುತವಾಗಿ || ೨

ಹರಿವನದಿಯಿಂತೆಗೆದಕಾಲುವೆ |
ಮೆರೆವಶಾಲೀವನದಸೇರುವೆ |
ಭರಿತಫಲರಾಜಿಯಲಿ ರಂಜಿಪ ದಿವ್ಯತರುಗಳಿವೆ ||
ಅರಳಿದಂಬುಜಸುಮಪರಾಗವ |
ನರಸಿಬಹ ಬಂಡುಣಿಯ ರಾಗವ |
ನೊರೆವೆನೇನದ ಕೊಳವಬಹುಳವನಾಂತ ಕೇರಳವ || ೩

ಎಲ್ಲಿನೋಡಿದೊಡಲ್ಲಿ ರಂಜಿಪ |
ಸಲ್ಲಲಿತನಗರಗಳು ಮತ್ತೆ |
ನ್ನೆಲ್ಲಿನೋಡಿದೊಡಲ್ಲಿ ತೋರುವದೇವನಿಳಯಗಳು ||
ಪುಲ್ಲನಾಭನ ಭಕ್ತಿಭಾಗ್ಯವ |
ನುಲ್ಲಸದೊಳಾಂತಿರುವ ಜನ |
ವೆಲ್ಲೆಲ್ಲಿಯುಂ ತುಂಬಿಹುದು ಸಿರಿಹೇರಳದ ಕೇರಳದೆ || ೪

ಈತೆರದೊಳಿರುತಿರ್ಪ ವಿಲಸತ್ |
ಖ್ಯಾತಿಯಾಂತಾ ಕೇರಳಾಖ್ಯದ |
ಭೂತಳವನಾಳುವ ಮಹೀಪತಿ ರಾಜಶೇಖರನು ||
ಪ್ರೀತಿಯಲಿ ನೃಪವರರಧರ್ಮದ |
ರೀತಿಯಂ ಪರಿಪಾಲಿಸುತ ರಿಪು |
ಜಾತವನು ಸಂಹರಿಸಿ ರಾಜಿಪನತುಳವೈಭವದೆ || ೫

ಸಕಲನಿಗಮಾಗಮಪುರಾಣ |
ಪ್ರಕರವನು ತಿಳಿತಿಳಿದು ಯಜನಾ |
ದ್ಯಖಿಳಕರ್ಮವನಿರತವಾಚರಿಸುತ್ತ ಶಾಂತತೆಯ ||
ಸುಕರವಾಗಿಯೆ ತಳೆದು ಹರಿಪದ |
ನಿಕಟದಲಿ ಮನವಿತ್ತ ಭೂಸೂರ |
ರಕುಟಿಲತ್ವದೆ ಮೆರೆದರಮಲಬ್ರಹ್ಮತೇಜದಲಿ || ೬

ರಾಜಿಸುವ ವರರಾಜಧರ್ಮದ |
ತೇಜವನು ಸಲಹುತ್ತ ನಿರ್ಜರ |
ರಾಜಸಮವೈಭವದೊಳಾರಾಜಿಸುತ ನಿತ್ಯದಲಿ ||
ರಾಜರಾಜನ ಪೋಲ್ವ ಸಿರಿಯನು |
ರಾಜಮೌಳಿಯ ದಯದೊಳಾಂತಾ |
ರಾಜಿಸುವ ರಾಜನ್ಯರಿರ್ದರು ರಾಜಧಾನಿಯಲಿ || ೭

ಹರಿಹರಧ್ಯಾನೈಕನಿಷ್ಠೆಯೋ |
ಳಿರುತ ನಿಜವಾಣಿಜ್ಯಮಾರ್ಗದಿ |
ದೊರೆತ ಲಾಭದಿ ತುಷ್ಟಿವಡೆಯುತ ದಾನಧರ್ಮದಲಿ ||
ಸುರರ ಭೂಸುರಕುಲವನರ್ಚಿಸಿ |
ತುರುಗಳನು ರಕ್ಷಿಸುತಲಿರ್ದರು |
ನಿರತವಂಶಾಚಾರತತ್ಪರಭೂಸ್ಪೃಶೋತ್ತಮರು || ೮

ಭೂಸುರರ ಭೂವರರ ವೈಶ್ಯರ |
ಶಾಸನವ ನಡೆಸುತ್ತ ಸರ್ವದ |
ವಾಸುದೇವಪದಾರವಿಂದವನೊಲಿದು ಭಜಿಸುತ್ತ ||
ದೇಶದಲಿ ಪಾದಜರು ಮೆರೆದಿರೆ |
ವಾಸವನ ಸಮವೆನಿಪ ಭೋಗವ |
ನಾ ಸರಿಲ್ಲದೆ ಪಡೆದು ಸುಖಿಸುತ್ತಿರ್ದನಾಭೂಪ || ೯

ಸಕಲಧರ್ಮಾವಳಿಯನತ್ಯು |
ತ್ಸುಕದೊಳಾಚರಿಸುತ್ತ ಸುಜನ |
ಪ್ರಕರಕತಿಶಯಸುಖವನೀಯುತ ರಾಜಶೇಖರನು ||
ನಿಖಿಲಲೋಕಾಧ್ಯಕ್ಷನೆನಿಸುವ |
ಲಕುಮಿಯೊಡೆಯನ ತೆರೆದೊಳೆಸೆದಿರೆ |
ಮುಕುತಿಗಾಸ್ಪದವೆನಿಸಿ ಕೇರಳ ನೆರೆ ವಿರಾಜಿಪುದು || ೧೦

ಇಂತೆಸೆವ ಕೇರಳದೊಳಾವಾ |
ಕಾಂತಚರಣೋದ್ಭೂತೆಯೆನಿಸುತ |
ಲಂತಕಾಂತಕನತುಲಜಟೆಯಿಂದಿಳಿದು ಶೋಭಿಸುವ ||
ಚಿಂತಿತಾರ್ಥಪ್ರದೆಯ ಗಂಗೆಯ |
ನಂತಮಹಿಮೆಯ ತಳೆದು ಪರಿವುದು |
ಸಂತತವು ಪೂರ್ಣತ್ವದಿಂ ಪೂರ್ಣಾಖ್ಯನದಿಯೊಂದು || ೧೧

ಘುಳುಘುಳುಧ್ವನಿವೆರೆಸಿಹರಿಯುತೆ |
ಸುಳಿಸುಳಿದು ಶೋಭಿಸುತೆ ಮಧ್ಯದೆ |
ತಳೆದಲೆಯವಾಃಕಣದೊಳತಿರುಚಿಯಾಂತು ಶೋಭಿಸುತೆ ||
ಪೊಳೆಪೊಳೆಯುತಲ್ಲಲ್ಲಿ ಮೌಕ್ತಿಕ |
ಥಳಥಳಿಸುವಂದದಲಿ ಪುಳಿನ |
ಸ್ಥಳಗಳಿರೆ ರಂಜಿಪುದು ಪುರ್ಣಾನದಿಯು ವಿಭವದಲಿ || ೧೨

ಆಧುನಿಯ ನಿಕಟದಲಿ ಪರಿಕಿಸ |
ಲಾದಿತೇಯರ ಗಿರಿಯು ಪೋಲುವ |
ಭೂಧರವು ತಪಸಿಗಳಿಗತಿಶಯಸೌಖ್ಯದಾಗರವು ||
ಸಾಧಿಸುವ ಯೋಗಿಗಳ ಚಿತ್ತಕೆ |
ಮೋದವನು ವಿರಚಿಸುವ ಗುಹೆಗಳ |
ತಾಧರಿಸಿ ರಂಜಿಪುದು ವರವೃಷಭಾಭಿಧಾನದಲಿ || ೧೩

ಸುಮನಸರಗಜದುಭಯ ಪಾರ್ಶ್ವದ |
ಘಮಘಮಿಪ ಮದಧಾರೆಯಂದದ |
ಲಮಮ ತೊರೆಯೈತಹುದು ವರಪರ್ವತದ ತುದಿಯಿಂದ ||
ಸುಮಪರಾಗವ ನುಣಲುಬಪ್ಪಾ |
ಭ್ರಮರಗಾನವು ಸೊಂಪನೀವುದು |
ಸುಮಸುವಾಸನೆವೆತ್ತ ತಂಬೆಲರಲ್ಲಿ ತೀಡುವುದು || ೧೪

ಕಾಲಕಾಲಕೆ ಬಂದು ಗಿರಿಯೊಳು |
ಕಾಲಕಾಲನ ಭಜಿಪ ಶರಣರ |
ಜಾಲದಿಂದಲೆ ಮೊರೆವ ಶಂಖಮೃದಂಗನಾದದಲಿ ||
ಸಾಲುಸಾಲಾಗಿರ್ಪ ದೀಪ |
ಜ್ವಾಲೆಯಲಿ ರಂಜಿಪುದು ಸತತಂ |
ಬಾಲಶಶಿಧರಮೌಳಿಯುನ್ನತ ಸದನಮಘಹನನ || ೧೫

ಅಚಲರಾಜಕುಮಾರಿಯುನ್ನತ |
ಕುಚಸುಕುಂಕುಮಲಿಪ್ತವಕ್ಷನು |
ಸಚಲವೃಷಭನನೇರಿ ಚಲಿಸುವುದುಚಿತಮಲ್ಲೆನುತ ||
ಅಚಲವೃಷಭನನೇರಿ ತಾನ |
ಲ್ಲಚಲನಾಗಿಹನೆಂಬ ತೆರದಿಂ |
ದಚಲಶಿಖರದೊಳಿರ್ದ ವಿಭವದೆ ಶಿವನುಮಾಸಹಿತ || ೧೬

ವರಗಿರಿಯ ತಪ್ಪಲಲಿ ಪರಿಯುವ |
ವರನದಿಯತೀರದಲಿ ಸಲೆ ಭೂ |
ಸುರರು ನೆಲೆಗೊಂಡಿರುವ ಕಾಲಟಿಯೆಂಬ ನಾಮಕದ ||
ಸುರುಚಿರದ ವಿಮಲಾಗ್ರಹಾರವು |
ಮೆರೆಯುತಿಹುದು ಸುಹೋಮಧೂಮದ |
ವರಸುಕೇತನಗಳು ತಾಳ್ದ ನಿಕೇತನಂಗಳಲಿ || ೧೭

ವರತಪಸ್ಸ್ವಾಧ್ಯಾಯನಿಷ್ಠರು |
ಪರಮಶಾಂತರು ದಾಂತಿಯುಕ್ತರು |
ನೆರೆಚತುರ್ದಶವಿದ್ಯೆಗಳನರಿತಿರ್ಪಪಂಡಿತರು ||
ಹರಪದಾಂಬುಜ ಭಕ್ತಿಯುಕ್ತರು |
ವರಜಿತೇಂದ್ರಿಯರೆನಿಸಿ ಹಿಂಸಾ |
ಪರತೆಯಿಲ್ಲದೆ ರಂಜಿಪರು ಕಾಲಟಿಯಭೂಸುರರು || ೧೮

ಶ್ರುತಿವಿಹಿತಕರ್ಮಗಳನೆಸಗುವ |
ಪತಿಯ ಪರಿಚರ್ಯಗಳನೆಸಗುತ |
ಸತತ ಪತಿಯಾಜ್ಞೆಯನು ಶಿರದೊಳಗಾಂತು ವಿರಚಿಸುತ ||
ಹಿತವನೆಸಗುತ ಬಂಧುನಿಚಯಕೆ |
ಸುತರನೋವುತ ನೀತಿಮಾರ್ಗದೆ |
ಗತಿಯುಪಡೆದಿಹ ಸತಿಯರಿರ್ದರು ಕಾಲಟಿಯೊಳಾಗ || ೧೯

ಮೆರೆವಕಾಲಟಿಯೊಳಗೆ ಭೂಮಿ |
ಸುರನು ವಿಬುಧಪ್ರವರ ಪಾವನ |
ತರನು ಬಹುಶಾಸ್ತ್ರಜ್ಞನಿಚಯದೊಳಧಿಕನೆಂದೆನಿಸಿ ||
ಸ್ಮರಹರಾಂಘ್ರಿಸರೋಜಸೇವಾ |
ಪರನೆನಿಪ ವಿದ್ಯಾಧಿರಾಜನ |
ವರತನಯ ರಾಜಿಪನು ಶಿವಗುರುವೆಂಬನಾಮದಲಿ || ೨೦

ಸಕಲಸತ್ಕರ್ಮಗಳ ನಿತ್ಯವು |
ಸುಕರಮೆನಲೆಸಗುತ್ತಲಿರ್ದನು |
ಸಕಲಭೂತದಯಾಪರನು ಪರಹಿತನು ನಿಷ್ಕಾಮಿ ||
ಅಕುಟಿಲನು ಪಿತೃದೇವತಾರಾ |
ಧಕನು ಗಾರ್ಹಸ್ಥ್ಯದಲಿ ರಂಜಿಪ |
ಬಕುತಿಯಿಂದತಿಥಿಗಳ ನಾರಾಧಿಸುತ ಶಿವಗುರುವು || ೨೧

ಸತಿಯರುಂಧತಿಯಂತೆ ಶುಚಿ ಹರಿ |
ಸತಿಯವೊಲು ಸೌಭಾಗ್ಯ ವರಪಾ |
ರ್ವತಿಯವೊಲು ಮಂಗಳತೆ ವಾಣಿಯತೆರದೆ ವಿತರಣೆಯು ||
ಪತಿಭಜನೆಯನಸೂಯೆಯಂದದಿ |
ಸತತರಂಜಿಪ ಸಕಲ ಸದ್ಗುಣ |
ವತಿಯೆನಿಸಿ ರಂಜಿಪಳು ಶಿವಗುರುಭಾರ್ಯೆಯಾರ್ಯಾಂಬೆ || ೨೩

ಈತಲೋದರಿಯೊಡನೆ ಶಿವಗುರು |
ವೀತಿಹೋತ್ರಾಂಬಕನ ಭಜಿಸುತ |
ಭೂತಳದಿ ರಂಜಿಸುವ ಸಾಕ್ಷಾತ್ ಬ್ರಹ್ಮನಂದದಲಿ ||
ಖ್ಯಾತಿಮಿಗೆ ಗಾರ್ಹಸ್ಥ್ಯಧರ್ಮ |
ವ್ರಾತಗಳ ನೆಡೆವಿಡದೆ ನಡೆಸುತ |
ತೀತಸುಖದಿಂದಿರ್ದನುನ್ನತಪುಣ್ಯತಮನೆನಿಸಿ || ೨೪

ಇಂತು ದಂಪತಿವರರು ಸಂತತ |
ಸಂತಸದೊಳತಿಥಿಗಳ ಪೂಜಿಸು |
ತಂತರಂಗದೊಳಂತಕಾಂತಕನತುಳಚರಣವನು ||
ಚಿಂತಿಸುತ ಸಂತಾನಮಿಲ್ಲದ |
ಚಿಂತೆಯಲಿ ಕೊರಗುತ್ತಲಿರ್ವರು |
ಕಂತುಹರವೃಷಭಾದ್ರಿನಾಥನ ಪೂಜಿಸಿದರೊಲಿದು || ೨೫

ದಿನಪನುದಯಿಪಮುನ್ನವೇಳುತ |
ದಿನದಿನಂಪ್ರತ್ಯೂಷಕರ್ಮವ |
ನನುನಯದೊಳಾಚರಿಸಿ ಗಿರಿಯನು ಸಾರಿ ಭಕ್ತಿಯಲಿ ||
ವಿನಯದಿಂ ಗಿರಿಜಾಧಿನಾಥನ |
ನನಘನನು ಸುಮಗಂಧ ಮೊದಲಾ |
ದನುಪಮಿತಸಾಧನದಿನರ್ಚಿಸಿ ನಮಿಸಿ ನುತಿಸುವರು || ೨೬

ಹರನೆ ಗಿರಿಜಾವರನೆ ಸರ್ವೇ |
ಶ್ವರನೆ ಗಂಗಾಧರನೆ ಕರುಣಾ |
ಕರನೆ ಶಶಿಶೇಖರನೆ ಜಗದುದ್ಧರನೆ ಶಂಕರನೆ ||
ಶರಣಜನವತ್ಸಲನೆ ಭವಭಯ |
ಹರನೆ ಗಜಮುಖಪಿತನೆ ಶಶಧೃತ |
ಕರನೆ ಕರುಣಿಸು ಕರುಣಿಸೈ ಸಂತಾನಭಾಗ್ಯವನು || ೨೬

ಜಯ ಪರಾತ್ಮ ಪರೇಶ ಶುಭಕರ |
ಜಯ ಜಯದ್ವಿಖ್ಯಾತ ಪರತರ |
ಜಯಜಯ ಶ್ರುತಿಮೌಳಿಮಂಡಿತ ಪಾದಪದ್ಮಯುಗೆ ||
ಜಯ ಸುರಾರ್ಚಿತಚರಣಕಮಲನೆ |
ಜಯ ಪರಂಜ್ಯೋತಿಸ್ವಸೂಪನೆ |
ಜಯಜಯ ಶ್ರೀಕಂಠಕರುಣಿಸು ಪುತ್ರಭಾಗ್ಯವನು || ೨೭

ಎಂದು ನಿತ್ಯವು ನುತಿಸಿ ಶಿವನನು |
ಸಂದಭಕ್ತಿಯೊಳೆರಗಿ ತಮ್ಮಯ |
ಮಂದಿರವ ಸಾರುತ್ತ ಬಹುವಿಧಭಕ್ಷ್ಯಭೋಜ್ಯಗಳ ||
ಬಂಧುಜನಗಳಿಗಿತ್ತು ತೃಪ್ತಿಯ |
ನೊಂದಿಸುತ ವಿನಯದಲಿ ವಿಪ್ರರ |
ವಂದಿಸುತಲಾಶಿಷವನೊಂದುತ ನಲಿವರವರಾಗ || ೨೮

ಈಪರಿಯಲನವರತ ಶಿವನಂ |
ತಾಪಸರು ಭಜಿಸುತ್ತಲಿರುತಿರ |
ಲಾಪಿನಾಕಿಯು ಬಳಿಕಲಿವದಿರತಪಕೆ ಮನಮೆಚ್ಚಿ ||
ತಾಪವನು ಪರಿಹರಿಸುತಿಷ್ಟವ |
ಲೋಪವಿಲ್ಲದೆ ಸಲಿಸಲೋಸುಗ |
ರೂಪುದೋರಿದ ವಿಪ್ರರೂಪದೊಳೊಲಿದು ಕನಸಿನಲಿ || ೨೯

ಧರಿಸಿ ಧೌತಾಂಬರವ ತೇಜೋ |
ಭರಿತಫಾಲದೆ ವರವಿಭೂತಿಯು |
ಧರಿಸಿ ಕೊರಳೊಳು ಯಜ್ಞಸೂತ್ರವನಕ್ಷಮಾಲೆಯನು ||
ಪರಿರಚಿತ ರುದ್ರಾಕ್ಷಮಾಲಾ |
ಭರಣನಾಗಿರೆ ಕಂಡು ಭೂಸುರ |
ವರನೆನುತ ಶಿವಗುರುವು ನಮಿಸಿದನಧಿಕಭಕ್ತಿಯಲಿ || ೩೦

ಎರಗಿರಲು ಭಕ್ತನನು ಕಂಡಾ |
ಪುರಹರನು ಕರುಣದಲಿ ತನ್ನಯ |
ಕರದೊಳಾತನ ಶಿರವಪಿಡಿದೆತ್ತುತಲೆ ನ್ನುಡಿದಡವಿ ||
ಚರಿಸುತಿಹೆ ನೀನೇಕೆ ತಪವನು |
ಹರನ ಕುರಿತೆಲೆ ವಿಪ್ರ ನೀನದ |
ನೊರೆದೊಡಾಂ ಸಲಿಸುವೆನು ನಿನಗೆಂದೆನುತ ಶಿವನುಡಿದ || ೩೧

ಎಂದಮಾತನು ಕೇಳುತತುಲಾ |
ನಂದವನು ತಾಳುತ್ತ ವಿಪ್ರನಿ |
ಗೆಂದ ನಾಂ ಪುತ್ರಾರ್ಥಿಯಾಗಿಯೆ ಚಂದ್ರಮೌಳಿಯನು ||
ಅಂದದಿಂ ಭಜಿಸುವೆನು ಕೇಳೆನ |
ಲಂದು ವಿಪ್ರನು ಮತ್ತೆ ನುಡಿದನು |
ಮಂದಹಾಸಮುಖಾಬ್ಜನಾಗುತ ಶಿವಗುರುವಿನೊಡನೆ || ೩೨

ಹರಪದಾಂಬುಜಯುಗ್ಮಸೇವಾ |
ಪರನೆನಿಸಿ ರಂಜಿಸುತ ಮುತ್ತಾ |
ಹರನ ತೇಜವನಾಂತು ಸಲೆವಿಖ್ಯಾತನೆಂದೆನಿಸಿ ||
ಹರೆಯದೊಳಗಳಿವೊರ್ವಮಗನನು |
ವರಿಸುವೆಯೊ ದೀರ್ಘಾಯುವಂತರ |
ಮರುಳರಾಗಿಹ ಸುತರ ಪಡೆವೆಯೊ ಹೇಳುನೀನೆಂದು || ೩೩

ಎಂದನಾತನು ಕೇಳಿ ಶಿವಗುರು |
ವಂದುನುಡಿದನು ವಿಪ್ರಕೇಳ್ಳೈ |
ಮಂದಮತಿಗಳ ಪಡೆದು ಪಡೆಯುವ ಸಿದ್ಧಿಯೇನಿಹುದು ||
ಸಂದಯುಶವನು ಪಡೆವನೊಬ್ಬನೆ |
ಕಂದಸಾಕೆನಲದನು ಕರುಣಿಸು |
ತಂದುತಾ ಶ್ರೀಕಂಠನಂತರ್ಧಾನ ಪರನಾದ || ೨೪

ಸಂಧಿ ಮೂರಕ್ಕೆ ಪದ್ಯ ೮೪ ಕ್ಕೆ ಮಂಗಳ.



# ನಾಲ್ಕನೆಯ ಸಂಧಿ.

ಸೂಚನೆ || ಸುರವರಾರ್ಜಿತಚರಣಕಮಲನು !
ಪರಮಪಾವನಶಿವನು ಶಿವಗುರು |
ತರುಣಿಯಲಿ ಜನಿಯಿಸಿದನಮರಪ್ರತತಿಸಂಭ್ರಮಿಸೆ ||

ಕೇಳಿರೈ ಭೃಗವಂಶಜಾತರು |
ಶೂಲಧರನಾ ಸ್ವಪ್ನಮುಖದೆ ವಿ |
ಶಾಲವಾಗಿಯೆ ಪೇಳ್ದ ವಾರ್ತೆಯನಾಲಿಸುತಲಾಗ ||
ಶೀಲಗುಣನಿಧಿ ಸಂತಸದೆ ಶಶಿ |
ಮೌಳಿಯಂ ಧ್ಯಾನಿಸುತಲೆದ್ದನು |
ಕೂಲಳೆನಿಸುವ ಸತಿಯು ಕರೆದಿಂತೆಂದ ವಿನಯದಲಿ || ೧

ವನಿತೆ ಕೇಳ್ಗುಣವತಿಯೆ ಶಂಭುವು |
ವಿನುತ ಭೂಸುರರೂಪಿನಿಂದಲೆ |
ಕನಸಿನೊಳಗೈತಂದು ದರುಶನವಿತ್ತು ಕರುಣದಲಿ ||
ತನಯನೊರ್ವನು ನಮಗೆ ಜನಿಯಿಪ |
ನೆನುತ ವರವಿತ್ತಿಹನು ನಮ್ಮಯ |
ಘನತಪಕೆ ಫಲವಾಯ್ತು ನಾವತಿಧನ್ಯರಹೆವೆಂದ || ೨

ಎಂದು ಶಿವಗುರುವರುಹೆ ಕೇಳ್ದಾ |
ನಂದ ಬಾಷ್ಪಗಳುದುರೆ ನೇತ್ರಗ |
ಳಿಂದ ಸಾಧ್ವೀಮಣಿಯು ಪುಳುಕಿತೆಯಾಗುತಡಿಗಡಿಗೆ ||
ವಂದಿಸುತ ಪತಿಪದಕೆ ಕರುಣಾ |
ಸಿಂಧುವಲ್ಲವೆ ಹರನು ಭಕ್ತರ |
ದಂದುಗವ ಪರಿಹರಿಸಿ ರಕ್ಷಿಪನೆಂದಳಾರ್ಯಾಂಬೆ ||

ನಸುನಗೆಯೊಳಹುದೆನುತ ಶಿವಗುರು |
ಬೆಸಸಿದನು ತತ್ಸತಿಗೆ ನಾವಾ |
ಶಶಿಧರನ ಮೆಚ್ಚಿಸಲಿಕೆಸಗಿದತಪಕೆ ಫಲಮೆನಿಸಿ ||
ಎಸಗಬೇಹುದು ಹೋಮಕರ್ಮವ |
ವಸುಧೆಯುಮರರಿಗೌತಣಂಗಳ |
ನೊಸೆದು ವಿಪ್ರರ ಹರಕೆಗಳ ಕೈಗೊಳ್ಳಬೇಕೆನುತ ||

ಮುನಿಪಕೇಳ್ಸತಿಪತಿಗಳಿರ್ವರು |
ಮನದಿ ಸಂತಸವಾಂತು ಶಿವಪದ |
ವನಜವನು ಜಾನಿಸುತಲುನ್ನತ ಶೈವಮಂತ್ರದಲಿ ||
ಅನಲಗಾಹುತಿಯಿತ್ತು ಪೂಜಿಸಿ |
ವಿನಯದಿಂ ವಿಪ್ರರನು ಬಹುವಿಧ |
ವೆನಿಪ ಭೋಜ್ಯಗಳಿಂದ ನೆರೆ ಸಂತುಷ್ಟಿಪಡಿಸಿದರು ||

ಸಂದ ಮೃಷ್ಟಾನ್ನದಲಿ ತುಷ್ಟಿಯ |
ನೊಂದಿರುವ ವಿಪ್ರರಿಗೆ ದಕ್ಷಿಣೆ |
ಗಂಧಮಾಲ್ಯಾದಿಗಳನಿತ್ತುಪಚರಿಸಿ ವಂದಿಸುತ ||
ನಿಂದು ಕರಗಳಮುಗಿದು ಶಿವಗುರು |
ವಿಂದುಮೌಳಿಯು ತನಗೆ ಕರುಣಿಸಿ |
ದಂದವನು ಬಿನ್ನವಿಸೆ ಕೇಳುತಲಾಗ ಭೂಸುರರು ||

ಶಿವಗುರುವೆ ಲಾಲಿಪುದು ಪೂರ್ವದ |
ಭವದೊಳಗೆ ಶಂಕರಪದಾಬ್ಜವ |
ನವಿರಳದ ಭಕ್ತಿಯಲಿ ನೀಂ ಸೇವಿಸಿದಕತದಿಂದೆ ||
ಶಿವನು ಮೆಚ್ಚುತ ಕರುಣದಿಂದಲಿ |
ಕುವರನನು ದಯೆಗೈದನೆನ್ನುತ |
ಲವನಿಯಮರರು ಹರಸಿ ಬೀಳ್ಕೊಂಡರು ಸರಾಗದಲಿ || ೭

ಬಳಿಕಲಾಸತಿಪತಿಗಳಿರ್ವರು |
ನಲವಿನಿಂದಾ ಹೋಮಶೇಷವ |
ಮೆಲುತಲಿರಲಾ ಸಚ್ಚಿದಾನಂದೈಕಮಯರಸವು ||
ಸಲೆ ಘೃತದಿಬೆರೆದಿರ್ದು ಬಾಡಬ |
ಕುಲವರೇಣ್ಯನ ಗರ್ಭದೇಶವ |
ನೊಲವಿನಿಂ ಸಾರಿದುದು ಪುಣ್ಯಮದೆಂತೊ ಭೂಸುರನ || ೮

ಹರನ ನೆರೆ ಧರಿಸುತ್ತ ಚರಿಸುವ |
ವರವೃಷಾಧಿಪನಂತೆ ಗಿರಿಜಾ |
ವರನ ತೇಜವನಾಂತು ತನ್ಮುನಿವರನು ನೋಳ್ಪರಿಗೆ ||
ತರಣಿಕೋಟಿಸಮಾನತೇಜವ |
ಧರಿಸಿ ರಂಜಿಸುತಿರಲು ಮಾಸಗ |
ಳೆರಡು ಕಳೆದವು ಕೇಳು ಶೌನಕ ಲೀಲೆಯನು ಹರನ || ೯

ಇರುತಿರಲು ಬಳಿಕೊಂದುದಿನವಾ |
ಸರಸಿಜಾಕ್ಷಿಯ ಗರ್ಭದೇಶದೊ |
ಳಿರಿಸಿದನು ಪೊತ್ತಿರ್ದ ಶಿವತೇಜವನು ಶಿವಗುರುವು ||
ಧರಿಸಿದಳು ಗರ್ಭವನು ಶಿವಗುರು |
ತರುಣಿಯೆನೆ ಬಾಂಧವರು ಸಮ್ಮುದ |
ವೆರಸಿಕೊಂಡಾಡಿದರು ಪುಣ್ಯವನಾ ಮಹೀಸುರನ || ೧೦

ವರವಿರಿಂಚಿಯುನೊಳಗೆ ತಾಳಿಹ |
ಸರಸಿಜದ ಕುಟ್ಮಲದ ತೆರದೊಳು |
ಹರಿಯು ತನ್ನೊಳಗಾಂತು ರಂಜಿಸುವಿಂಗಡಲ ತೆರದೆ ||
ಪರಶಿವಾಂಶವ ಗರ್ಭದೇಶದಿ |
ಧರಿಸಿ ಸತಿಯಾರ್ಯಾಂಬೆ ಸಂತತ |
ಹರುಷವನು ಬೀರುತ್ತಲಿರ್ದಳು ಬಾಂಧವರಮನಕೆ || ೧೧

ತೋರಿದುದು ಹೃತ್ತಿಮಿರ ಮುಖ ಬಿಳು |
ಪೇರಿತಂಗನೆಗಾಗಲಲಸಿಕೆ |
ದೋರಿದುದು ಗಂಡಸ್ಥಳದಿ ಕಂಡವು ಬೆಮರಬಿಂದುಗಳು ||
ನಾರಿಯರು ತಂದೀಯೆ ಸತಿಗಾ |
ಹಾರ ರುಚಿಸದು ಕೇಳು ಮುನಿಪತಿ |
ನಾರಿ ಬಳಲುತ್ತಿರ್ದಳಭಿನವಗರ್ಭದೇಳ್ಗೆಯಲಿ || ೧೨

ಅರಳಿದಂಬುಜದರಳ ಸನಿಹದೆ |
ಮಿರುಗುತಿಹ ಸಂಪಗೆಯ ಕಾಣುತ |
ಉರೆ ಬೆದರಿ ಹತ್ತಿರಕೆ ಸಾರದೆ ದೂರದಲಿ ನಿಂದು ||
ನೆರೆ ನಿರೀಕ್ಷಿಪನೆನುತಲಾರಡಿ |
ಸರಸಿಜದ ಕುಟ್ಮಲವನೇರಿಹ |
ತೆರದಲಾಕೆಯ ವರಕುಚಾಗ್ರದೆ ಕರ್ಪುಕಾಣಿಸಿತು || ೧೩

ಬಡತನದಿ ನಡುಗುತ್ತಲಿರ್ದಾ |
ನಡುವು ಬಡತನಕಲಸಿ ತಾನಾ |
ಜಡಧಿಶಯನನ ವಕ್ಷದೇಶದೊಳನವರತಮಿರುವ ||
ಜಡಧಿಜಾತೆಯ ನೋಡಲೋಸುಗ |
ತಡೆಯದೆದ್ದುದೊ ವರಪಯೋಧಿಯ |
ಕಡೆಗೆನಲು ನಡು ಗುರುತ್ವದೊಳೆಸೆದುದಾ ಸತಿಯ || ೧೪

ಧವಳಪಕ್ಷದ ಶಶಿಯತೆರದೊಳು |
ಶಿವಗುರುವಿನಂಗನೆಯಗರ್ಭದೆ |
ಶಿವನು ಬಳೆಯುತ್ತಿರ್ದನಾವಗ ತನ್ನ ನೆನೆವವರ ||
ಭವವ ಪರಿಹರಿಸುವಡೆ ತಾನಾ |
ಭವದೊಳಿಹ ಸುಖದುಃಖಗಳನನು |
ಭವಿಸಿನೋಡುವನೆಂಬತೆರದೊಳಗೆಂದನಾ ಸೂತ || ೧೫

ವನಿತೆ ನಿದ್ರೆಯೊಳಿರಲು ತನ್ನನು |
ವನಜಭವ ಮೊದಲಾದ ಸುರತತಿ |
ವಿನಯದಿಂ ಸೇವಿಸುತ ಜಯಜಯರವದಿ ನುತಿಪಂತೆ ||
ಕನಸಿನಲಿ ಕಾಣುವಳು ಮೇಣಾ |
ವನಜಸಖನುದಯದಲಿ ನೋಡಲು |
ಸನಿಹದಲಿಕಾಣುವವು ಮಂದಾರದಿ ಸುಮನಿವಹ || ೧೬

ಕಂಡು ಸುಮಗಳ ಮನಸದಲಚ್ಚರಿ |
ಗೊಂಡು ಬಾಂಧವರೆಲ್ಲ ಮುದದಲಿ |
ಖಂಡಪರಶುವಿನತುಲಮಹಿಮೆಯಿದೆಂದು ಕೊಂಡಾಡೆ ||
ಪಂಡಿತಾಗ್ರಣಿಯೆನಿಪ ಶಿವಗುರು |
ಖಂಡಶಶಿಶೇಖರನ ನೆನೆಯುತ |
ಖಂಡಹರುಷದೊಳೆಸಗಿದನು ಸೀಮಂತಕರ್ಮವನು || ೧೭

ಶ್ರುತಿತತಿಯನುದ್ಧರಿಸಿ ನೆರೆಸೌ |
ಗತರನೆಲ್ಲರಮುರಿದು ಬಹುದು |
ರ್ಮತಿಗಳಹ ಪಾಷಂಡಮತವಾದಿಗಳ ತಾಂ ಗೆಲಿದು ||
ಅತಿಶಯದಲ ದ್ವೈತತತ್ವವ |
ನತಿಹಿತದಿ ಬೋಧಿಸುವೆನೆಂದಾ |
ಸಿತಕಿರಣಶೇಖರನು ಮೆರೆದನು ಸತಿಯಗರ್ಭದಲಿ || ೧೮

ಅದಿತಿ ವರವಾಮನನ ಕೌಸಲೆ |
ಪದುಳದಿಂ ರಾಮನನು ಗಿರಿಜೆಯು |
ಮುದದಿ ಷಾಣ್ಮಾತುರನ ಪಡೆದಂತಾ ಮಹಾಸತಿಯು ||
ವಿದಿತವಹ ವಿಭವಾಖ್ಯವರ್ಷದ |
ಸದಮಲದ ವೈಶಾಖಶುದ್ಧದ |
ಲಧಿಕತರಪಂಚಮಿಯೊಳೆಸೆವಭಿಜಿನ್ಮುಹೂರ್ತದಲಿ ||

ತರಣಿ ಮೇಷದೆ ಸೌಮ್ಯಶುಕ್ರರು |
ವರವೃಷಭರಾಶಿಯೊಳು ಕಟಕದೆ |
ಗುರುವು ತುಲೆಯೊಳು ತರಣಿಜನು ಮಕರದಲಿ ಧರಣಿಜನು ||
ಇರಲು ಕರ್ಕಾಟಕದಲಗ್ನದೊ |
ಳುರುನಿಶಾಕರನೆಸೆಯಲಾರ್ದ್ರೆಯೊಳ್ |
ವರಕುಮಾರನ ಪಡದಳಬುಜಭವಾದಿಗಳುನಲಿಯೆ ||

| | | | |
|---|---|---|---|
| | ರವಿ | ಬುಧ ಶುಕ್ರ | ಚಂದ್ರ |
| | **ಶ್ರೀ ಶಂಕರಭಗವತ್ಪಾದಾಚಾರ್ಯಾವತಾರ. — ರಾಶಿಕುಂಡಲಿ —** | | ಗುರು ಲಗ್ನ |
| ಕುಜ | | | |
| | | ಶನಿ | |

ಸುರರು ಪೂಮಳೆಗರೆದರಭ್ರದೆ |
ತರುನಿಚಯ ಫಲಗಳಲಿರಂಜಿಸಿ |
ತೊಲವುಮಿಗೆ ಶಾಂತತೆಯು ತುಂಬಿತು ಧರೆಯೊಳೆಲ್ಲೆಡೆಯು ||
ಕೆರೆತೊರೆಗಳುಕ್ಕಿದವು ಸಲೆ ಭೂ |
ಸುರರು ಸಂತೋಷಿಸಿದರಾಗಲು |
ಹರನ ಜನನೋತ್ಸವದಿ ಜಯರವತುಂಬಿತಂಬರವ || ೨೧

ನಡುಗಿದರು ನಾಸ್ತಿಕರು ಭಯದಿಂ |
ಗಡಗಡನೆ ದುರ್ವಾದಿಗಳಿಗೆದೆ |
ಯೊಡೆದುಪೋದುದು ಸೌಗತರದುಸ್ತಂತ್ರಮುಡಗಿದುದು ||
ಕಡುಬೆದರಿ ಕಾಪಾಲಿಕರಪಡೆ |
ಯಡಗಿಪೋದುದು ದುರ್ಮದಾಂಧರು |
ಪೊಡವಿಯನು ತಾವ್ಬಗೆದುಹೊಕ್ಕರು ಮೃಡನ ಜನನದಲಿ || ೨೨

ತನಯನುದಯಿಸೆ ಕೇಳಿ ಶಿವಗುರು |
ತನುಪುಳಕತಲೆದೋರಿ ಶಿವಪದ |
ವನಜವನು ನೆನೆಯುತ್ತ ಶಿಶುವನು ಕಂಡು ಹರ್ಷಿಸುತ ||
ಮನದಲುಬ್ಬುತ ಹರ್ಷಬಾಷ್ಪದಿ |
ನೆನೆದು ನದಿಗೈತಂದು ಮಿಂದನು |
ಘನತರದ ಸಂಭ್ರಮದಿ ಪೊಕ್ಕನು ಮತ್ತೆ ಮಂದಿರವ || ೨೩

ಮಂದಿರವ ಸಾರುತ್ತ ಬಾಂಧವ |
ವೃಂದವನು ಕರೆಯಿಸುತ ವಿಪ್ರರಿ |
ಗೆಂದು ವಂದಿಸಿ ರಚಿಸಿದನು ವಿಧ್ಯುಕ್ತಕರ್ಮಗಳ ||
ಅಂದವೆನೆದಾನಗಳನೆಸಗುತ |
ಲಿಂದುಧರನ್ಸಿಗೆ ಜಾತಕರ್ಮವ |
ಸಂದಸಂಭ್ರಮದಿಂದಲೆಸಗಿದ ಭೂಸುರೋತ್ತಮನು || ೨೪

ಶಿರದಿ ಚಂದ್ರನರೇಖೆ ಶಿಶುವಿನ |
ಕರದಿ ಶೂಲದಚಿನ್ಹೆ ಬಾಲಕ |
ನುರದಿ ತೋರ್ಪುದು ಸರ್ಪಮಾಲೆಯರೇಖೆ ವಿದಿತಮೆನೆ ||
ಮೆರೆವ ಫಾಲದಿ ನೇತ್ರಚಿನ್ಹೆಯು |
ವರಸುಕಂಠದಲಸಿತವರ್ಣವು |
ನೆರೆ ವಿರಾಜಿಸುತಿರ್ದುವಾ ಬಾಲಕನ ದೇಹದಲೀ || ೧೫

ಬೆಳಿಯುತಿರ್ದನು ಶಿವನು ವಿಪ್ರನ |
ನಿಳಯದಲಿ ಶಿಶುವಾಗಿ ಸತಿಯರು |
ಬಳಸಿ ರಕ್ಷೆಯನೆಸಗುತಿರ್ದರು ಲೋಕರಕ್ಷಕಗೆ ||
ತೊಳಲುತಿಹ ನಿಗಮಾಳಿಗೊಮ್ಮೆಯು |
ನೆಲೆಯ ತೋರದ ಪರಮಚಿನ್ಮಯ |
ನೊಲವಿನಿಂ ನೆಲೆಯಿಸಿದ ಭೂಸುರವರ್ಯನಾಲಯದೆ || ೧೬

ಇರುತಿರಲ್ ಬಳಕೊಂದುದಿನವಾ |
ಹರನು ನಿರ್ಗುಣನೆಂಬ ಮಹಿಮೆಯ |
ತೆರನ ತೋರಲದೃಶ್ಯನಾದನು ಸೂತಿಕಾಗೃಹದೆ ||
ತರಳನನು ಕಾಣದಲೆ ವನಿತೆಯ |
ರುರುಭಯದಲರಸುತ್ತಲಿರ್ದರು |
ಪರಮಯೋಗಿಯು ಬೊಮ್ಮವನು ತಾನರಸುವಂದದಲಿ || ೧೭

ಅರಸಿಕಾಣದೆ ತೊಳಲಿಬರುತಿರೆ |
ತರಳೆಯರು ಶಿವಗುರುವು ಭಯದಿಂ |
ದಿರಲು ಬಂದನು ವಿಪ್ರನೊಬ್ಬನು ಭೂಸುರಾಲಯಕೆ ||
ಇರದೆ ಕೂಶ್ಮಾಂಡವನು ಯಾಚಿಸಿ |
ಕರದಿಮುಟ್ಟಲು ಬಿರಿದುದದರಿಂ |
ಹೊರಗೆಬಂದನು ಬಾಲನಾಶ್ರಿತಪಾಲ ಗುಣಮಾಲ || ೧೮

ಧರೆಯ ಸಚರಾಚರದೊಳಾತನೆ |
ಭರಿತನಾಗಿಹನೆಂಬ ತೆರನನು |
ಹರನು ತೋರಿದನಿಂತು ಬಾಂಧವರತುಲಹರ್ಷದಲಿ ||
ತರಳದೊರಕಿದನೆಂದು ಶಿಶುವಿಗೆ |
ಪರಿಪರಿಯ ರಕ್ಷೆಗಳ ನೆಸಗಲು |
ಪರಶಿವನು ಬಳೆಯುತ್ತಲಿರ್ದನು ವಿಪ್ರಗೇಹದಲಿ || ೨೯

ದಿವಸ ಹನ್ನೊಂದಾಗೆ ತನ್ನಯ |
ಕುವರನಿಗೆ ಮಜ್ಜನವ ಮಾಡಿಸು |
ತವಿರಳೋತ್ಸವದಿಂದ ಲೆಸಗಿದ ನಾಮಕರಣವನು ||
ಶಿವನು ದಯೆಯಿಂದಿತ್ತ ಶಿಶುವಿಗೆ |
ತವಸಿಯಿಟ್ಟನು ಶಂಕರಾಖ್ಯೆಯ |
ನವನಿಯಮರರು ತುಷ್ಟಿಪಡೆದರು ದಾನಮಾನದಲಿ || ೩೦

ಅಂದಿನಿರುಳೊಳು ನೆರೆದು ಸತಿಯರು |
ಸಿಂಧುರಾಸ್ಯನ ನೊಲಿದುಪೂಜಿಸಿ |
ಚಂದದಿಂ ಕಟ್ಟಿದರು ತೊಟ್ಟಿಲನಂದು ವಿಭವದಲಿ ||
ಇಂದುಧರನಂಶಜನ ಮಲಗಿಸು |
ತಿಂದುಮುಖಿಯರು ಮೆಚ್ಚಿಪೊಗಳುತ |
ಲಂದದಿಂ ಜೋಗುಳವ ಪಾಡುತಲಿರ್ದರತಿಮುದದೆ || ೩೧

ಹರನೆ ಜೋಜೋ ಪರಮಪಾವನ |
ಚರಿತ ಜೋಜೋ ಭುವನವಂದಿತ |
ಚರಣ ಜೋಜೋ ಪಾವಕಾಂಬಕ ಭಕ್ತವತ್ಸಲನೆ ||
ಪುರಮಥನ ಜೋ ಫಾಲನೇತ್ರನೆ |
ಪರಮತೇಜೋಭರಿತ ಜೋಜೋ |
ಸುರವರಾರಾಧಿತನೆ ಜೋಜೋ ಶಿವನೆ ಜೋ ಜೋ ಜೋ || ೩೨

ಇಂತು ಜೋಗುಳಗಳನು ಪಾಡುತೆ |
ಕಂತುಹರನನು ಪೊಗಳುತಿರಲಾ |
ಕಾಂತೆಯರು ವರನೀಲಕಂಠನ ಪಾದಪದ್ಮವನು ||
ಸಂತಸದಿ ತಾಸೇವೆಗೈಯಲ |
ನಂತಬಂದನು ಶಿವನಸನಿಹಕೆ |
ಕಾಂತೆಯರು ಬೆದರಿದರು ಭುಜಗನ ಬರವ ಕಾಣುತಲಿ || ೩೩

ಉರಗನನು ಕಾಣುತ್ತ ಸತಿಯರ |
ನೆರವಿ ಕಡುನಡನಡುಗಿ ತೊಟ್ಟಿಲ |
ತರಳನಿಗೆ ಗತಿಯೇನು ಕೆಟ್ಟೆವೆ ಶಿವಶಿವಾಯೆನುತೆ ||
ಹರುಷಗೆಟ್ಟಳಲುತ್ತಲಿರಲಾ |
ಹರನ ಕೊರಳೊಳಗಿರ್ದ ಭುಜಗನು |
ತೆರಳಿದನು ರುದ್ರಾಕ್ಷಿಮಾಲೆಯು ಗಳದೆ ರಂಜಿಸಿತು || ೩

ಬಳಿಕಲದ ಕಾಣುತ್ತಮುದದಲಿ |
ಲಲನೆಯರು ಶಂಕರನ ಸನಿಹಕೆ |
ಘಳಿಲನೈತಂದೆತ್ತಿಕೊಂಡರು ನಾಗಭೂಷಣನ ||
ಲಲಿತಕಾಯನನೊಲಿದು ತಾಯಿಗೆ |
ಲಲನೆಯರು ನೀಡುತ್ತ ತಮ್ಮಯ |
ನಿಳಯವನು ಸಾರಿದರು ಪೊಗಳುತ ಶಿಶುವರೇಣ್ಯನನು || ೩

ಶಿವಗುರುವು ತನ್ನಾತ್ಮಜಾತನ |
ನವಿರಳಿದ ಸಂಭ್ರಮದೊಳೀಕ್ಷಿಸು |
ತವನಿಯಲಿ ತಾನಲ್ತೆ ಧನ್ಯನು ಮಾನ್ಯನೆಂದೆನುತ ||
ಯುವತಿಯೂರುವಿನಿಂದಬಾಲನ |
ತವಕದಿಂ ತಾನೆತ್ತಿಕೊಂಬನು |
ಭುವನನಾಥನ ಮುಖವ ಚುಂಬಿಸಿ ಮತ್ತೆ ನಲಿಯುವನು || ೩೬

ಪ್ರತ್ಯಗಾತ್ಮನನೆತ್ತಿ ಕೊಳುತಲಿ |
ನಿತ್ಯತೃಪ್ತಗೆ ಮೊಲೆಯನೂಡುತ |
ಸತ್ಯರೂಪನನೊಲಿದು ತೊಟ್ಟಲೊಳಿಟ್ಟು ಜೋಗುಳವ ||
ಅತ್ಯಧಿಕ ಸಂಭ್ರಮದಿ ಪಾಡುತ |
ಮತ್ಯುರಹಿತನಿಗೆರೆದು ಜಲವನು |
ನೃತ್ಯಲೋಲನನಾಡಿಸುತ್ತಿಹಳಸಿಶಮಾರ್ಯಾಂಬೆ || ೩೭

ಸುರನರೋರಗಭುವನಪಾಲನು |
ನರಶಿಶುತ್ವವ ತಾಳುತವನೀ |
ಸುರನ ನಿಳಯದೆ ತಂದೆತಾಯ್ಗಳಿಗಧಿಕಹರ್ಷವನು ||
ವಿರಚಿಸುತಲಿರಲಿತ್ತಲಮರರು |
ಧರಣಿಯೊಳಗುದ್ಭವಿಸುತನಿಶವು |
ಪುರಹರಶ್ರೀಕಂಠನಾಜ್ಞೆಯ ಪಾಲಿಸುತಲಿಹರು || ೩೮

ಸಂಧಿ ನಾಲ್ಕಕ್ಕೆ ಪದ್ಯ ೧೨೨ ಕ್ಕೆ ಮಂಗಳ.

# ಐದನೆಯ ಸಂಧಿ.

ಸೂಚನೆ || ಬಾಲಶಂಕರ ತನ್ನ ಬಾಂಧವ |
ಜಾಲವತಿಸಂಭ್ರಮಿಸಲುನ್ನತ |
ಬಾಲಲೀಲೆಯೊಳತುಳಮಹಿಮೆಯ ತೋರಿದನು ಜಗಕೆ ||

ಕೇಳಿರೈ ಮುನಿಗಳಿರ ಮೃಗಧರ |
ಮೌಳಿಯಿತ್ತಲು ತನ್ನ ಭಕ್ತರ |
ಪಾಲಿಸುತ ಶೈಶವದೊಳುಜ್ವಲಿಸುತ್ತಲಿರುತಿರಲು ||
ಶೂಲಧರನಾಜ್ಞೆಯಲಿ ಸಕಲ ಸು |
ರಾಳಿಯುತ್ತಲು ಮರ್ತ್ಯರೂಪವ |
ತಾಳುತುದಯಿಸಿ ನೆರೆವಿರಾಜಿಸುತಿರ್ದುದವನಿಯಲಿ || ೧

ಕಮಲನಾಭನು ಜಗವ ಪೊರೆಯಲು |
ವಿಮಲನಾಮಕವಿಪ್ರವರ್ಯಗೆ |
ಮಮತೆಯಿಂ ಸುತನಾಗಿ ಧರಿಸಿ ಸನಂದನಾಖ್ಯೆಯನು ||
ಸುಮನಸರು ಪೊಗಳಲ್ಕೆ ತಾನತಿ |
ವಿಮಲಯತ್ಯಾಶ್ರಮವ ಕೈಕೊಂ |
ಡಮಲತರವಹ ಪದ್ಮಪಾದಾಹ್ವಯವಕೈಕೊಂಡ ||

ಮರುತನೀಶಾಜ್ಞೆಯನು ಧರಿಸುತ |
ಪರಮಪಾವನವಿಪ್ರವರ್ಯರ |
ನೆರವಿಯಲಿ ವಿಲಸತ್ಪ್ರಭಾಕರಸನ್ಮತಾಖ್ಯನಿಗೆ ||
ವರತನುಜನಾಗಿರ್ದು ಮೌನವ |
ಧರಿಸಿ ದಿನಗಳ ಕಳೆದು ಬಳಿಕಾ |
ಗರಳಕಂಠಾಶ್ರಿತನು ಹಸ್ತಾಮಲಕನೆನಿಸಿದನು ||

ಹರನನೇಮದೊಳಗ್ನಿಪುರುಷನು |
ವರಕಳಾನಾಥಾಖ್ಯೆಯನು ನೆರೆ |
ಧರಿಸಿ ಜನಿಯಿಸಿ ವಿಶ್ವನಾಥಾಧ್ವರಿಗೆ ಸುತನಾಗಿ ||
ವರತುರೀಯಾಶ್ರಮವ ಕೈಕೊಂ |
ಡುರುತರದ ವೇದಾಂತತತ್ವವ |
ಧರೆಗೆ ಬೋಧಿಸಿ ರಂಜಿಸಿದನಾ ತ್ರೋಟಕಾಖ್ಯೆಯಲಿ ||

ಅಮರವಂದಿತಚರಣಯುಗ್ಮನು |
ಕಮಲಭವನಾ ಭವನನೇಮದೆ |
ಮಮತೆಯಿಂ ಹಿಮಮಿತ್ರಭಟ್ಟಾಚಾರ್ಯಸುತನೆನಿಸಿ ||
ವಿಮಲಮಂಡನಮಿಶ್ರನಾಮದೊ |
ಳಮಲ ಮಾಹಿಷ್ಮತಿಯ ಪುರದೊಳು |
ಸುಮಶರಾರಿಯ ಬರವನೀಕ್ಷಿಸುತಿರ್ದ ನತಿಮುದದೆ ||

ಒಂದುದಿನ ದೂರ್ವಾಸಮುನಿಪತಿ |
ಚಂದದಿಂ ಶ್ರುತಿಪಠನದೊಳಗಿರ |
ಲೊಂದುಕಡೆಯಲಪಸ್ವರವು ಬರೆನಕ್ಕಳಾವಾಣೀ ||
ಅಂದದಕೆ ಕೋಪಿಸುತಲತ್ರಿಜ |
ನೆಂದನೆಲೆ ಭಾರತಿಯೆ ನಿನ್ನಯ |
ಕುಂದಿಗಿದೊ ಧೃಢಶಾಪ ನರರೊಳು ಜನಿಯಿಸೆಂದೆನುತ || ೬

ಅತಿಭಯದೊಳಾವಾಣಿ ಬಳಿಕಾ |
ಯತಿಯ ಚರಣಕ್ಕೆರಗಿ ಮನ್ನಿಸು |
ಮತಿಯುತನೆ ನೀನೆಂದು ಸಂಪ್ರಾರ್ಥಿಸಲು ದೈನ್ಯದಲಿ ||
ಪತಿತಪಾವನನೆನಿಪ ಶಂಕರ |
ಯತಿಯ ದರ್ಶನದಿಂದ ನಿನ್ನೀ |
ವ್ಯಥೆಗೆ ಪರಿಹರವೆಂದುನುಡಿದನು ಕರುಣದಲಿ ಯತಿಪ || ೭

ಅತ್ರಿಪುತ್ರನ ಶಾಪದಿಂದ ಧ |
ರಿತ್ರಿಯಲಿ ವಾಗ್ದೇವಿ ವಿಷ್ಣುಸು |
ಮಿತ್ರಭಟ್ಟಾಚಾರ್ಯನೆಂಬಾದ್ವಿಜ ಕುಲೋತ್ತಮಗೆ ||
ಪುತ್ರಿಯಾಗುದಯಿಸುತ ವರಶತ |
ಪತ್ರಮುಖಿ ಸೇರಿದಳು ಪರಮಸ |
ಮಿತ್ರಮಂಡನಮಿಶ್ರನಾಮಕ ಭೂಸುರೋತ್ತಮನ || ೮

ನಂದಿವೀರಗಣೇಶರಂಶಗೆ |
ಳಿಂದಲುದಯಿಸೆ ಮುನಿಯುದಂಕನು |
ಸಿಂಧುಪತಿ ಜನಿಯಿಸಿದ ಚಿತ್ಸುಖನೆಂಬ ನಾಮದಲಿ ||
ಅಂದವೆನೆ ಸುರಗುರುವುತಾನಾ |
ನಂದಗಿರಿನಾಮದಲಿ ಬರಲಾ |
ನಂದಕಾಲನು ಜನಿಯಿಸಿದ ಕಾಲಾನಲಾಖ್ಯೆಯಲಿ || ೯

ಆದಿಶೇಷನು ಮುನ್ನವೇ ಸಂ ।
ಮೋದದಿಂ ಗೋವಿಂದಭಗವ ।
ತ್ಪಾದನಾಮದಿ ಜನಿಯಿಸುತಲಾಬ್ರಹ್ಮವಿದ್ಯೆಯನು ॥
ಸಾದರದಿ ವರಗೌಡಪಾದರ ।
ಬೋದಿ ಬಳಿಕಾ ಶಿಷ್ಯವರ್ಗಕೆ ।
ಬೋಧಿಸುತಲಿರುತಿರ್ದ ವರನರ್ಮದೆಯತೀರದಲಿ ॥ ೧೦

ಇಂತು ಸುರವರರೆಲ್ಲ ಗಿರಿಜಾ ।
ಕಾಂತನನು ಸೇವಿಸಲು ನರರೂ ।
ಪಾಂತು ನೆರೆದಿರೆ ಮರ್ತ್ಯಲೋಕವೆ ಸಗ್ಗವೆನಿಸಿದುದು ।
ಕಂತುಮಥನನು ತನ್ನನೆನೆವರ ।
ಮಂತಣವ ಪಾಲಿಸುತ ಶೈಶವ ।
ವಾಂತು ರಂಜಿಸುತಿರ್ದನಾ ಕಾಲಟಿಯೊಳತಿಮುದದಿ ॥ ೧೧

ಒಂದುದಿನ ಕಾಲಟಿಯ ಭೂಸುರ ।
ವೃಂದವತಿಭಕ್ತಿಯಲಿ ಪರಶಿವ ।
ಮಂದಿರದಲೀಶ್ವರನ ಪೂಜಿಸುತತುಳವಿಭವದಲಿ ॥
ಗಂಧಪುಷ್ಪಾದಿಗಳನರ್ಪಿಸು ।
ತಂದವವ್ವವರಬಿಲ್ವಮಾಲೆಯ ।
ಕಂಧರಕಲಂಕರಿಸಿ ನಮಿಸುತ ತಿರುಗಿದುದು ಗೃಹಕೆ ॥ ೧೨

ಬರುತ ಕಂಡರು ಮನೆಯೊಳಾಡುತ ।
ಲಿರುವ ಶಿವಗುರುಸುತನ ಗಳದೊಳು ।
ಮೆರೆಯುತಿಹ ವರಬಿಲ್ವಮಾಲೆಯನಾಗಶಂಕಿಸುತ ॥
ಹರನನಿಳಯವನೈದಿ ಪರಿಕಿಸೆ ।
ಬರಿಯುಗಳದಾಪ್ರತಿಮೆಯಿರೆತಾ ।
ವರಿದು ಮನೆಗೈತಂದು ನುಡಿದರು ಶಿವಗುರುವಿನೊಡನೆ ॥ ೧೩




ಶ್ರೀಮದ್ಬಾಲಶಂಕರಃ.

ಕೇಳಿದೈ ಭೂಸುರಕುಲಾಗ್ರಣಿ |
ಶೂಲಪಾಣಿಯುಗಳದೊಳಿಕ್ಕಿದ |
ಮಾಲಿಕೆಯು ತಾನೀಗ ಬಾಲಕರೊಡನೆ ಸಂಭ್ರಮದೆ ||
ಆಲಯದೊಳಾಡುತಿಹ ನಿನ್ನಯ |
ಬಾಲಕನ ಶಂಕರನ ಕೊರಳಲಿ |
ಲೀಲೆಯಿಂ ಜೋಲುತಿದೆ ನೀನೋಡೆಂದರಾದ್ವಿಜರು || ೧೪

ಇದನುಕೇಳುತ ಸಕಲಜನರಾ |
ಸದನದೊಳಗಾಡುತ್ತಲಿರುತಿಹ |
ಮುದನಹರನನು ಪೋಲ್ವಬಾಲನಬಳಿಗೆ ಹರಿತಂದು ||
ಚದುರತನದಾಶಿಶುವರೇಣ್ಯನ |
ಪದುಳಕಂಠದ ಬಿಲ್ವಮಾಲೆಯ |
ಹದನಕಂಡಚ್ಚರಿಯತಾಳ್ದರು ಬೆರಳಮೂಗಿನಲಿ || ೧೫

ಕೆಲಬರುರೆ ಬೆರಗಾಗಿನಿಂದರು |
ಕೆಲಬರಿದ ಶಿವಬಲ್ಲನೆಂದರು |
ಕೆಲದಿನುಡಿದರು ಬೇರೆ ಶಿವನಾರಿಹನುಮತ್ತೆನುತ ||
ಕೆಲರು ಬಾಲಂಗೆರಗುತಿರ್ದರು |
ತಿಳಿವೊಡಿದು ಬಾಲಕನ ಪೆತ್ತರ |
ಲಲಿತಸತ್ಕರ್ಮಗಳ ಫಲವೆನುತಿರ್ದರಾದ್ವಿಜರು || ೧೬

ಇರುತಿರಲು ಬಳಿಕೊಂದು ದಿನ ಶಿವ |
ಗುರುವು ತನ್ನಯ ಮನೆಯೊಳಾದ್ವಿಜ |
ವರರ ಸಂತರ್ಪಣೆಯನೆಸಗಲು ವಿಪ್ರರೈತಂದು ||
ಪರಿಪರಿಯ ಭಕ್ಷ್ಯಗಳ ಭುಂಜಿಸಿ |
ಪರಮಸಂತೋಷದಲಿ ಕುಳಿತಾ |
ಹರನ ವರಪುತ್ರನನು ಪೊಗಳುತಲಿರ್ದರತಿಶಯದೆ || ೧೭

ಕುಳಿತಿರಲು ಭೂದಿವಿಜಸಂತತಿ |
ಸುಳಿಸುಳಿದು ಧೂಳುಗಳನೆಬ್ಬಿಸಿ |
ಬಲುರಭಸದಿಂ ಬಂದುದೊಂದಾವರ್ತಮಾರುತನು |
ನೆಲಕೆ ಗಗನಕೆ ಕೀಲು ಕೊಟ್ಟಹ |
ಚಲನೆಯಿಲ್ಲದ ಕಂಬದಂತಿರೆ |
ಬಲಿದ ಸುಂಟರಗಾಳಿ ಚೆದರಿಸಿತಾಗಲಾದ್ವಿಜರ |

ಕವಿವ ಧೂಳಿಗೆ ವಿಪ್ರರಂಜುತ |
ಲೆವೆಗಳನು ಮುಚ್ಚಿರಲಿಕಾಗಳು |
ಪವನನೊಯ್ದನು ಶಿಶುವರೇಣ್ಯನ ಗಗನಮಂಡಲಕೆ ||
ಅವನಿಯಮರರು ತೆರೆದು ಕಂಗಳ
ಶಿವಗುರುವಿನಾತ್ಮಜನ ಕಾಣದೆ |
ಶಿವಶಿವಾ ಗತಿಯೇನು ತಮಗೆಂದೆನುತಲೊರಲಿದರು ||

ಹಾಮಗನೆ ನಾನಗಲಿ ನಿನ್ನನು |
ಭೂಮಿಯಲಿ ಬದುಕುವೆನದೆಂತೋ |
ಸೋಮಧರನೊಲಿದಿತ್ತ ವರವು ನಿರರ್ಥವಾಯಿತಲ ||
ವ್ಯೋಮಕೇಶನು ನಿನ್ನ ರಕ್ಷಿಸೆ |
ತಾಮಸವಮಾಡಿದನದೇತಕೆ |
ಹಾಮಹಾದೇವೆನುತ ಶಿವಗುರು ಕೆಡೆದ ಮೂರ್ಛೆಯಲಿ ||

ಮಗುವೆ ನಿನ್ನನು ನೀಗಿದಳಲಿಂ |
ಪುಗುವೆನೋ ಶಿಖಿಯೊಳಗೆ ಮೇಣಾ |
ನಗದತುದಿಯಿಂ ಧರೆಗುರುಳ್ವೆನೊ ಗರಳವೀಂಟುವೆನೊ ||
ಮೊಗವಕಾಣದ ತೆರದಿ ವಿಧಿಯಾ |
ಗಗನಕೊಯ್ದುದೆ ನಿನ್ನನಕಟಾ |
ಮಗನೆ ಗತಿಯೇನೆನುತ ಮರುಗಿದಳಂದು ನಿಜಜನನೀ ||

ಭರದಿ ಬೀಸಿದ ಗಾಳಿ ಬಾಲನ |
ತರಗೆಲೆಯ ತೆರದಿಂದ ಬಿಸುಟಿರ |
ಲರಸಿನೋಡದೆ ಬರಿದೆ ಮರುಗುವುದುಚಿತವಲ್ಲೆಂದು ||
ಹಿರಿಯರುರೆ ಸಂತೈಸಿ ದಂಪತಿ |
ವರರ ತರಳನನರಸಲೋಸುಗ |
ತೆರಳಿದರು ತಾವೆಂಟುಜನರಾಗೆಂಟುದೆಸೆಗಳಿಗೆ || ೨೨

ಎಲ್ಲಿ ಭಕ್ತರು ನೆನೆದರವದಿರಿ |
ಗಲ್ಲಿ ತೋರುವನೆಂಬ ವೇದದ |
ಸೊಲ್ಲನುದ್ಧರಿಪಂತೆ ಹರತಾನೆಂಟುದೆಸೆಗಳಲಿ ||
ಅಲ್ಲಿಗರಸಲು ಬಂದ ವಿಪ್ರರಿ |
ಗುಲ್ಲಸದೆ ಮೈದೋರ್ದ ಗಿರಿಜಾ |
ವಲ್ಲಭನಲೀಲೆಯನು ಬಲ್ಲವರಾರು ಭುವನದಲೀ || ೨೩

ಅರಸಲೈತಂದೆಂಟುಜನರಾ |
ತರಳನೊಬ್ಬೊಬ್ಬನನು ತಂದರು |
ಪರಿಕಿಸಲ್ ಶಿವನಷ್ಟಮೂರ್ತಿಗಳಂತೆ ರಂಜಿಸಲು ||
ತರಳರವದಿರಕಂಡು ಬಾಂಧವ |
ರಿರಲು ಪರಮಾಶ್ಚರ್ಯಭರದಿಂ |
ವರಕುಮಾರನ ತಿಳಿಯದಾದರು ತಾಯಿತಂದೆಗಳು || ೨೪

ಬಳಿಕ ದಂಪತಿವರರು ವಿಪ್ರರ |
ನೊಲಿದು ಪೂಜಿಸಿ ಗಂಧಪುಷ್ಪವ |
ಲಲಿತವಹತಾಂಬೂಲ ದಕ್ಷಿಣೆಯಿಂದ ಮನ್ನಿಸಲು ||
ಸಲೆ ರಚಿಸುತಾಶಿಷವನಕ್ಷತೆ |
ತಳೆಯುತಾಶ್ಚರ್ಯದಲಿ ಕುಳಿತಿರ |
ಲೊಲವಿನಿಂದೈತಂದನೊಬ್ಬನು ಭೂಸುರೋತ್ತಮನು || ೨೫

ಪರಿಚಿತನು ಶಿವಗುರುವಿಗಾತ್ತನು |
ನೆರೆಯ ಗುರುವಾಯೂರಿನವ ತ |
ನ್ನೆರಡುಕೈಗಳೊಳೆತ್ತಿ ತಂದನು ಬಾಲಶಂಕರನ ||
ತರಳನಿವ ನಿನ್ನವನು ನಮ್ಮಯ |
ಪುರದ ದೇವಾಲಯದೊಳಿರ್ದನು |
ಕರೆದುಕೊಳು ನೀನೆಂದು ಜನಕಂಗಿತ್ತನರ್ಭಕನ ||

ಎಂದು ಕೊಡಲತಿಮುದದಿ ಶಿವಗುರು |
ಸಂದ ಸಂಭ್ರಮದಿಂದ ತನ್ನಯ |
ನಂದನನಕಾಣುತ್ತ ಕೈಗಳನೀಡಿ ಬಿಗಿಯಪ್ಪೆ ||
ಬಂಧುಜನತಾವೆಂಟು ದೆಸೆಗಳ |
ಲಂದು ತಂದಿರ್ದೆಂಟುಶಿಶುಗಳು |
ನಿಂದೆಡೆಯೊಳೊಂದಿದರು ಮಾಯವ ಮುನಿಪಕೇಳೆಂದ ||

ಬೀಳುಕೊಂಡನು ವಿಪ್ರ ಬಳಿಕಾ |
ಬಾಲಕನ ಶಂಕರನ ಬಾಂಧವ |
ಜಾಲವತಿಮುದ್ದಿಸುತಲಾತನ ಪಿತನ ಕೊಂಡಾಡಿ ||
ಆಲಯಕೆ ಬೀಳ್ಕೊಂಡರಾಗಲು |
ಶೀಲಸದ್ಗುಣವನಧಿ ತನ್ನಯ |
ಬಾಲಕನನಾರೈವುತಿರ್ದನು ಪುತ್ರಮೋಹದಲೀ ||

ಇರುತಿರಲು ಬಳಿಕೊಂದುದಿನವಾ |
ವರವೃಷಭಶೈಲದಲಿ ಶಂಭುವಿ |
ನುರು ರಥೋತ್ಸವಕೆನುತ ಬಂದರು ಕಾಲಟಿಯ ಬುಧರು ||
ಪರಮವೈಭವದಿಂದಲೀಶ್ವರ |
ಚರಣಪಂಕಜಕೆರಗಿ ಪೂಜಿಸು |
ತಿರಿಸಿದರು ರಥದೊಳಗೆ ಪರಶಿವನತುಲವಿಗ್ರಹವ ||

ಬಳಿಕ ಫಲಪುಷ್ಪಗಳನರ್ಪಿಸಿ |
ಲಲಿತನೀರಾಜನವ ಬೆಳಗುತ |
ಕಲೆತು ವಿಪ್ರರು ಪಿಡಿದುರಜ್ಜುವ ರಥವನೆಳೆತರುತ ||
ನೆಲೆಗೆ ನಿಲ್ಲಿಸಿ ನೋಡಲಾರಥ |
ದೊಳಗೆ ಶಿವವಿಗ್ರಹವ ಕಾಣದೆ |
ಪೊಳೆವವಿಗ್ರಹದಂತೆ ರಂಜಿಪ ಬಾಲ ಶಂಕರನ || ೩೦

ಕಂಡು ವಿಪ್ರರು ಬಹುಳ ವಿಸ್ಮಯ |
ಗೊಂಡು ಶಿವಗುರುಸುತನು ಸಾಕ್ಷಾ |
ತ್ಖಂಡಪರಶುವೆ ನಿಜವು ನಾವಿದನರಿಯದಾದೆವಲ ||
ಅಂಡಲೆವನಿಗಮಾಳಿಗೊಮ್ಮೆಯು |
ಕಂಡುಬಾರದ ಸಕಲಜಗದು |
ದ್ದಂಡದೈವವಕಂಡೆವಾವೆನುತೆರಗಿದರು ಪದಕೆ || ೩೧

ಮತ್ತೆ ರಥಮಧ್ಯದಲಿ ಕಂಡರು |
ಕೃತ್ತಿವಾಸನ ದಿವ್ಯಮೂರ್ತಿಯು |
ನುತ್ತಮದ ಸುಮಹಾರವಸ್ತ್ರಗಳಿಂದ ರಂಜಿಪುದ ||
ಇತ್ತಲಾಡುತ ತಾಯಸನಿಹದೆ |
ಸುತ್ತುತಿಹ ಬಾಲಕನ ಕಂಡರು |
ಮತ್ತರಾದರು ಯೋಗಮಾಯಾ ಮೋಹಮುದ್ರೆಯಲಿ || ೩೨

ಗಿರಿಯೊಳುತ್ಸವವಾದ ಬಳಿಕಾ |
ಧರಣಿಯಮರರು ಪುರಕೆ ಬಂದರು |
ವರಕುಮಾರನಪರಿಯ ಪೊಗಳುತ ಸಾರಿದರು ಗೃಹವ |
ವರುಷವೊಂದಕೆ ದೇಶಭಾಷೆಯ |
ನರಿದು ಸಕಲ ಪುರಾಣಕಥೆಗಳ |
ನರಿತನಾಶಂಕರನು ಬಳಿಕೆರಡನೆಯ ವರುಷದಲೀ || ೩೩

ಶಬ್ದರೂಪನು ಶಬ್ದದೂರನು |
ಶಬ್ದಮಯ ಶಬ್ದಾತ್ಮ ಲೋಕದೆ |
ಶಬ್ದಮೊದಲೆನಿಪತುಲವಿಷಯಾತೀತನೀಶ್ವರನು ||
ಶಬ್ದಶಾಸ್ತ್ರವ ತನ್ನಡಮರುಗ |
ಶಬ್ದದಿಂ ಕರುಣಿಸಿದ ಹರನೆರ |
ಡಬ್ದದೊಳು ತಾಂ ಕಲಿತ ಶಾಸ್ತ್ರವನೆಂಬುದಚ್ಚರಿಯೆ || ೩೪

ಒಂದುದಿನ ಶಿವಗುರುವು ಬಹುಮುದ |
ದಿಂದ ಯಜ್ಞವನೊಂದರಚಿಸಲು |
ಬಂಧುರದ ಮಖಶಾಲೆಯೊಳಗಿರುತಿರ್ಪ ಭೂಸುರರ ||
ನಂದನರು ತಾವಲ್ಲಿಕಂಡರ |
ದೊಂದು ಕೂಶ್ಮಾಂಡವನು ಸನಿಹದೆ |
ನಿಂದು ಕೇಳಿದರೊಬ್ಬರೊಬ್ಬರು ಬೀಜಸಂಖ್ಯೆಗಳ || ೩೫

ಒಬ್ಬನೂರಿಹುದೆಂದನಾ ಮ |
ತ್ತೊಬ್ಬ ನೂರೆರಡೆಂದ ಬಳಿಕಿ |
ನ್ನೊಬ್ಬ ಪೇಳ್ದನು ಬೀಜವೈನೂರಿಹವು ದಿಟವೆಂದು ||
ಒಬ್ಬನೊರೆದುದಕೊಬ್ಬನೊಪ್ಪದೆ |
ಬೊಬ್ಬಿಡುತಲರ್ಭಕರು ಬಳಿಕಿವ |
ನೊಬ್ಬನನು ಕೇಳುವೆವೆನುತ ಸಾರಿದರು ಶಂಕರನ || ೩೬

ಕೇಳಿದರೆ ಬಾಲಕರು ತನ್ನನು |
ಬಾಲಶಂಕರ ನಗುತ ಲೋಕದ |
ಮೂಲಸಂಖ್ಯೆಯು ಬೀಜವಿಹುದೆಂದೆನುತ ಪೇಳಿದನು ||
ಬಾಲರಿದರರ್ಥವನು ಹಿರಿಯರ |
ಕೇಳಿದರೆ ಕೂಶ್ಮಾಂಡವನು ನೆರೆ |
ಸೀಳಿನೋಡಲು ಕಂಡುದೊಂದೇ ಬೀಜವದರೊಳಗೆ || ೩೭

ಏನಿದಚ್ಚರಿ ಬೀಜವೊಂದೇ |
ತಾನಿಹುದು ಕೂಶ್ಮಾಂಡದಲ್ಲಿದ |
ಕೇನನೆಂದನು ಬಾಲ ಲೋಕದ ಮೂಲವೆನಲೇನು ||
ತಾನದೊಂದೇ ಬ್ರಹ್ಮಜಗದವ |
ಸಾನಸೃಷ್ಟಿಸ್ಥಿತಿಗೆ ಮೂಲವು |
ತಾನಿಹುದು ಸಮನಾಯ್ತುದೊಂದೇ ಬೀಜವಿದರೊಳಗೆ || ೩೮

ಅರಿದನೆಂತಿದನೀಗಲೀ ಶಿವ |
ಗುರುವಿನಣುಗನು ತಿಳಿಯಲಾಗದು |
ತರಳನೀತನ ವಾಕ್ಯಸೂತ್ರಾರ್ಥವದು ಕಮಲಜಗೆ ||
ಸುರನುತಶ್ರೀಕಂಠನೀತಗೆ |
ಕರುಣಿಸುತ ದೀರ್ಘಾಯುವನು ನೆರೆ |
ಪೊರೆಯಲಿನ್ನುತ ಹರಸಿ ಕೊಂಡಾಡಿದರು ಬಾಲಕನ || ೩೯

ಸಂಧಿ ಐದಕ್ಕೆ ಪದ್ಯ ೧೬೧ಕ್ಕೆ ಮಂಗಳ.

# ಆರನೆಯ ಸಂಧಿ.

ಸೂಚನೆ|| ಪರಮ ಸಂಭ್ರಮದಿಂದ ತನ್ನಯ|
ತರಳನಿಗೆ ಚೌಲಾಖ್ಯ ಕರ್ಮವ|
ವಿರಚಿಸುತ ಶಿವಗುರುವು ಪಡೆದನು ಪರಮಶಿವಪದವ||

ಕೇಳಿರೈ ಮುನಿಗಳಿರ ಶಿವನ ವಿ |
ಶಾಲ ಚರಿತೆಯನೊರೆವೆ ಶಿವಗುರು |
ಮೇಲೆನಿಪ ಯಜ್ಞವನು ಸತಿಯೊಡಗೂಡಿ ವಿರಚಿಸುತ ||
ಲೀಲೆಯಿಂ ಮನ್ನಿಸುತ ಋತ್ವಿಕ್ |
ಜಾಲವನು ಪೂರ್ಣಾಪಗೆಯುವರ |
ಕೂಲಕೈತಂದೊಡನೆ ರಚಿಸಿದನವಭೃತವನೊಲಿದು || ೧

ಬಳಿಕ ಬಾಂಧವರೊಡನೆ ಶಿವಗುರು ।
ನಿಳಯಕೈತಂದಿರುತ ತನ್ನಯ ।
ಕುಲತಿಲಕ ಶಂಕರನ ಲೀಲೆಯ ನೆನೆದು ಮನದೊಳಗೆ ॥
ಪುಳಕಜಲದೊಳು ಮೂಡಿಮುಳುಗುತ ।
ಲಲನೆಯೊಡನಾ ಚಂದ್ರಚೂಡನ ।
ಲಲಿತಪದಪಂಕಜವ ಪೂಜಿಸುತಿರ್ದನತಿಶಯದೆ ॥

ಅಜಸುರಾರ್ಚಿತ ಚರಣಕಮಲನು ।
ಭಜಕರಘಸಂಹರನು ಶಂಕರ ।
ರಜದೊಳಾಡುವ ಹರೆಯದಲಿ ನೆರೆಸಕಲಕಲೆಗಳನು ॥
ನಿಜಮಹಿಮೆಯಿಂದರಿದು ಲೋಕದ ।
ಸುಜನತೋಷಕನಾಗಿ ಮೆರೆದನು ।
ರಜತಶೈಲಾಧಿಪನು ಸಂತಸಗೊಳಿಸಿದನು ಪಿತನ ।

ವರಕಲಾಧರಧರನು ತನ್ನಯ ।
ಗುರುವರನಿಗಾಯಾಸವೀಯದೆ ।
ಪರಮಪರಿಣತನಾದನಗ್ಗದ ಸಕಲ ಕಲೆಗಳಲಿ ॥
ಗುರುಪರೋಕ್ಷದಲಿತರ ಶಿಷ್ಯರ ।
ನೆರವಿಗೋದಿಸಿ ಕಲಿಸಿ ವಿದ್ಯಾ ।
ಗುರುವಿಗತಿಸಂತಸವನೆಸಗುತ್ತಿರ್ದನನವರತ ॥

ಆರವಿದ್ಯೋಪಾದಿಯಿಂದಲೆ ।
ಬೇರೆ ತಾಜೀವಾತ್ಮನಾಗಿಯೆ ।
ತೋರಿ ವಿದ್ಯೋಪಾಧಿಯಲಿ ತಾನೀಶನೆಂದೆನಿಸಿ ॥
ತೊರಿತೋರದವರನಿರಂಜನ ।
ನಾರು ನಿರುಪಾಧಿಯೊಳಗವನಂ ।
ಸಾರಿದವು ವಿದ್ಯೆಗಳು ಧನ್ಯತೆಯಾಂಪ ಕಾಂಕ್ಷೆಯಲಿ ॥

ಪಾದದಲಿ ಛಂದಸ್ಸು ಹಸ್ತದೊ |
ಳಾದುದಗ್ಗದ ಕಲ್ಪ ಮುಖದಿಂ |
ದಾದುದಾವ್ಯಾಕರಣಶಾಸ್ತ್ರವು ನಾಸದೊಳು ಶಿಕ್ಷೆ ॥
ಆದಿಪೂರುಷನಕ್ಷಿ ಕರ್ಣದ |
ಹಾದಿಯಿಂ ಜ್ಯೋತಿಷ ನಿರುಕ್ತವು |
ಮೇದಿನಿಯೊಳಾದುವೆನೆ ಶಿವಗರಿದೇ ಷಡಂಗಚಯ ॥ ೬

ಇಂತು ವಿದ್ಯಾಪರಿಣತೆಯ ತಾ |
ನಾಂತು ಜನನೀಜನಕರಿಂಗತಿ |
ಸಂತಸವನೊದವಿಸುತ ಬಾಂಧವಜಾಲಕತಿಶಯದ ॥
ಚಿಂತಿತಾರ್ಥವನಿತ್ತು ಪೊರೆಯುತ |
ನಂತಮಹಿಮನು ಶೋಕಮೋಹ |
ಭ್ರಾಂತಿದೂರನು ಬೆಳೆಯುತಿರ್ದನು ವಿಪ್ರಗೇಹದಲಿ ॥ ೭

ಶಿವಗುರುವು ಜಗದೊಳಗೆ ತನ್ನಯ |
ಕುವರ ವಿದ್ಯಾವಂತನಾದುದ |
ತವೆ ತಿಳಿದು ಸಂಭ್ರಮದಿ ಹಿಗ್ಗುವನೊಮ್ಮೆ ಮನದೊಳಗೆ ॥
ಅವನಿಯಮರನು ಪೇಳ್ದ ಕನಸಿನ |
ವಿವರವನು ನೆನೆಯುತ್ತ ಭಯದಿಂ |
ದವಿರಳಾಶ್ರುವ ತಳೆದು ದುಃಖಿಪನೊಮ್ಮೆ ಚಿತ್ತದಲಿ ॥ ೮

ಭುವನವಂದಿತ ಪಾದಪದ್ಮನ |
ಕುವರನೆಂದೇ ಬಗೆದು ಶಿವಗುರು |
ವವಗೆ ದೀರ್ಘಾಯುವನು ಕರುಣಿಸಲೆಂದು ಶಿವಪದವ ॥
ಅವಿರಳದ ಸದ್ಭಕ್ತಿಯುಕ್ತನು |
ತವೆನೆನೆದು ಪೂಜಿಸುತ ಗಿರಿಜಾ |
ಧವನ ಸಂಪ್ರಾರ್ಥಿಸುತಲಿರ್ದನು ದಿವಸದಿವಸದಲಿ ॥ ೯

ಇಂತು ವಿಪ್ರೋತ್ತಮನು ಸಂತತ |
ಕಂತುಹರನನು ಬೇಡುತಿರಲಾ |
ಶಾಂತವಿಗ್ರಹ ಬಾಲಶಂಕರಗಾದುದೆರಡಬುದ ||
ಸಂತಸವೆ ರೂಪಾಂತ ತೆರದಿಂ |
ದಂತಕಾಂತಕ ಬಂಧುಜನಗಳಿ |
ಗಂತವಿಲ್ಲದ ಸುಖವ ಬೀರುತಲಿರ್ದನನವರತ ||

ಚರಣಸಂಸ್ಪರ್ಶನದ ಸೌಖ್ಯವ |
ಧರೆಗೆ ತೋರಲು ನಡೆವ ಬಳಿಕಾ |
ಧರೆಯಜನಹೃದಯಾಂಧಕಾರವ ಕಳಚಲಿಕೆ ನುಡಿವ ||
ಪರಿಪರಿಯ ದುರ್ಮತವ ಖಂಡಿಸಿ |
ಸುರುಚಿರಾದ್ವೈತಾಖ್ಯಸುಧೆಯನು |
ಧರೆಗೆ ಬೀರಲು ಸಗುಣನಾಗಿಹನಿರ್ಗುಣಾತ್ಮಕನು ||

ನೀಲನೀರದಜಾಲಮಧ್ಯದೆ |
ಥಳಿಸುವ ಶಶಿಬಿಂಬವೆನಲಾ |
ಶೂಲಪಾಣಿಯ ಮುಖವು ರಂಜಿಪುದಳಕಮಧ್ಯದಲಿ ||
ಫಾಲನೇತ್ರವ ಕಂಡೊಡೀಜಗ |
ತಾಳಲಾರದೆನುತ್ತ ಹರನ ವಿ |
ಶಾಲಮುಖನು ಮುಸುಕಿಕೊಂಡ ಕಪರ್ದದಂದದಲಿ ||

ಈಪರಿಯ ಬಾಲಕನ ಕಾಣುತ |
ತಾಪಸೋತ್ತಮ ಮನದಿ ಹಿಗ್ಗುತ |
ಲಾಪನಿತು ವೈಭವದಿ ವರಚೂಡಾಖ್ಯಕರ್ಮವನು ||
ಲೋಪವಿಲ್ಲದೆ ಸುತಗೆ ವಿರಚಿಸ |
ಲೋಪಳಿಗೆ ಸೂಚಿಸುತ ಬಳಿಕಾ |
ತಾಪಸರ ಕರೆಯಿಸಿದ ಮುದದಲಿ ತನ್ನ ಮಂದಿರಕೆ ||

ಕರೆಯಿಸುತ ವಿಪ್ರರನು ಮನ್ನಿಸಿ |
ತರಳನಿಗೆ ವರಚೌಲಕರ್ಮವ |
ವಿರಚಿಸಲು ನಿರ್ದುಷ್ಟವಹ ಸುಮುಹೂರ್ತವನು ಕೇಳೆ ||
ಧರಣಿಯಮರರು ಗಾರ್ಗ್ಯಮತವಿ |
ಸ್ಫುರದಿ ಸುಮುಹೂರ್ತವನು ನಿಯಮಿಸೆ |
ಪರಿಣತರ ಮನ್ನಿಸುತ ಕಳುಹಿದ ಭೂಸುರೋತ್ತಮನು || ೪೪

ಧರಣಿಯಮರರು ನೆರೆದರಾದಿನ |
ತರಣಿಯುದಯಕೆಮುನ್ನ ತರಳನಿ |
ಗುರುತರದ ಮಂಗಳದ ಮಜ್ಜನವೆಸಗಿ ವಿಭವದಲಿ ||
ಪರಮಪುಣ್ಯಾಹಾದಿ ಮಂಗಳ |
ತರದ ಕರ್ಮವರಚಿಸಿ ಬಾಂಧವ |
ವರರು ಹೋಮದಿ ತುಷ್ಟಿಪಡಿಸಿದರಾಗಲಮರರನು || ೧೫

ವ್ಯೋಮಕೇಶಗೆ ಘನಕಪರ್ದಿಗೆ |
ಸೋಮಶೇಖರನೆನಿಪ ಶಿವಗಾ |
ವ್ಯೋಮನದಿಯನು ಶಿರದೊಳಾಂತಾ ನಾಗಭೂಷಣಗೆ ||
ತಾಮರಸಸಂಭೂತವಂದಿತ |
ರಾಮಣೀಯಪದಾಬ್ಜಯುಗ್ಮಗೆ |
ವಾಮದೇವಂಗೆಸಗಿದರು ಚೂಡಾಖ್ಯಕರ್ಮವನು || ೧೬

ಪರಿಪರಿಯ ದಾನಗಳನಿತ್ತಾ |
ದರಿಸಿ ವಿಪ್ರರ ದಿವ್ಯಭೋಜನ |
ವರಕುಸುಮತಾಂಬೂಲಗಂಧಾದಿಗಳಲುಪಚರಿಸಿ ||
ಪರಮವಿಭವದಿ ಬಂಧುಜನರನು |
ವರದುಕೂಲಾದಿಗಳನಿತ್ತುಪ |
ಚರಿಸಿ ಶಿವಗುರುವೆಸೆದ ನಿಜದಿಂ ಶಿವಗೆ ಗುರುವೆನಿಸಿ || ೧೭

ನೆರೆಘೃತಾಹುತಿಯಿಂದ ಪೆರ್ಚುವ |
ವರಶಿಖಿಯು ಮಹದೂಷ್ಮೆಯಂತಿರೆ |
ಕರಣತೇಜಃಪುಂಜವೆಸೆದುದು ಬಾಲಶಂಕರನ ||
ಗುರುಮುಖದಲಾವ್ಯಾಹೃತಿಯು ಸಹ |
ಪರಮುನಿಗೆಮಾಧ್ಯಯನವೆಸಗಿದ |
ಸುರವರಾರಾಧಿತನಪೇಕ್ಷಾರಹಿತಧೀಯುತನು ||

ಅಧಿಕತರವಹ ಕಾವ್ಯವೆಲ್ಲವ |
ಪದುಳದಿಂ ತಾನರಿದನಾತನು |
ಬುಧಜನಕೆ ಕಾಠಿಣ್ಯವೆನಿಸುವ ತರ್ಕಶಾಸ್ತ್ರದಲೀ ||
ಅಧಿಕರಿಗೆ ತಾನಧಿಕನಾದನು |
ವಿದಿತವಾಕ್ಯಾರ್ಥದಲಿ ಧಿಷಣಂ |
ಗುದಯಿಸದು ಶೇಮುಷಿಯು ವರಪರಮೇಶನಿದಿರಿನಲಿ ||

ಮೇದಿನಿಯ ಹೆಡೆವಣಿಯೊಳಾಂತಿರು |
ವಾದಿಶೇಷನು ಪೊಗಳಲರಿದೆನಿ |
ಪಾದಿಶಂಕರನತುಲವಾಗ್ಧೋರಣೆಯ ಚತುರತೆಯ ||
ವಾದಿಗಳು ಕಾಣುತಲೆ ಮೋಹಿತ |
ರಾದರಲ್ಲದೆ ಬಳಿಕ ಕಾಣರು |
ಹಾದಿಯನು ಮರುಮಾತನಾಡಲು ಮೃಡನಸಂಮುಖದೆ ||

ಜಾತರನು ಪಡೆದರಲಿ ಬಹುವಿ |
ಖ್ಯಾತನಹ ಶಿವಗುರುವು ತಾ ಸಂ |
ಜಾತನಾಗಿಹ ಕುಲವು ತನ್ನ ಬಂಧುಸಂಕುಲವು ||
ಪೂತವಾದವು ವಿಮಲಯಮುನಾ |
ತಾತನೋಪಾದಿಯಲಿ ಮೆರೆಯುವ |
ಜಾತನಿಂದಲೆನುತ್ತ ತಾಳಿದನತುಳಸಂಭ್ರಮವ ||

ದಿನದಿನಕೆ ಶಿವಗುರುವು ತನ್ನಯ ।
ತನುವಿನಲಿ ಜರೆ ತೋರುತಿಹುದನು ।
ಮನದೊಳೀಕ್ಷಿಸಿ ತನ್ನತನುಜಂಗುಕ್ತಮಾರ್ಗದಲಿ ॥
ಘನತರಬ್ರಹ್ಮೋಪದೇಶವ ।
ನನುವಿನಿಂ ವಿರಚಿಸಲು ಬಳಿಕೀ ।
ಮನಕೆ ಸಂತಸವೆನುತ ಚಿಂತಿಸುತಿರ್ದನಡಿಗಡಿಗೆ ॥ ೨೨

ಭೂತಳದಿ ರಂಜಿಸುವ ಸಾಕ್ಷಾತ್ ।
ಭೂತನಾಥಗೆ ವಿಭವದಿಂದಲ ।
ತೀತವಾದುದು ವರುಷ ಮೂರಾಬಳಿಕ ಶಿವಗುರುವು ॥
ಖ್ಯಾತವೆನುಲುಪನಯನಕರ್ಮವ ।
ನೀತನುಜಗೈದನೆಯ ಬರಿಸದೆ ।
ಸಾತಿಶಯದಿಂದೆಸಗಬೇಹುದೆನುತ್ತ ಮನದಂದ ॥ ೨೩

ಭೂಮಿಯಲಿ ನೆರೆದಿರುವ ಮನುಜ ।
ಸ್ತೋಮದಲಿ ತಾವಾರು ತಮ್ಮಯ ।
ಕಾಮಿತಾರ್ಥವ ಪಡೆದಿಹರು ಮೇಣಿಲ್ಲವೆಂಬುದನು ॥
ತಾಮರಸಖಜಾತನರಿವನೆ ।
ಸೋಮಧರನಂ ಪಡೆದ ಪಿತನನು ।
ಕಾಮಿಸಿದನೈ ಯಮಗೆ ದಯೆಯಿಲ್ಲೆಂಬುದದು ಪೊಸತೆ ॥ ೨೪

ವರವಿರಿಂಚಿಯು ಬರಹವಿನಿತೆಂ ।
ದರಿಯಬಾರದು ನರಗೆ ತಾನಾ ।
ಹರಗೆ ಪಿತನಾದಡೆಯು ತನ್ನಯ ಸುತನ ವೈಭವವ ॥
ಪರಿಕಿಸಲ್ಕಾಯುಷ್ಯಮಿಲ್ಲೆನೆ ।
ಧರೆಯೊಳಿತರರ ಪಾಡದಾವುದು ।
ವರಮುನಿಪಶೌನಕನೆ ಲಾಲಿಪುದೆಂದನಾಸುತ ॥ ೨೫

ಶಿವನಪೂಜಿಸಿ ಶಿವನಮೆಚ್ಚಿಸಿ |
ಶಿವನವರವನು ಪಡೆದು ಮತ್ತಾ |
ಶಿವನೆ ಸುತನಾಗಿರಲು ಲಾಲಿಸಿ ಪೋಷಿಸಿಯೆ ಶಿವನ ||
ಶಿವನನೋಡುತ ಶಿವನಜಾನಿಸಿ |
ಶಿವಮಯನುತಾನಾಗಿ ಶಿವಗುರು |
ಶಿವನಸಾಯುಜ್ಯವನು ಪಡೆದನು ಶಿವನಕರುಣದಲಿ || ೨೬

ಇಂತು ಶಿವಗುರು ತೊರೆದು ದೇಹವ |
ಕಂತುಹರಲೋಕವನು ಸೇರಲು |
ಕಾಂತೆಯಾರ್ಯಾಂಬಿಕೆಯು ಕಾಣುತ ಪತಿಕಳೇಬರವ ||
ಕಾಂತನಿಲ್ಲದಬಳಿಕ ಬದುಕುವು |
ದೆಂತು ತಾನೆನುತತುಲದುಃಖದಿ |
ನಿಂತನಿಲವಿನಲೊಲೆದುಬಿದ್ದಳು ಕವಿದ ಮೂರ್ಛೆಯಲಿ || ೨೭

ಚೇತರಿಸಿ ಬಳಿಕೆದ್ದು ತನ್ನಯ |
ನಾಥನನು ನೋಡುತ್ತ ದುಃಖದಿ |
ಕಾತರಿಸುತಲೆಕಾಂತ ತನ್ನನು ಕರುಣವಿಲ್ಲದಲೆ ||
ಏತಕೀಪರಿ ತೊರೆದೆ ಗತಿಯೇಂ |
ಭೂತಪತಿಯೊಲಿದಿತ್ತ ನಿನ್ನಯ |
ಜಾತನನು ನೀನಾರಿಗಿತ್ತೆಯೆನುತ್ತಲೊರಲಿದಳು || ೨೮

ಅಕಟ ವಿಪ್ರವರೇಣ್ಯ ನೀನೇ |
ಸಕಲಸಂಪದವೆಂದು ನಂಬಿರೆ |
ಮುಕುತಿರಾಜ್ಯವನೈದುವರೆ ನೀಂ ತೊರೆದು ನಿಜಸತಿಯ ||
ಮಕರಕೇತನವೈರಿ ತಾನೇ |
ಕಕಟ ನಿರ್ದಯನಾದನೆನ್ನುತ |
ಸಕಲಜನಮನಕರಗುವಂದದಲೊರಲಿದಳು ತರಳೆ || ೨೯

ತಾಯೆ ದುಃಖಿಪುದೇಕೆ ಲೋಕದ |
ಮಾಯೆಯಿದು ತಾನೈಸೆ ಜೀವಿನಿ |
ಕಾಯಕೀಪರಿ ಮರಣವೆಂಬುದು ತಪ್ಪಬಾರದೆಲೆ ||
ಆಯುಬೀಯುವ ನೊಂದನೆಣಿಸದೆ |
ಕಾಯಜಾರಿಯ ನೆನೆದು ಧೈರ್ಯವ |
ತಾಯೆ ಪಡುವುದೆನುತ್ತ ಸಂತೈಸಿದನು ಶಂಕರನು || ೨೦

ಕಲಿತಬಾಂಧವರಿಂದ ಶೋಕಾ |
ನಲಗೆ ಬಿಡುಗಡೆಯಾಯ್ತು ಬಳಿಕಾ |
ಲಲನೆ ಸುತನೊಡಗೂಡಿ ಬಾಂಧವರಿಂದ ನಿಜಪತಿಗೆ ||
ಜ್ವಲನಸಂಸ್ಕಾರವನು ಮಾಡಿಸು |
ತಳಲುಮಿಗಿಲಾಗೂರ್ಧ್ವಕರ್ಮವ |
ನಿಳಿಯುವಿಬುಧರು ಮೆಚ್ಚುವಂಪದಲೆಸಗಿದಳು ಬಳಿಕ || ೨೧

ಪತಿವಿಯೋಗದ ದುಃಖವದು ತ |
ತ್ಸುತವಿಲೋಕನದಿಂದ ತಗ್ಗಲು |
ಸತಿಯು ಬಾಲನಪೊರೆಯುತಿರ್ದಳು ಕಾಲಟಿಯೊಳಾಗ ||
ಪತಿತಪಾವನಶಿವನು ಜನನಿಯ |
ಮತಿಗೆ ಸಂತಸವಪ್ಪತೆರದಿಂ |
ಸತತವರ್ತಿಸಿ ನರರಪರಿಯಿಂದೆಸೆದನತಿಮುದದೆ || ೨೨

ಭೂರಿಸದ್ಗುಣದಿಂದ ಮೆರೆವ ಕು |
ಮಾರನನು ಕಾಣುತ್ತ ಬಳಿಕಾ ||
ನಾರಿಸಂತಸತಳೆದು ತನ್ನಯಬಾಲಕಂಗೊಲಿದು ||
ಸೇರಿಸಲಿ ದೀರ್ಘಾಯುವನು ಮದ |
ನಾರಿಯೆನ್ನುತ ನುತಿಸಳಗಜಾ |
ನಾರಿಯರಸನ ಸುರನುತಶ್ರೀಕಂಠದೇವನನು || ೨೩

ಸಂಧಿ ೬ಕ್ಕೆ ಪದ್ಯ ೧೯೪ ಕ್ಕೆ ಮಂಗಳ.

# ಏಳನೆಯ ಸಂಧಿ.



ಸೂಚನೆ || ಪಡೆದುತಾ ಬಹ್ಮೋಪದೇಶವ |
ವೃಡನು ವಿದ್ಯೆಯಕಲಿತು ದಯೆಯಿಂ |
ಕೊಡಿಸಿದನು ಭಾಗ್ಯವನು ಬಡವಗೆ ಸಿರಿಯದೆಸೆಯಿಂದ ||

ಕೇಳಿರೈ ಮುನಿಗಳಿರ ಪರಮುವಿ |
ಶಾಲಮತಿಶಂಕರನ ಪಿತನಾ |
ಕಾಲಕಾಲನ ಪದವ ಪಡೆದಾಬಳಿಕ ವತ್ಸರದ ||
ಕಾಲಕಳೆದುದು ಮನುಜಲೀಲಾ |
ಲೋಲಗಾದುದು ನಾಲ್ಕು ಬರಿಸವು |
ಮೇಲೆ ವರಮಧುಸಮಯವೆಸೆದುದು ಮೇದಿನಿಯೊಳಾಗ ||

ಹಾರಿತಗ್ಗದತಂಪು ನದಿಗಳ |
ತೀರದಲಿ ಬಲುಹಜ್ಜೆಯಾದವು |
ಭೂರಿತಾಪವ ತಡೆಯಲಾರದೆ ರಾಜಹಂಸೆಗಳು ||
ಸೇರಿದವು ನೆಳಲುಗಳ ಬಳಿಕಾ |
ಮಾರುತನ ಬಹುಮಂದಗಮನವ |
ಹಾರವಿಸಿ ಜನವಿದಿರುಗೊಂಡುದು ಸಾರುತಲೆ ವನವ |

ಫಲಭರಿತಮಾಮರನ ಕೆಂಪಿನ |
ತಳಿರೆಸೆವ ಘನತರದಶೋಕವ |
ಕಲಿತ ಷಟ್ಚರಣಗಳ ಪೊರೆಯುವ ಕಮಲಪಙ್ತಿಗಳ ||
ಎಳಲತೆಯಸೊಗೆಯಿಸುವ ಗುಂಪನು |
ತಳೆದ ತರುಗಳನೇರಿ ವಿಭವದ |
ಉಲಿವ ಪಕ್ಷಿಗಳಿಂದಲೆಸೆದುದು ವರವಸಂತವದು |




ಶ್ರೀ ಶಂಕರಸ್ಯ ಉಪನಯನಮಹೋತ್ಸವಃ.

ಭ್ರಮರಗಳಿಗತಿಮುದದೆ ನೀಡುತ |
ಸುಮುಕುಲದ ಮಕರಂದಸುಧೆಯನು |
ವಿಮಲಪರಭೃತಕುಲಕೆ ಗಳದಾಮಯವ ಪರಿಹರಿಸಿ || ೪
ಸಮತೆಯಿಂ ಬಹುವಿಧದ ಕಾವ್ಯವ |
ಸುಮನಸದ ಭೋಗಿಗಳಿಗೀವುತ |
ಲಮುಮಸುರಭಿಯು ಮೆರೆದುದಾವರಸುರಭಿಯಂದದಲಿ || ೪

ಇಂತು ವೈಭವದಿಂದಲೆಸೆವ ವ |
ಸಂತಕಾಲದಿ ತನ್ನಸುತನಿಗೆ |
ಸಂತಸದಲುಪನಯನಕರ್ಮವನೆಸಗಬೇಕೆನುತ ||
ಸ್ವಾಂತದಲಿ ನಿಶ್ಚಯಿಸಿ ಶಿವಗುರು |
ಕಾಂತೆ ಬಾಂಧವರುಗಳ ಬರಿಸುತ |
ನಿಂತು ಕರಗಳಮುಗಿದು ವಿನಯದಿ ನುಡಿದಳಿಂತೆನುತ || ೫

ಬಂಧುಜನವಾಲಿಪುದು ತನ್ನಯ |
ನಂದನಗೆ ಶಂಕರಗೆ ಮೌಂಜೀ |
ಬಂಧನವವಿರಚಿಸಲು ಕಾಲವು ಯೋಗ್ಯವಾಗಿಹದೆ ||
ತಂದೆಯಿಲ್ಲದ ಸುತಗೆ ಬಹುಕೃಪೆ |
ಯಿಂದಲುಪನಯನವನು ವಿರಚಿಪು |
ದೆಂದು ವಿನಯದಿ ಬೇಡಿಕೊಂಡಳು ವನಿತೆ ಭೂಸುರರ || ೬

ಬ್ರಾಹ್ಮಣಸ್ತ್ರೀನುಡಿಯ ಕೇಳ್ದಾ |
ಬ್ರಾಹ್ಮಣರು ಪೂರ್ವದಲಿ ಮನುವಾ |
ಬ್ರಹ್ಮವರ್ಚಸಕಾಮನಿಗೆ ನೆರೆ ಪಂಚವಾಬ್ದದಲಿ ||
ಬ್ರಹ್ಮಮಯದುಪದೇಶವದು ಸು |
ಬ್ರಾಹ್ಮಣರೊಳಹುದೆಂದು ತನ್ನಾ |
ಬ್ರಹ್ಮವಿದರೊಪ್ಪಿರುವ ಸೂತ್ರದಿ ಪೇಳಿಹನು ಮುದದಿ || ೭

ವಿದಿತಮೆನೆ ಮನು ಪೇಳ್ದ ತೆರದಿಂ |
ಪದುಳದಿಂದುಪನಯನಕರ್ಮವ |
ಸದಮಲಗೆ ಶಂಕರಗೆ ವಿರಚಿಸಬಹುದು ನೀನೆಂದು ||
ಮುದದಿ ವಿಪ್ರರು ನುಡಿಯೆ ಕೇಳುತ |
ಸುದತಿ ಸಂಭ್ರಮವಾಂತು ತನ್ನಯ |
ಸದನಕ್ಕೈತಂದವರ ಮನ್ನಿಸಿ ಕಳುಹಿದಳು ಬಳಿಕ ||

ಪರಿಪರಿಯಧಾನ್ಯಗಳನೆಲ್ಲವ |
ತರಿಸಿ ಗುಡಶರ್ಕರೆಯ ಮೇಣಾ |
ಸುರುಚಿರದ ಗೋಘೃತವ ತೈಲವನಖಿಳವಸ್ತುಗಳ ||
ತರಿಸಿ ಬಳಿಕಾ ವಿಪ್ರವರ್ಯರ |
ಬರಿಸಿ ಸುಮೂಹೂರ್ತವನು ನಿಯಮಿಸಿ |
ತರುಣಿ ಸಂಭ್ರಮಿಸುತ್ತಲಿರ್ದಳು ವರಮಹೋತ್ಸವಕೆ ||

ಕರೆಸಲಾಬಾಂಧವರನೆಲ್ಲರು |
ವರಮುಹೂರ್ತದ ದಿವಸ ನೆರೆದರು |
ನೆರೆಯಲಂಕರಿಸಿದರು ತೋರಣದಿಂದ ಸದನವನು ||
ತರುಣಿಯರು ವರರಂಗವಲ್ಲಿಯ |
ವಿರಚಿಸುತ ಮಂಗಳದ ಪೀಠವ |
ನಿರಿಸಿ ಶುಭಗಾನಗಳ ಪಾಡುತ ಕರೆದರಾ ಹರನ ||

ಸಾಮಗಾನಪ್ರೇಮಶಂಕರ |
ನಾಮಹಿಳೆಯರ ಗಾನದಲಿ ಸು |
ಪ್ರೇಮವಾಂತನು ಬಂದು ತಾಯ್ಗಭಿನಮಿಸಿ ಪೀಠದೊಳು ||
ಕಾಮಹರ ಮಂಡಿಸಿದನಾಗಲು |
ಕಾಮಿನೀಜನ ಸಕಲಲೋಕ |
ಕ್ಷೇಮಕಾರಣಶಿವನ ಹರಸಿದರೊತ್ತಿ ತೈಲವನು ||

ಗಂಗೆಯಂಧರಿಸಿದಗೆ ಸತಿಯರು |
ಮಂಗಳಸ್ನಾನವನುಗೈಸಿ ಭು |
ಜಂಗಭೂಷಗೆ ತೊಡಿಸಿದರು ವರಭೂಷಣಂಗಳನು ||
ಜಂಗಮಸ್ಥಾವರದ ಚೈತ |
ನ್ಯಾಂಗರಕ್ಷಗೆ ರಚಿಸೆ ರಕ್ಷೆಯು |
ಕಂಗೊಳಿಪ ಪೀಠದಲಿ ಬಳಿಕಾ ಸ್ಥಾಣುಮಂಡಿಸಿದ || ೧೨

ಭರದಿ ವಿಪ್ರರು ನೆರೆದು ವಾಚಿಸಿ |
ಪರಮಪುಣ್ಯಾಹವನು ನಾಂದೀ |
ಸುರರ ಪೂಜಿಸಿ ಹೋಮದಿಂ ಸುರಕುಲವನರ್ಚಿಸುತ ||
ವರನಿಗಮಮಂತ್ರಗಳ ಪಠಿಸುತ |
ಕರಿವರಾಜಿನಧರಗೆ ವೇಷ್ಟಿಯ |
ನುರುದಿಗಂಬರಗೆಂದು ಕೌಪೀನವನು ಕಟ್ಟಿದರು || ೧೩

ವೇದಮಂತ್ರವನರುಹಿಕೊಟ್ಟರು |
ವೇದವೇದ್ಯಗೆ ಯಜ್ಞಸೂತ್ರವ |
ಮೋದದಿಂ ತೊಡಿಸಿದರು ಗಳದೊಳು ಯಜ್ಞರೂಪನಿಗೆ ||
ಆದಿಶೇಷನ ಕಟಿಗೆ ಬಿಗಿದಿಹ |
ನಾದಿಸಿದ್ಧಗೆ ಕುಶೆಯಮೌಂಜಿಯ |
ನಾದರದಿಕಟ್ಟಿದರು ವಿಪ್ರರು ವಿಧಿವಿಹಿತಮೆನಲು || ೧೪

ಆರ ವರಮಂತ್ರೋಪದೇಶದಿ |
ತಾರಕಾರಿಯ ಜನನಿ ಜಗದೊಳು |
ಭೂರಿಸೌಭಾಗ್ಯವನು ಪಡೆಯುತ ರಂಜಿಸುತ್ತಿಹಳೊ ||
ಆರು ಪಂಚಬ್ರಹ್ಮರೂಪದಿ |
ತೋರುತಿಹನಾಬ್ರಹ್ಮವಂದ್ಯಗೆ |
ಧಾರಿಣೀಸುರರಿತ್ತರಾಬ್ರಹ್ಮೋಪದೇಶವನು || ೧೫

ಇಂತು ತಳೆದುಪದೇಶವನು ತಾ ।
ಕಂತುರಿಪುನಾಬಂಧುಜನಕ ।
ತ್ಯಂತಹರ್ಷವನಿತ್ತು ವೈರೋಚಿನಿಯ ಮಂದಿರಕೆ ॥
ಸಂತಸದೊಳಂದೈದಿ ಬಂದಾ ।
ಕಂತುಪಿತನಾಮನನ ತೆರದಿಂ ।
ದಾಂತುವಟುರೂಪವನು ರಂಜಿಸುತಿರ್ದನತಿಶಯದೆ ॥

•

ಮಾರವೈರಿಯು ರಜತಶೈಲದೆ ।
ಗೌರಿಯನು ಗಣಪತಿಯ ಮೋಹಕು ।
ಮಾರನನು ಸರ್ವವನು ಬಿಟ್ಟೀಧರೆಗೆ ಬಂದಿರಲು ॥
ಆರನಾದರು ಬಿಡಲಿ ತಾನು ಪು ।
ರಾರಿಯನು ಬಿಡಲೊಲ್ಲೆನೆನುತವೆ ।
ಸಾರಿದುದು ಶಂಕರನ ಭಿಕ್ಷಾವೃತ್ತಿ ತಾಂಬಿಡದೆ ॥

ಅಭವರೂಪಂಗುಪನಯನವನು ।
ವಿಭವದಿಂದೆಸಗಿದರು ಬಾಂಧವ ।
ರಭಿಜನಾಮಲತಿಲಕಗಿತ್ತರು ಹರಸಿ ಮುಯ್ಗಳನು ॥
ಅಭಿಮತದಲಾರ್ಯಾಂಬೆ ವಿಪ್ರರ ।
ಸಭೆಯನಾರಾಧಿಸುತ ತನಯಗೆ ।
ಶುಭವ ಬಯಸುತ್ತಿತ್ತಳಗಣಿತವಾದ ದಾನಗಳ ॥

ಬಹುವಿಧದ ಭಕ್ಷ್ಯಗಳ ಭೋಜ್ಯವ ।
ವಿಹಿತದಿಂದುಣಬಡಿಸಿ ವಿಪ್ರರ ।
ಬಹುಳ ಪರಿತೋಷದಲಿ ತೃಪ್ತಿಯಪಡಿಸುತಾಸುದತೀ ॥
ಬಹುವಿಧಾಲಂಕಾರ ವಸ್ತುವ ।
ವಿಹಿತದಕ್ಷಿಣೆಸಹಿತಲಿತ್ತಳು ।
ಸಹಜ ಸದ್ಭಕ್ತಿಯಲಿ ಮನ್ನಿಸಿದಳು ನಯೋಕ್ತಿಯಲಿ ॥

ವರನಿಗಮಮಂತ್ರಗಳು ಮತ್ತಾ |
ಸುರವರರು ಬಹುಮಂತ್ರದೇವಿಯು |
ಹರುವಿರಿಂಚಿ ಮುರಾರಿ ದಿಕ್ಪಾಲಕರು ಮುನಿವರರು ||
ನಿರತ ಸಂಧ್ಯಾವೇಳೆಯೊಳು ತನ |
ಗೆರಗುತಿರೆ ಶಂಕರನು ತಾನಾ |
ಸುರರಿಗೆರಗುವನೊಲಿದು ಸಂಧ್ಯಾಕರ್ಮವನು ರಚಿಸಿ || ೨೦

ವರಚತುರ್ಥಿಯ ದಿವಸ ಸಂಜೆಯೊ |
ಳಿರದೆ ಬಾಂಧವರೆಲ್ಲ ಕೂಡಲು |
ಪರನು ಸಂಭ್ರಮದಿಂದ ಬಂದಶ್ವತ್ಥಭೂರುಹವ ||
ಪರಮಸುಶ್ರದ್ಧೆಯಲಿ ಪೂಜಿಸಿ |
ಕರವಜೋಡಿಸಿ ನಮಿಸುತಿರಲಾ |
ಸುರರು ಜಯರವದಿಂದ ಕರೆದರು ಕುಸುಮವೃಷ್ಟಿಗಳ || ೨೧

ಬಳಿಕ ಬಾಂಧವರೊಡನೆ ತನ್ನಯ |
ನಿಳಯಕೈದುತ ಜನನಿಯಂಘ್ರಿಗೆ |
ಸಲೆ ಸುಭಕ್ತಿಯೊಳೆರಗೆ ತನುಜನ ತೆಗೆದು ಬಿಗಿಯಪ್ಪಿ ||
ಲಲನೆಯಾರ್ಯಾಂಬಿಕೆಯು ಬಾಂಧವ |
ಕುಲವ ಮನ್ನಿಸಿ ಬೀಳುಕೊಟ್ಟಳು |
ಕಲುಷದೂರನ ಪೊಗಳುತೈದಿದರವರು ನಿಜಗೃಹವ || ೨೨

ತದುಪರಿಯೊಳಾ ಬಾಲಶಂಕರ |
ನುದಿತಸಂಭ್ರಮದಿಂದ ಸದ್ಗುರು |
ಸದನಕೈತಂದಭಿನಮಿಸಿ ಬಹುಭಕ್ತಿಭಾವದಲಿ ||
ಪದ ಜಟೆ ಕ್ರಮ ಘನವು ಸಹಿತಲೆ |
ಸದಮಲಶ್ರುತಿತತಿಯನೆಲ್ಲವ |
ವಿದಿತಮೆನೆ ಪಠಿಸುತ್ತಲಿರ್ದನು ಗುರುವ ಸೇವಿಸುತ || ೨೩

ವೇದ ವೇದಾಂಗಗಳನೆಲ್ಲವ |
ಮೋದದಿಂ ತಾಂ ತಿಳಿದು ಬಳಿಕಾ |
ವೇದದರ್ಥವನರಿದನಾ ವೇದಾಂತವಿಗ್ರಹನು ||
ಸಾದರನೊಳಿವನೊಡನೆ ವಿದ್ಯೆಯ |
ಸಾಧಿಸುವ ವಟುಗಳ ಸಮರ್ಥತೆ |
ಯ್ಯೆದದಾದುದನರಿತು ಗುರುವಚ್ಚರಿಯ ತಾಳಿದನು ||

ದ್ವಿತ್ರಿಮಾಸದಿ ಸಕಲ ವಿದ್ಯೆಯ |
ಚಿತ್ರಮೆನೆ ಕಲಿತಾಗ ಶಿವಗುರು |
ಪುತ್ರನಾ ಗುರುವರಗೆ ಸಮನೆಂದೆನಿಸಿ ಜಗದೊಳಗೆ ||
ಸೂತ್ರ ಮೂರನು ತಿಳಿದು ಪರಮಪ |
ವಿತ್ರಚರಿತನು ಜಗವ ಬೆಳಗುವ |
ಚಿತ್ರಭಾನುವಿನಂತೆ ತೇಜಃಪುಂಜದಿಂದೆಸೆದ ||

ಶ್ರುತಿಪಠನದೊಳು ವಿಧಿಗೆ ಮೇಣಾ |
ಶ್ರುತಿಷಡಂಗದಿ ಗಾರ್ಗ್ಯಮುನಿಗಾ |
ಶ್ರುತಿತತಿಯ ತಾತ್ಪರ್ಯದರ್ಥದಿ ಸುರರ ಗುರುವರಗೆ ||
ಶ್ರುತಿವಿಹಿತಕರ್ಮದಲಿ ಜೈಮಿನಿ |
ಗತುಳಬೋಧೆಯಲಾಪರಾಶರ |
ಸುತಗೆ ಸಮನೆಂದೆನಿಸಿದನು ವಟು ವಾಣೀವಿಲಾಸದಲೀ ||

ಅರಿತು ಕಪಿಲನ ಸಾಂಖ್ಯಸೂತ್ರವ |
ವರಪತಂಜಲಿಯೋಗಸೂತ್ರವ |
ಪರಮವೇದಾಂತವನು ತೋರ್ಪಾ ಬ್ರಹ್ಮಸೂತ್ರವನು ||
ನೆರೆಚತುರ್ದಶವಿದ್ಯೆಯೆಲ್ಲವ |
ಗುರುವಿನೆಡೆಯೊಳಗರಿತು ಶಂಕರ |
ಗುರುಗೃಹದೊಳಿರುತಿರ್ದ ತನ್ನಾಶ್ರಮದ ಧರ್ಮದಲಿ ||

ಒಂದುದಿನ ಶಂಕರನು ವಿಪ್ರರ |
ಮಂದಿರದ ಸಾಲಿನಲಿ ಭಿಕ್ಷ |
ಕ್ಕೆಂದು ಬರುತಾ ನಿಳಯನಿಳಯವ ಪೊಗುತಲನ್ನವನು ||
ನಿಂದು ಕೈಗೊಂಡಿರದೆ ಬರುತಿರೆ |
ಮುಂದೆ ಕಂಡನು ವಿಪ್ರನೊಬ್ಬನ |
ಮಂದಿರವ ದಾರಿದ್ರ್ಯದಿಂ ಕಡುನೊಂದುಬಳಲುವನ || ೨೮

ಭವತಿಭಿಕ್ಷಾಂದೇಹಿ ಯೆಂದಾ |
ಭವನು ಬಾಗಿಲ ಬಳಿಯನೈದಿರೆ |
ಯುವತಿ ಕಂಡಳು ನೊಂದಳತಿಶಯದುಗುಡಭಾರದಲಿ ||
ಅವನಿಯಲಿ ಬಡತನದಿ ಬಾಳುವ |
ಬವಣೆಗೆಯ ಸುಡಲೆನುತ ತನ್ನಯ |
ಭವನಕೈದಿಹ ವಟುವಿಗೆಂದಳು ವಿನಯಪರಳಾಗಿ || ೨೯

ಎಲೆ ವಟುವೆ ನಿನಗಿಂದು ಭಿಕ್ಷವ |
ನೊಲಿದು ನೀಡುವ ಪರಮಭಾಗ್ಯವ |
ನಳಿನಭವನೆನಗೀಯಲೊಲ್ಲದೆ ವಂಚಿಸಿಹನೀಗ ||
ನಲುಗುತಿಹೆ ಬಡತನದಿ ನಾನೀ |
ನೆಲೆಗೆ ನೀನಗೀಯುವಡೆ ಶುಷ್ಕಾ |
ಮಲಕವೊಂದಿದೆ ಕೊಳ್ಳೆನುತ ನೀಡಿದಳು ದೈನ್ಯದಲಿ || ೩೨

ಸುದತಿ ನೀಡಿದ ನೆಲ್ಲಿಕಾಯನು |
ಮುದದೊಳಭವನು ಕೊಂಡು ಬಳಿಕಲೆ ||
ಸದಯನಾದನು ಪರಮತತ್ವಜ್ಞಾನಸಂಡಿತನು ||
ಒದವಿದತಿಬಡತನವ ವಿಪ್ರನ |
ಸುದತಿಗುರೆಪರಿಹರಿಪೆನೆಂದಾ |
ಮದನಜನಕನ ಸತಿಯನುತಿಸಿದನಂದು ಭಕ್ತಿಯಲಿ || ೩೧

ಕ್ಷೀರವಾರಿಧಿದುಹಿತೆ ಸುರನುತೆ ।
ವಾರಿಜಾಂಬಕದಯಿತೆ ಸುಚರಿತೆ ।
ಭೂರಿಮಂಗಳದಾತೆ ಸಾರಸಜಾತೆ ವಿಧಿಮಾತೆ ॥
ಘೋರತರದಾರಿದ್ರ್ಯದುಃಖವಿ ।
ದಾರಣೈಕಸಮರ್ಥೆ ಕರುಣಿಸು ।
ಪಾರಿಕಾಂಕ್ಷಿಪ್ರವರಸನ್ನುತೆ ವರಜಗನ್ಮಾತೆ ॥ ೩೩

ಇಂತು ನುತಿಸಲು ಕೈಟಭಾಂತಕ ।
ಕಾಂತೆ ಮನದೊಳು ಬಹುಳಸಮ್ಮುದ ।
ವಾಂತು ವಟುವರನೆಡೆಗೆ ಬಂದಳು ಪರಮವಿಭವದಲಿ ॥
ಚಿಂತಿತಾರ್ಥವನಿತ್ತು ವಿಪ್ರನ ।
ಕಾಂತೆಯನು ಸಂತವಿಸು ನೀನೆನೆ ।
ಕಂತುವೈರಿಯ ನೋಡಿ ಬಳಿಕಿಂತೆಂದಳಾ ಕಮಲೆ ॥ ೩೩

ಅವಧರಿಸು ವಟುವರ್ಯ ಭಾಗ್ಯವ ।
ನಿವಳಿಗೀವೊಡೆ ಪೂರ್ವಜನ್ಮದೊ ।
ಳಿವಳು ತಾನೇನುವನು ಮಾಡಿಮದಿಲ್ಲ ಧರ್ಮವನು ॥
ಅವನಿಯಮರರ ಪೂಜೆಗೈಯದೆ ।
ಭುವನದಲಿ ಜನಿಸಿದರೆ ಬಹುಭಾ ।
ಗ್ಯವನು ನೀಡುವೆನೆಂತು ತಾನೆನೆ ಮತ್ತೆ ಹರನುಡಿದ ॥ ೩೪

ಆದೊಡೆಲೆ ಭಾರ್ಗವಿಯೆ ಲಾಲಿಸು ।
ಮೇದಿನಿಯೊಳುತ್ಕಟದ ಪುಣ್ಯವ ॥
ನಾದರದಿ ರಚಿಸಿದೊಡೆ ಫಲವಹುದೈಸೆ ವಹಿಲದಲಿ ॥
ಮೇದಿನೀಸುರವನಿತೆ ತನಗಿಂ ।
ದಾದರಿಸಿ ಕೊಟ್ಟೆಹಳು ಭಿಕ್ಷವ ।
ನೈದೆ ತತ್ಫಲದಿಂದಲೊಲಿದೀಯುವುದು ಭಾಗ್ಯವನು ॥ ೩೫

ಹರನು ನುಡಿದುದ ಕೇಳಿ ಬಳಿಕಾ |
ಸರಸಿಜಾಂಬಕನರಸಿ ಸಂತಸ |
ವೆರೆಸಿ ಕರೆದಳು ಕರದಿ ಕನಕಾಮಲಕ ವರ್ಷವನು ||
ಧರಣಿಯುಮರನ ನಿಳಯ ತುಂಬಲು |
ಸುರಿಯೆ ಹೇಮಾಮಲಕವಾಕ್ಷಣ |
ಸರಿದಳಾಭಾರ್ಗವಿಯು ಪೊಗಳುತಲಾದಿಶಂಕರನ || ೩೬

ಧರಣಿಯಮರನತರುಣಿ ಬಳಿಕಾ |
ಹರಗೆವಂದಿಸಿ ನುತಿಸಿ ಕಳುಹಿದ |
ಪರಿಯನಿದ ಕಾಣುತ್ತ ವಿಸ್ಮಯಗೊಂಡು ಜನನಿವಹ ||
ತರುಣಿಯಾರ್ಯಾಂಬಿಕೆಯ ಪುತ್ರನು |
ಧರೆಯ ಸುರತರುವೆಂದು ಮುದದಿಂ ||
ಸುರನುತ ಶ್ರೀಕಂಠದೇವನ ನಮಿಸಿ ನುತಿಸಿದುದು || ೩೭

ಸಂಧಿ ಏಳಕ್ಕೆ ಪದ್ಯ ೨೩೧ಕ್ಕೆ ಮಂಗಳ.



# ಎಂಟನೆಯ ಸಂಧಿ.



ಸೂಚನೆ|| ಸುರವರಾರ್ಚಿತಚರಣಯುಗ್ಮನು |
ಗುರುಗೃಹವ ಪೊರಮಟ್ಟು ತನ್ನಯ |
ವರಜನನಿಯಿದ್ದೆಡೆಗೆ ಬಂದಾಕೆಯನು ಸೇವಿಸಿದ ||

ಚಿತ್ತವಿಸು ಭೃಗುವಂಶಜಾತರೊ |
ಳುತ್ತಮನೆ ಶೌನಕನೆ ವಿಪ್ರನ |
ಮತ್ತಕಾಶಿನಿ ಶಿಷ್ಯಫಲವನು ತನಕೆ ಕೊಟ್ಟುದಕೆ ||
ಕೃತ್ತಿವಾಸನು ಬಹುಳಭಾಗ್ಯವ |
ನಿತ್ತು ಪೊರೆದಾಕೆಯನು ಸೌಗತ |
ಮತ್ತವಾರಣಸಿಂಹನಿರ್ದನು ತನ್ನ ಗುರುಗೃಹದೆ || ೧

ಧರಣಿಯಲಿ ಪರತರಸುಧರ್ಮವು ।
ಸುರುಚಿರಾರ್ಥವು ಕಾಮಮೋಕ್ಷವು ।
ನರಗೆ ವಿದ್ಯೆಯಿನ್ನೈದೆ ಲಭಿಪವು ವಿದ್ಯೆದೊರೆಯುವಡೆ ॥
ಗುರುಸಪರ್ಯೆಯೆ ಮೂಲವದರಿಂ ।
ಗುರುಚರಣಸೇವೆಯನು ನರರಾ ।
ಚರಿಪುದೆಂಬುದ ಬೋಧಿಪಂಪದಲಿರ್ದನಾಶಿವನು ॥

ತರಣಿಯುದಯಕೆ ಮುನ್ನವೇಳುತ ।
ವರನದಿಯತೀರವನು ಸಾರುತ ।
ಚರಿಸುತಾಸ್ನಾನಾದಿ ವರ್ಣಕ್ರಿಯೆಯನನುವಿನಲಿ ॥
ಗುರುಸದನಕೈತಂದು ಗುರುವರ ।
ಚರಣಕಾನತನಾಗಿ ಬಳಿಕಾ ।
ಹರನುಪಾರ್ಜಿಸುತಿರ್ದನುಪನಿಷದಾದಿವಿದ್ಯೆಗಳ ॥

ಬಳಿಕ ಮಧ್ಯಾಹ್ನದಲಿ ವಿಪ್ರರ ।
ನಿಳಯದುರುಭಿಕ್ಷಾನ್ನದಿಂದಲೆ ।
ತಳೆವ ತೃಪ್ತಿಯ ನಖಿಳಲೋಕದ ಜೀವಜಾಲವನು ॥
ಒಲಿದು ತುಷ್ಟಿಯಪಡಿಸಿ ಪೊರೆಯುವ ।
ಲಲಿತಕಾಯನು ಮತ್ತೆ ಗುರುವಿನ ।
ನಿಳಯವನು ಸಾರುವನು ಪಠಿಸುವನಖಿಳವಿದ್ಯೆಗಳ ॥

ಸಕಲಲೋಕಕ್ಕಧಿಕಗುರುವೆಂ ।
ದಖಿಳವೇದವು ಸಾರುತಿರಲಾ ।
ಮುಕುತಿಯೊಡೆಯನು ತನ್ನ ದೈವತ್ವವನುಬೀರಿರಿಸಿ ॥
ಮುಕುಳಕರಪುಟನಾಗಿ ಭಯಭರ ।
ಭಕುತಿಯಲಿ ಗುರಪದಕೆ ನಮಿಸುವ ।
ನಕುಟಿಲನು ವಿರಚಿಸುವ ಶುಶ್ರೂಷೆಯನುದಿನದಿನದೆ ॥

ಶಾಂತರೂಪನು ಮನುಜರೂಪನ |
ನಾಂತು ಸಂತತ ತನ್ನನೆನೆವರ |
ಚಿಂತಿತಾರ್ಥವ ಸಲಿಸುತಿರ್ದನು ಕಾಲಟಿಯೊಳಾಗ |
ಇಂತೆಸೆವ ಶಂಕರನ ಬಹುಶುಭ |
ವಾಂತ ದಿವ್ಯಾವಯದ ಸೊಬಗನ |
ನಂತ ವಿವರಿಪೊಡರಿದೆನಲು ಸುಲಭವೆ ಜಡಾತ್ಮರಿಗೆ || ೬

ಸುರುಗುರುದ್ರೋಹವನು ಗೈದಿಹ |
ಸರಸಿಜಾರಿಯು ಹರನು ಪಾಪದಿ |
ಧರೆಗೆ ಮೆಟ್ಟಲು ಬಳಿಕಲಾತನ ಕಿರಣ ಚರಣದಲಿ ||
ಭರಿತವಾಗಿಹತೆರದಿ ಸಂತತ |
ಧರೆಗೆ ಪಾವನವಾದ ಶಂಕರ |
ಚರಣವಾದ್ವಿಜರಾಜಕರದಿಂ ಶೋಭಿಪುದು ಮುದದಿ || ೭

ಯಮುನ ವಕ್ಷಕೆ ಕಠಿಣ ವರಸಂ |
ಯಮಿಯ ಹೃದಯಕೆ ಲಲಿತವಾಗಿಹ |
ಸುಮಶರಾಂತಕನತುಲಚರಣಗಳಂತೆ ಶಂಕರನ |
ವಿಮಲಪದಯುಗ್ಮವದು ಶಾಂತರ |
ವಿಮಲಹೃದಯಕೆ ಲಲಿತ ಸೌಗತ |
ಕುಮತಿಗಳ ಹೃಚ್ಛೂಲ ಮೆಂದೆನೆ ಸತತ ರಾಜಿಪುದು || ೮

ವರಪಯೋಧಿಯು ಕಡೆವ ಸಮಯದೆ |
ದೊರೆತ ಪಾಲ್ನೆನೆ ಮೆತ್ತಿಕೊಂಡಿಹ |
ಸುರಪನೈರಾವತದ ಬರಿಗೈಯೆನಲು ಶಂಕರನ ||
ವರಘನಳವಸ್ತ್ರವದು ತಾನಾ |
ವರಿಸಿಕೊಂಡಿಹ ಸುರುಚಿರಾಂಕಗ |
ಳಿರದೆ ವಿಭ್ರಾಜಿಸುತಲಿರ್ದವು ನೋಳ್ಪವರ ಮನಕೆ || ೯

ಸ್ಫಟಿಕಶೈಲವ ಬಳಸಿಕೊಂಡಿಹ |
ಪಟುತರದ ವರಹೇಮಲತೆಯೊಲು |
ವಟುವರನ ಧವಳತರದಿವ್ಯಶರೀರಮಧ್ಯದಲಿ ||
ಕಟಿಯ ಮೇಖಲೆ ಮೆರೆಯುತಿರೆ ವರ |
ವಟವಿಟಪಿ ಮೂಲದಲಿ ರಂಜಿಪ |
ಜಟೆಮೃಗಾಜಿನಧಾರಿಯಂದದಲೆಸೆದನಾವಟುವು || ೧೦

ವೇದ ದೂಷಕರೆನಿಪ ದುರ್ಮತ |
ವಾದಿಗಳ ದೆಸೆಯಿಂದ ನೊಂದಿಹ |
ವೇದವನು ಸಂತೈಸಿ ತನ್ನಯ ಕರದೊಳಿಂಬಿಟ್ಟು ||
ಮೋದದಿಂ ಪಾಲಿಸುವ ತೆರದಲಿ |
ವೇದಪುಸ್ತಕಗಳನು ಪಿಡಿದಿಹ |
ವೇದವೇದ್ಯನ ವಾಮಕರತಳ ನೆರೆವಿರಾಜಿಪುದು || ೧೧

ಗ್ಲಾನಿಯನು ಪರಿಹರಿಸಿ ಭಕ್ತಾವಿ |
ತಾನವನು ಪೊರೆಯಲ್ಕೆ ದಯದಿಂ |
ಜ್ಞಾನಮುದ್ರೆಯ ತೋರಿ ಬೋಧಿಪತೆರದೆ ಭಾವಿಸಲು ||
ಮೀನಕೇತನವೈರಿ ಸಂತತ |
ಸಾನುರಾಗದಿ ಬರೆಯುತಿರ್ಪಸ |
ಮಾನತೇಜೋಭರಿತದಕ್ಷಿಣಕರ ವಿರಾಜಿಪುದು || ೧೨

ವರದಿವಿಜಲೋಕದಲಿ ರಂಜಿಪ |
ಸುರತರುವು ಧರೆಗಿಳಿದುಬಂದೀ |
ಧರೆಯವಿಬುಧರ ಪೊರೆಯಲೋಸುಗ ಜನಿಸುತತಿಶಯದೆ ||
ಚರಿಸಿ ಸಂತರ ಸಲಹಬೇಕೆಂ |
ದೆರಡು ಕವಲಾದಂತೆ ಬಾಹುಗ |
ಳೆರಡುತೋರ್ಪವು ಭಾವಿಸಲಿಕಾಬಾಲಶಂಕರನ || ೧೩

ಸರಸತಿಯು ಭಂಡಾರದಂತಿರೆ |
ಮೆರೆವ ವಕ್ಷಸ್ಥಾನದಲಿ ಜಯ |
ಸಿರಿಯು ತನಗಾಶ್ರಯವಿದೆಂದೈತರಲು ಬಳಿಕಲ್ಲಿ ||
ವಿರಸವಾಗಲಿಕತ್ತೆ ಸೊಸೆಯರು |
ನೆರೆವಿಭಾಗಿಸಿಕೊಂಡ ಗೇಹದ |
ಪರಿಯಲುರವೊಪ್ಪಿದುದು ಗಂಗಾಧರನ ಶಂಕರನ || ೧೪

ಧುರದೊಳಸುರರ ಗೆಲಿದ ಸಮಯದೆ |
ಹರಿಯು ತನ್ನಯ ವಾಮಕರದೊಳು |
ಧರಿಸಿ ಶಬ್ದಂಗೈಯಲರಿಗಳ ಹೃದಯಭೇದನವ ||
ನೆರೆರಚಿಸಿ ರಂಜಿಸುವ ಶಂಖದ |
ಪರಿಯಲಾದುರ್ವಾದಿಗಳ ಗೆಲಿ |
ದುರುವ ಜಯರವದಿಂದಲೆಸೆದುದು ಕಂಧರವು ಹರನ || ೧೫

ಕ್ಷೀರಧಿಯಕೂಲದಲಿ ರಂಜಿಪ |
ಪಾರವಿದ್ರುಮಲತೆಯ ಮಧ್ಯದೆ |
ತೋರುತಿಹ ಶರಸಮಯಚಂದ್ರನ ಸಾಂದ್ರಕಾಂತಿಯೆನೆ ||
ಚಾರುಬಿಂಬಾಧರದ ಮಧ್ಯದೆ |
ಮಾರವೈರಿಯ ದಂತಪಙ್ಕ್ತಿಯು |
ತೋರುವುದು ಜನಮನಕೆ ಬಹುಳಾನಂದಕರವಾಗಿ || ೧೬

ಪರಮಸಿತಭಾನುವಿನ ತೆರದಿಂ |
ನೆರೆವಿರಾಜಿಪ ಕಾಲಕಾಲನ |
ವರಕಪೋಲದ್ವಯವು ಮುಖದಲಿ ನೆಲೆಸಿಕೊಂಡಿರ್ಪ ||
ಸರಸತಿಯು ತನ್ನತುಳರೂಪವ |
ಪರಿಕಿಸಲು ದರ್ಪಣವ ಮುದದಿಂ |
ಸರಸಿಜೋದ್ಭವನಿಟ್ಟತೆರದಿಂ ಸಲೆವಿರಾಜಿಪುದು || ೧೭

ಧರಣಿಯಲಿ ತನ್ನಂತೆ ಚಂದ್ರಮ |
ನುರುಕಲಾಧರನೆನಿಸಿ ರಂಜಿಸು |
ತಿರುತ ವಿಬುಧರ ಪುಣ್ಯವಾರ್ಧಿಯ ವೃದ್ಧಿಗೈದಡೆಯು ||
ನಿರತಸದ್ವಿಜನಿಕರಕಾಂತಿಯು |
ಪರಿಹರಿಪನಾಶಶಿಯು ತಾನದ |
ನೆರೆವಿವರ್ಧಿಪನೆಂಬತೆರದೊಳು ಮುಖವಿರಾಜಿಪುದು ||

ಅತ್ರಿ ಕಶ್ಯಪರೆಂಬ ಮುನಿಗಳ |
ಪುತ್ರರಂದದಿ ಮೆರೆವ ಶುಭತರ |
ನೇತ್ರಯುಗ್ಮವು ಸಲೆವಿರಾಜಿಸಿತಖಿಳಜನಮನಕೆ ||
ಅತ್ರಿಜನು ದೂರ್ವಾಸ ಕಶ್ಯಪ |
ಪುತ್ರ ವಾಮನರೆಂಬ ಪರಮಪ |
ವಿತ್ರರೀಶಂಕರಗೆ ಸಮರೆಂದೆನಿಪರೀತಿಯಲಿ ||

ವರಭಗೀರಥನೃಪತಿ ತನ್ನಯ |
ಹಿರಿಯರಿಗೆ ಸದ್ಗತಿಯನೀಯಲು |
ಹರನ ಬೇಡಲ್ಕಾತನಿತ್ತಾ ತ್ರಿಪಥಗಾಮಿನಿಯು ||
ಹರಿದುಬರುತಿಹಳೆಂಬ ತೆರದಿಂ |
ಹರನು ಫಣೆಯೊಳಗಿಟ್ಟ ಭಸ್ಮದ |
ಸುರುಚಿರತ್ರ್ಯರೇಖೆ ಧವಳತೆಯಾಂತು ರಂಜಿಪುದು ||

ಒಂದನೆರೆಬೋಧಿಸುತಲೆರಡರ |
ದಂದುಗವ ಪರಿಹರಿಸಿ ಮೂರನು |
ಚಂದದಿಂದಲೆ ತಿಳುಹಿ ನಾಲ್ಕನು ನೀಡುತ್ತೈದರಲಿ ||
ಹೊಂದಿಕೊಂಡಿಹ ಪರಮ ವಸ್ತುವ |
ನಂದದಿಂದಲೆ ತೋರುತಾರನು |
ಬಂಧುರದಿ ವಿವರಪುದು ವರಶಂಕರವಚೋಲಹರಿ ||

ಶ್ರೀ ಶಂಕರವಿಜಯ




ಶ್ರೀಮದ್ವಟುಶಂಕರಃ

ಇಂತು ಭುವನದ ಜನನವಮೋಹಿಪ |
ಕಾಂತಿಯನು ತಾಂತಳೆದು ಶಂಕರ |
ಸಂತಸದೆ ಗುರುಗೃಹದೆ ಗುರುಪರಿಚರ್ಯೆಯನುಮಾಡಿ ||
ಚಿಂತಿತಾರ್ಥವನಿತ್ತು ಗುರುವಿಗೆ |
ಕಂತುರಿಪುವಭಿನಮಿಸುತಾಜ್ಞೆಯ |
ನಾಂತು ನಿಜಮಂದಿರಕೆ ಬಂದನು ಪರಮವಿಭವದಲಿ || ೨೨

ಬಂದು ಜನನಿಗೆ ಬಹುಳಭಕ್ತಿಯೊ |
ಳಿಂದುಧರನಭಿನಮಿಸೆ ತನ್ನಯ |
ಕಂದನನು ಕಾಣುತ್ತಲಾರ್ಯಾದೇವಿ ಸಂಭ್ರಮಿಸಿ ||
ಚಂದದಿಂ ಬಿಗಿಯಪ್ಪಿಸ್ನೇಹದೊ |
ಳಂದಮಿಗೆ ತಡವರಿಸಿ ಪರಸುಖ |
ಸಿಂಧುವಿನಲೋಲಾಡುತಿರ್ದಳು ಬಂಧುಜನವೆರೆಸಿ || ೨೩

ವರಜನನಿಗಿಂದಧಿಕ ದೈವವು |
ನರಗೆ ಬೇರೊಂದಿಲ್ಲವೆಂಬುದ |
ಧರೆಗೆ ಬೋಧಿಸುವಂತೆ ಶಂಕರನತುಲಭಕ್ತಿಯಲಿ ||
ವರಜನನಿಯಂಘ್ರಿಯನು ಸೇವಿಸು |
ತುರುತರಾಶ್ರಮ ಧರ್ಮವೆಲ್ಲವ |
ನಿರತವಾಚರಿಸುತ್ತಲಿರ್ದನು ಕಾಲಟಿಯೊಳೊಲಿದು || ೨೪

ಸೂರಿಗಳು ಶಂಕರನಸನ್ನಿಹಕೆ |
ಸಾರಿ ತದ್ವದನಾರವಿಂದದಿ |
ಸೇರಿರುವ ವಾಣಿಯನು ಕಂಡು ವಿರಿಂಚಿಯೆಂದೆನುತ ||
ತೋರುವಾಕ್ಷಮೆಯನ್ನು ಕಾಣುತ |
ಮಾರಪಿತನೆಂದೆನುತ ಮತ್ತಾ |
ಭೂರಿತೇಜವ ಕಂಡು ಹರನೆಂದೆನುತ ಭಾವಿಸರು || ೨೫

ವೇದಮತವನು ಪೊರೆಯಲೋಸುಗ |
ಮೇದಿನಿಯೊಳವತರಿಸಿ ಬಹುವಿಧ |
ವೇದಕರ್ಮವನೆಸಗಿ ಸಂತತ ಸಕಲ ಸಜ್ಜನಕೆ ||
ಮೋದವಂಕಲ್ಪಿಸುತ ಶಂಕರ |
ನಾದಿವಿಜಥೇಸುವಿನ ತೆರದೊಳು |
ಸಾದರದಿಪಾಲಿಸುತಲಿರ್ದನು ಪರಮವಿಭವದಲಿ || ೨೬

ಇರುತಿರಲು ಬಳಿಕೊಂದುದಿನದಲಿ |
ವರನದೀತೀರವನು ಸೇರುತ |
ಹರಜನನಿಯಾರ್ಯಾಂಬೆವಿಮಲಸ್ನಾತಳೆಂದೆನಿಸಿ ||
ಬರುತಮಾರ್ಗದೆ ಬಿಸಿಲಬೇಗೆಯ |
ತರಹರಿಸಲರಿಯದಲೆ ನಿಲ್ಲುತ |
ಚರಣವಿಡಲರಿದಾಗಿ ಸುಯ್ವಳನಂದು ಶಂಕರನು || ೨೭

ಕಂಡು ಮನದಲಿನೊಂದು ಬಳಿಕಾ |
ಖಂಡಶಶಿಧರನೈದಿ ಜನನಿಯು |
ಮಂಡೆಯಲಿ ಧರಿಸಿರುವ ಜಲಪೂರಿತದ ಪಾತ್ರೆಯನು ||
ಕೊಂಡು ಸಂತೈಸುತ್ತ ಜನಗಳ |
ತಂಡಮರುಗುತ್ತಿರಲು ತಾಯಿಗೆ |
ಚಂಡಕಿರಣಾತಪವ ತಪ್ಪಿಸಿ ತಂದಮಂದಿರಕೆ || ೨೮

ಬಂದು ಮನೆಯೊಳು ವೃದ್ಧಜನನಿಯ |
ನಂದಮಿಗಿಲುಪಚರಿಸಿ ಕರುಣಾ |
ಸಿಂಧು ತನ್ನಯ ಜನನಿ ಜರೆನರೆಯಿಂದ ಕಂದಿಹಳು ||
ಮಿಂದುಬರಲೀನದಿಯು ತನ್ನಯ |
ಮಂದಿರಕೆ ಬಹುದೂರಪಥವದ |
ರಿಂದ ನದಿಯಿದ ಸನಿಹಕೈದಿಪೆನೆಂದು ಮನದಂದ || ೨೯

ಮನದೊಳಾಲೋಚಿಸುತಲೀಪರಿ |
ವನಜಸಂಭವವಂದ್ಯಪಾದನು |
ಘನವೆನಿಪಪೂರ್ಣಾಖ್ಯತಟನೀತಟಕೆನಡೆತಂದು ||
ಅನುವಿನಿಂದಲೆ ಮತ್ಕುಟೀರದ |
ಸನಿಹದೊಳ್ಳರಿವಹಿಸುತಲೆನ್ನಯ |
ಜನನಿಯನು ರಕ್ಷಿಪುದು ಕೃಪೆಯಿಂದೆಂದು ಬೇಡಿದನು || ೩೦

ಮರುದಿವಸದುದಯದಲಿ ಪೂರ್ಣಾ |
ವರನದಿಯು ಕಾಲಟಿಯೊಳಾ ಶಿವ |
ಗುರುನಿಕೇತನದಪರಭಾಗದೊಳತುಲವಿಭವದಲಿ ||
ಪರಿಯುತಿರೆ ಕಾಣುತ್ತ ವಿಪ್ರರ |
ನೆರವಿ ಪರಮಾಶ್ಚರ್ಯದಿಂದಲಿ |
ಶಿರವತೂಗುತಲಿರ್ದುದಾ ವರನದಿಯತೀರದಲಿ || ೩೧

ನದಿಯು ಗೃಹದೊತ್ತಿನಲಿ ಹರಿಯುವ |
ಹದನನೀಕ್ಷಿಸಿ ತಾಳ್ದು ಹರ್ಷವ |
ಸುದತಿಯಾರ್ಯಾಂಬಿಕೆಯು ನಂದನನತುಲಮಹಿಮೆಯನು ||
ಮುದದಿಕೊಂಡಾಡುತ್ತ ತನ್ನಯ |
ಸದನದೊಳು ಬಹುಭಕ್ತಿಭಾವದಿ |
ಮದನವೈರಿಯಪದವ ಭಜಿಸುತಲಿರ್ದಳನವರತ || ೩೨

ಧರಣಿಯಮರರು ಕಂಡು ವಿಸ್ಮಯ |
ವೆರೆಸಿ ನದಿಯನು ಪುರದ ಮಧ್ಯದಿ |
ತಿರುಗಿಸುವ ಸಾಮರ್ಥ್ಯವಿದು ಮನುಜರಿಗೆಲಭಿಸುವುದೆ ||
ತರಳನೇ ಶಂಕರನು ಜಗವನು |
ಪೊರೆವ ಮೋಹಂಹರಿಪ ಸಾಕ್ಷಾ |
ತ್ಸುರನುತಶ್ರೀಕಂಠನೀತನೆನುತ್ತ ಪೊಗಳಿದರು || ೩೩

ಸಂಧಿ ಎಂಟಕ್ಕೆ ಪದ್ಯ ೨೬೪ಕ್ಕೆ ಮಂಗಳ.



# ಒಂಭತ್ತನೆಯ ಸಂಧಿ.

ಸೂಚನೆ || ಶೈಲಜಾವರಪುತ್ರಷಣ್ಮುಖ |
ಲೀಲೆಯಿಂದವತರಸಿ ಸೌಗತ |
ಜಾಲವನು ಪರಿಭವಿಸಿ ಕೊಲಿಸಿದ ಹರಿಯದೆಸೆಯಿಂದ ||

ಪೇಳುನೀನೆಲೆ ಸೂತ ಮೊದಲಾ |
ಶೈಲಜಾವರನೊಲಿದು ತನ್ನಯ |
ಬಾಲಷಾಣ್ಮಾತುರಗೆ ಭುವನದಿ ಜನಿಸಿ ಜೈಮಿನಿಯ ||
ಶೀಲಯುತಸತ್ಕರ್ಮಕಾಂಡವ |
ಪಾಲಿಸುವುದೆಂದೆನುತ ಪೇಳ್ದುದ
ನಾಲಿಸುತಲಗ್ನಿಜನು ತಾನೇಗೈದನೆಂಬುದನು || ೧

ಧರಣಿಯಲಿ ತಾನೆಂತು ಜೈಮಿನಿ |
ವರಮತವ ಪಾಲಿಸಿದ ಶಿವಸುತ |
ಸುರಪತಿಯು ತಾನೆಂತು ನರಪತಿಯಾಗಿವರ್ತಿಸಿದ ||
ವರವಿರಂಚಿಯು ತಾರಕಾರಿಯ |
ಚರಣಸೇವೆಯನೆಂತು ಗೈದನು |
ಕರುಣದಲಿ ನೀನದನು ವರ್ಣಿಪುದೆಂದ ಶೌನಕನು || ೨

ಎಂದ ಮಾತನು ಕೇಳಿ ಪರಮಾ |
ನಂದತುಂದಿಲನಾಗಿ ಸೂತನು |
ಸಿಂಧುರಾಸ್ಯನಪಿತನ ಪಾದವ ನೆನೆದು ಮನದೊಳಗೆ ||
ಸಂದಸಂಪ್ರೀತಿಯಲಿ ತಾಪಸ |
ವೃಂದವನು ಮನ್ನಿಸುತ ಕರುಣಾ |
ಸಿಂಧುವಿನ ಸತ್ಕಥೆಯನಭಿವರ್ಣಿಸಿದ ವಿನಯದಲಿ || ೩

ಕೇಳಿರೈ ಮುನಿಗಳಿರ ಹರನ ವಿ |
ಶಾಲಚರಿತೆಯ ನೊರೆವೆ ತನಗಾ |
ಶೂಲಪಾಣಿಯು ಕರುಣಿಸಿದ ನೇಮುವನು ಷಣ್ಮುಖನು ||
ಮೌಳಿಯಲಿ ಧರಿಸುತ್ತ ನಿಗಮವ |
ಪಾಲಿಸಲು ಜಗದೊಳಗೆ ಕೀರ್ತಿವಿ |
ಶಾಲವೆನಿಪಾ ಬ್ರಹ್ಮಕುಲದಲಿ ಜನಿಸಿದನು ಮುದದಿ || ೪

ಜನಿಸಿ ಧರೆಯೊಳು ನಿಗಮುದರ್ಥಕೆ |
ಮುನಿಪಜೈಮಿನಿ ಪೇಳ್ದಸೂತ್ರವ |
ನನುವಿನಿಂದಲೆ ಬೋಧೆಗೈಯುತ ಕರ್ಮಕಾಂಡವನು ||
ಸನುಮತವದಪ್ಪಂತೆ ವಿವರಿಸಿ |
ಜನಮನೋರಂಜಕನು ತಾನೆಂ |
ದೆನಿಸಿ ಚರಿಸಿದ ಭಟ್ಟಪಾದಾಭಿಖ್ಯೆಯನು ಧರಿಸಿ || ೫

ಅರುಣ ತನ್ನುದಯದಲಿ ಹೆರಹಿದ |
ಧರೆಯಬೆಳಕನು ವೃದ್ಧಿಗೈಯುತ |
ತರಣಿ ಮಹದೂಷ್ಮೆಯಲಿ ರಾಜಿಪತೆರದಿ ಭುವನದಲಿ ||
ವರಮುನಿಪ ಜೈಮಿನಿಯು ಪೇಳಿಹ |
ಪರಮುಸೂತ್ರವ ವಿಶದಗೊಳಿಸುತ |
ತರಣಿಸಮತೇಜದಲಿ ಮೆರೆದನು ಬರ್ಹಿವಾಹನನು || ೬

ಇರುತಿರಲು ಬಳಿಕಿತ್ತಲಾ ಶಚಿ |
ಯರಸ ಶಿವನಾಜ್ಞೆಯಲಿ ತನ್ನಯ |
ಸುರಪತಿತ್ವವ ನುಳಿದು ವಹಿಸುತ ನರಪತಿತ್ವವನು ||
ವರಸುಧನ್ವಾಖ್ಯೆಯನು ಧರಿಸುತ |
ಪರಮನೃಪಧರ್ಮದಲಿ ಚರಿಸುತ |
ಧರೆಯನಾಳುತಲಿರ್ದನುನ್ನತಭಾಗ್ಯಯುತನಾಗಿ || ೭

ಅವನದೇಶವೆ ಸಗ್ಗವೆನಿಸಿದು ।
ದವನಪುರವಮರಾವತೀಪುರ ।
ಪವಿಧರನ ಭಾಗ್ಯವು ಸುಧನ್ವನ ಭಾಗ್ಯವಾಗಿಹುದು ॥
ಭುವನದಲಿ ಸುರಪತಿಯು ತಾಸೀ ।
ನೆವದಲ್ಲೈತಂದಿರಲಿಕಾತನ ।
ಭವನಕೈಶ್ವರ್ಯವದು ಸೇರುವುದಚ್ಚರಿಯೆ ತಿಳಿಯೆ ॥

ಇಂತು ಸುರಪತಿ ರಾಜ್ಯವಾಳುತ ।
ಲಂತರಂಗದಿ ವೈರಬುದ್ಧಿಯು ।
ನಾಂತು ಬಹಿರಂಗದಲಿ ಕುಹಕಪ್ರೀತಿಯನು ತಳೆದು ॥
ಸಂತಸದೆ ಕರೆಯಿಸುತಲಖಿಳದಿ ।
ಗಂತದಿಂದಾ ಜೈನಬೌದ್ಧರ ।
ಚಿಂತಿತಾರ್ಥವನಿತ್ತು ಸಲಹುತಲಿರ್ದ ಕಪಟದಲಿ ॥

ಸೌಗತರನೆಲ್ಲರನು ತಾನೆರೆ ।
ಭೂಗತರ ಮಾಡುವುದು ತನ್ನ ಮ ।
ನೋಗತವದಾದಡೆಯು ಬಹಿರಂಗದಲಿ ತೋರಿಸದೆ ॥
ತ್ಯಾಗಿ ತಾನೆಂದೆನಿಸಿಕೊಳುತತಿ ।
ರಾಗದಿಂದಲಿ ಪೊರೆಯುತವರನು ।
ಭೋಗಿಭೂಷನ ಸುತನ ಬರವ ನಿರೀಕ್ಷಿಸುತಲಿರ್ದ ॥

ಇತ್ತಲಾ ಕ್ರೌಂಚಾರಿ ಧರೆಯೊಳ ।
ಗುತ್ತಮದ ಧರ್ಮವನು ಸುಜನರ ।
ವೊತ್ತಕುರೆ ಬೋಧಿಸುತ ಬಹುದೇಶಂಗಳೊಳು ಚರಿಸಿ ॥
ಬಿತ್ತರದಕೀರ್ತಿಯನು ಸೌಗತ ।
ಮತ್ತಗಜಕೇಸರಿಯು ಪಡೆದಾ ।
ಚಿತ್ತಜಾರಿಯ ನೆನೆಯುತ್ತೈದಿದನಾಸುಧನ್ವನನು ॥

ಎತ್ತನೋಡಿದೊಡತ್ತ ರಂಜಿಪ |
ಮುತ್ತುಗಳ ಮಾಣಿಕದಕಾಂತಿಯು |
ವೆತ್ತನವಪಲ್ಲವದ ತೋರಣದೋರಣವತಳೆದು ||
ಚಿತ್ತಕತ್ಯಾನಂದಮಂ ಬೀ |
ರುತ್ತಲೆಸೆದುದು ಪೊಳಲಮಧ್ಯದೊ |
ಳೆತ್ತರದ ಗೋಪುರವಕಲಶನನಾಂತುನೃಪಭವನ || ೧೨

ಅರಮನೆಯ ಮುಂಭಾಗದಲ್ಲಿ ಪರಿ |
ಪರಿಯುಕಾಂತಿಯುತಳೆದು ರಂಜಿಪ |
ವರಸಭಾಸ್ಥಳವೆಸೆದುದಾಗ ಸುಧನ್ವನರಪತಿಯ ||
ಜರೆದು ವೇದಾವಳಿಯು ಶಾಸ್ತ್ರವ |
ತೊರೆದು ನಾಸ್ತಿಕವಾದದೇಳ್ಗೆಯ |
ಮೆರೆದು ಗರ್ವಿಪ ಬೌದ್ಧಜೈನರ ನೆರವಿತುಂಬಿಹುದು || ೧೩

ರಾಜಸಭೆಯೊಳು ರಾಜಿಸುತ್ತಿಹ |
ರಾಜಪೀಠದೊಳುಷ್ಣಕಿರಣನ |
ತೇಜದಿಂ ಕುಳ್ಳಿದ್ದನಾಸುರರಾಜ ವಿಭವವದಲಿ ||
ರಾಜಮಾರ್ಗವಕಳೆದು ಪಂಡಿತ |
ರಾಜನೆನಿಪಾಭಟ್ಟಪಾದನು |
ರಾಜಿಸುವಸುರಸಭೆಗೆ ಬರುವಜನಂತೆನಡೆತಂದ || ೧೪

ಬರುತಲಿರ್ಪಾಲಬ್ಧವರ್ಣನ |
ನರಸಕಾಣುತ ರವಿಯುಕಂಡಂ |
ಬುರುಹದಂತಿರೆ ಪರಮಸಂಭ್ರಮವಾಂತುಚಿತ್ತದಲಿ ||
ಭರಿತಭಯಭಕ್ತಿಯಲಿ ಬಂದಾ |
ಧರಣಿಯುಮರಂಗೆರಗೆ ದಯದಿಂ |
ಹರಸಿ ಪಿಡಿದೆತ್ತಿದನು ಮಸ್ತಕವನು ಮಹೀಪತಿಯು || ೧೫

ಕರೆದುತಂದಾ ಮುನಿವರೇಣ್ಯಂ |
ಗಿರದೆ ವಿನುತಾರ್ಘ್ಯಾದಿ ಪೂಜೆಯ |
ನರಸನೆಸಗಿದನಿತ್ತು ದಿವ್ಯಸುವರ್ಣಪೀಠವನು ||
ಸುರಪನುದ್ಯಾನದೊಳು ಶೋಭಿಪ |
ವರವಸಂತನ ತೆರದೊಳಾಗುಹ
ನರಸನಾಸ್ಥಾನದಲಿ ಮೆರೆದನುಪರಮವಿಭವದಲಿ || ೩

ಸುರಪನಾಸ್ಥಾನದಲಿ ರಂಜಿಪ |
ವರಧಿಷಣನಂದದಲಿ ಭೂಸುರ |
ವರನುಕುಳಿತಿರಲಾಗ ರಾಜಾಸ್ಥಾನದಿದಿರಿನಲಿ ||
ನೆರೆವಿರಾಜಿಪವಿಟಪಿಯಗ್ರದೊ |
ಳಿರುತ ಕೋಗಿಲೆಯೊಂದು ವರಸ |
ಭ್ಯರಿಗೆ ಸಂತಸವೊಳೆಯುಲುಲಿದುದು ಪಂಚಮುಸ್ವರದಿ || ೧೭

ಕೋಗಿಲೆಯ ಮೆಲ್ಲುಲಿಯನಾಲಿಸಿ |
ನಾಗಭೂಷಣತನಯ ಮನದನು |
ರಾಂಗದಿಂದಾಸ್ವರವನಾಗ ನಿಮಿತ್ತವಾಗೆಣಿಸಿ ||
ಮೇಘವಾಹನಿಗರ್ಘಕಡುಲೀ |
ಸಾಗಿತಿಳಿವಂದದಲಿ ನುಡಿದನು |
ಕೋಗಿಲೆಯುಸಂಬೋಧಿಸುತ್ತತಿವಿನಯವಚನದಲಿ || ೧೮

ಎಲೆವನಪ್ರಿಯ ನಿನ್ನದನಿಯಿದು |
ಲಲಿತವಾಗಿಹುದೈಸೆ ನೀನೀ |
ಮಲಿನಮಯವಾಗಿರುತಲಾ ಶ್ರುತಿಗಹಿತವೆಂದೆನಿಸಿ ||
ಉಲಿವ ಕರಟಸಮೂಹಸಂಗವ |
ಸಲೆಪರಿತ್ಯಜಿಸಿದೊಡೆ ನಿನಗತಿ |
ಸುಲಭದಿಂ ಶ್ಲಾಘ್ಯತೆಯುದೊರೆಯುವುದೆಂದು ಗುಹನುಡಿದ || ೧೯

ನುಡಿದ ಗೂಢಾರ್ಥಗಳನಾಂತಿಹ |
ನುಡಿಯುನದನಾಲಿಸುತ ಸೌಗತ |
ಪಡೆಯು ಪದದಿಂ ತುಳಿಸಿಕೊಂಡಿಹ ಸರ್ಪನಂದದಲಿ ||
ಕಡುವಿರೋಧವನಾಂತು ಬಳಿಕಾ |
ಮೃಡನತನಯನಕೂಡೆ ಪಂಥವ |
ನುಡಿಯುತಾಗಲು ಕುಳಿತರಾಶ್ರುತಿಮತವ ಖಂಡಿಸಲು || ೨೦

ವೇದಮತವನು ಪೊರೆವ ಮತ್ತಾ |
ವೇದಮತವನು ಜರೆವ ಬಹುಳವಿ |
ವಾದಗಳ ಘನರಭಸವಾಬ್ರಹ್ಮಾಂಡಮಂಡಲವ ||
ಭೇದಿಸುತಲಿರುತಿರ್ದುದಾಘನ |
ನಾದಕಿಮ್ಮಿಗಿಲೆನಲು ಬಳಿಕದ |
ನಾದಿವೌಕಸರರಸನಾಲಿಸುತಿರ್ದನತಿಮುದದೆ || ೨೧

ಬಳಿಕಲಾಕ್ರೌಂಚಾರಿ ತನ್ನಯ |
ಕಲೆಯಕುಶಲತೆಯೆಂಬಕೊಡಲಿಯು |
ಲಲಘುತರವೆಂದೆನಿಪ ಸೌಗತಮತಮಹೀರುಹವ ||
ಸಲೆಕಡಿದುಹೆರಹಿದನು ಕೋಪಾ |
ನಲನಪೆರ್ಚಿಸಿ ಬೌದ್ಧಜೈನರ |
ಮುಳುಗಿಸಿದನಂದಪಜಯಾಹ್ವಯಜಲಧಿಮಧ್ಯದಲಿ || ೨೨

ಪಾಕಶಾಸನನಿಟ್ಟವಜ್ರವು |
ಸೋಕಿದಾಕ್ಷಣ ಪಕ್ಷಯುಗ್ಮವ |
ನಾಕುಧರತತಿನೀಗಿಕೊಂಡೀ ಧರೆಗುರುಳ್ವಂತೆ ||
ಆಕಪರ್ದಿಜವಾಕ್ಯಕುಲಿಶವ |
ದೌಕಿಕೊಂಡಿರೆ ಖಳರುಬಳಿಕತಿ |
ಮೂಕಭಾವವನಾಂತುನಿಂದರು ಬಲಿದದುಗುಡದಲಿ || ೨೩

ಖಂಡಶಶಿಧರಸುತಗೆ ಸೌಗತ ।
ಪಂಡಿತರು ವಾದದಲಿ ಸೋತುದ ।
ಕಂಡು ಮನದೊಳು ಪರಮಸಂಭ್ರಮವಾಂತು ಬಾಹ್ಯದಲಿ ॥
ಚಂಡಮತಿ ನಿಷ್ಪಕ್ಷಪಾತವ ।
ತಂಡವೆರಡಕೆ ತೋರ್ಪನೆವದಲಿ ।
ಪಂಡಿತೋತ್ತಮಭಟ್ಟಪಾದಗೆ ನುಡಿದನಿಂತೆಂದು ॥ ೨೪

ಕೇಳುನೀನೆಲೆವಿಪ್ರಜಗದಿವಿ ।
ಶಾಲವಿದ್ಯಾಬಲದಿ ವಾದಿಸಿ ।
ಮೇಲೆನಿಪ ಜಯವಿದನುಪಾರ್ಜಿಸೆ ವೇದಮತವಿದುವೆ ।
ಮೇಲಹುದು ಬೌದ್ಧಾದಿಮತಗಳು ।
ಕೀಳಹವು ತಾವೆಂಬಭೇದವ ।
ತಾಳುವುದು ಮತವಹುದೆ ನಂಬುವನಲ್ಲ ನಾನಿದನು ॥ ೨೫

ವೇದವೇಪ್ರಾಮಾಣ್ಯವೆಂಬುದ ।
ನಾದರದಿನೀಪೇಳಿ ಮತ್ತಾ ।
ವೇದವಪ್ರಾಮಾಣ್ಯವೆಂಬುದ ಸೌಗತರುಪೇಳಿ ॥
ಭೂಧರಾಗ್ರವನೇರುತಲ್ಲಿಂ ।
ಮೇದಿನಿಗೆಧುಮ್ಮಿಕ್ಕಿ ದೇಹಕೆ ।
ಬಾಧೆಯಾಗದತೆರದಿಬಂದರೆ ನಂಬುವೆನುನಾನು ॥ ೨೬

ಎನಲುಕೇಳುತ ಜೈನಬೌದ್ಧರ ।
ತನುನಡುಗಿ ತುಟಿಯೊಣಗಿ ಭಯದಿಂ ।
ಜನಪತಿಗೆ ಮರುಮಾತನೀಯದೆ ಮೌನದಿಂದಿರಲು ॥
ಅನುವಿನಿಂದಾಭಟ್ಟಪಾದನು ।
ಮನದಿ ನಿಗಮವ ನೆನೆಯುತಾಕ್ಷಣ ।
ಸನುಮತಿಸಿ ಗಿರಿತುದಿಯನೇರಿದ ನೃಪತಿಬೆರಗಾಗೆ ॥ ೨೭

ಭೂದರದಶಿಖರದಲಿ ನಿಂದನು |
ನೋದದಿಂದಾ ಭಟ್ಟಪಾದನು |
ಮೇದಿನಿಯಜನರೆಲ್ಲ ಕೇಳುವದೆನುತ ಕೈನೆಗಹಿ ||
ವೇದವೇ ಪ್ರಾಮಾಣ್ಯವಾದಡೆ |
ಬಾಧೆಯಿಲ್ಲದತೆರದಿ ಬಹೆನೀ |
ಮೇದಿನಿಗೆತಾನೆಂದು ಧುಮ್ಮಿಕ್ಕಿದನುಧಾರಿಣಿಗೆ || ೨೮

ತೂಲಪಿಂಡವು ಬಿದ್ದತೆರದಿಂ |
ಶೈಲದಿಂದಲೆ ಧುಮುಕುತಾಕ್ಷಣ |
ಶೀಲಗುಣನಿಧಿಘಾಸಿಯೊಂದದೆ ಬಂದುನಿಂದಿರಲು ||
ಪಾಲಿಸದೆ ವರನಿಗಮತನ್ನನು |
ಶೀಲದಿಂ ನಂಬಿದರನಕಟಾ |
ಖೂಳರೈಸಲೆ ನಿಗಮನಿಂದಕರೆಂದುದಖಿಳಜನ || ೨೯

ಜಯಜಯಾಸ್ತಿಕವರ ಶಿರೋಮಣಿ |
ಜಯತುಸೌಗತಮಸ್ತಕಕೆ ಸೃಣಿ |
ಜಯತುನಾಸ್ತಿಕಮರುತಫಣಿ ನಿಜವಾಂಬುಜದ್ಯುಮಣಿ ||
ಜಯಜಯತು ವರಪಂಡಿತಾಗ್ರಣಿ |
ಜಯತುಜಯಜಿನಜನತಮೋಘೃಣಿ |
ಜಯತುಜಯವೆಂದೆನುತ ನುತಿಸಿದನಾಗಭೂಪಾಲ || ೩೦

ಭೂಸುರೋತ್ತಮ ಭಟ್ಟಪಾದನು |
ಭಾಸುರದಕೀರ್ತಿಯನು ಪಡೆದುದ |
ದೇಶದೇಶದವಿಪ್ರಜನರಾಲಿಸುತ ಸಂಭ್ರಮಿಸಿ ||
ವಾಸುದೇವನದಯದಿ ವಿಪ್ರರ |
ವಾಸಿಯುಳಿದುದೆನುತ್ತ ತಮ್ಮನಿ |
ವಾಸಗಳನುಳಿದೈದುತಿದುತಿರ್ದರು ವಿಪ್ರಕುಲವರನ || ೩೧

ಬಂದಬಾಡಬಜನವ ನರಪತಿ |
ಯಂದಮಿಗಿಲುಪಚರಿಸಿ ಬಹುಮುದ |
ದಿಂದ ಲಾಸ್ತಿಕಜನಕೆ ಮನ್ನಣೆಯಿತ್ತು ಕರುಣದಲಿ ||
ಹಿಂದೆ ತಾನಾದುಷ್ಟನಾಸ್ತಿಕ |
ವೃಂದದೊಡೆನಿದ್ದುದಕೆ ಮನದಲಿ |
ನೊಂದು ತನ್ನನು ಜರೆದುಕೊಂಡನು ಪೂರ್ವದುಷ್ಕೃತಕೆ || ೩೨

ವೇದವೇ ಪ್ರಾಮಾಣ್ಯವೆಂಬುದ |
ನಾಧರಾಧಿಪನಂಬಿ ವಿಪ್ರರ |
ನಾದರಿಸಿಪೂಜಿಪುದ ಕಾಣುತ ಸೌಗತಾದಿಗಳು |
ಖೇದವನು ಮನದೊಳಗೆ ತಾಳುತ |
ಭೂಧವನಬಳಿಗೈದಿ ಬಳಿಕಾ |
ಭೇದಬುದ್ಧಿಯಲಿಂತುನುಡಿದರು ತನ್ಮಹೀಪತಿಗೆ || ೩೩

ಲಾಲಿಸೈರಾಜೇಂದ್ರ ವಿಪ್ರನು |
ಮೇಲೆನಿಪ ಮಣಿಮಂತ್ರದೌಷಧ |
ಜಾಲದಿಂದಲೆ ತನ್ನದೇಹಕೆ ರಕ್ಷೆಯನು ಬಲಿದು ||
ಶೈಲಶಿಖರವನೇರುತಲ್ಲಿಂ |
ಬೀಳಲದರಿಂ ವೇದಮತವದು |
ಮೇಲಹುದು ತಾನೆಂತು ಪೇಳುವುದೆಂದರಾದ್ವಿಜರು || ೩೪

ಮಾತನದನಾಲಿಸುತ ಬಳಿಕಾ |
ಭೂತಳಾಧಿಪನಧಿಕಕೋಪಪ |
ರೀತನಾಗುತ ವಿಪ್ರಸೌಗತರೆಲ್ಲರನುಕರೆಸಿ |
ಖ್ಯಾತಿಯುತರಹ ನಿಮ್ಮನಾಸಂ |
ಕೇತದಿಂ ಪ್ರಶ್ನಿಸುವೆನದರೊಳು |
ಸೋತವರ ಪಂಗಡವ ಕೊಲಿಸುವೆ ಯಂತ್ರಶಿಲೆಯೊಳಗೆ || ೫೩

ಎನುತಲಾಜ್ಞೆಯ ನಿತ್ತು ಬಳಿಕಾ |
ಜನಪತಿಯು ಘಟಸರ್ಪವೊಂದನು |
ಜನಗಳರಿಯದತೆರದಿ ತರಿಸುತಘಟದೊಳಗೆಮುಚ್ಚಿ ||
ಅನುವಿನಿಂದದ ಸಭೆಯೊಳಿರಿಸುತ |
ಜನಗಳನು ಕರೆಯಿಸುತತಾನತಿ |
ವಿನಯದಿಂ ಕೇಳಿದನು ಘಟದೊಳಗಿರ್ಪುದೇನೆಂದು || ೩೬

ಮರುದಿವಸದುದಯದಲಿ ಬಂದಿದ |
ರಿರವನರಿವುದೆಂದು ಧರಣೀ |
ಸುರರು ಬೌದ್ಧರು ಬೀಳುಕೊಂಡರು ನಿಜಗೃಹಂಗಳಿಗೆ ||
ಧರಣಿಯಮರರು ಜಲದಮಧ್ಯದೊ |
ಳಿರುತ ಭಯಭಕ್ತಿಯಲಿತಪವಾ |
ಚರಿಸಿ ತರಣಿಯಬೇಡಿಕೊಂಡರು ಜಯವಕರುಣಿಸಲು || ೩೭

ಸಾಗತರು ಭೇದದಲಿ ಘಟದೊಳು |
ನಾಗನಿರುವುದನರಿತು ಮನದನು |
ರಾಗದಿಂದಲೆಬಂದು ಸಭೆಯನುಸೇರಿ ನೃಪವರಗೆ ||
ಕೈಗಳನು ಮುಗಿವುತ್ತಘಟದೊಳು |
ಭೋಗಿಯಿರುತಿಹುದೆಂದುನುಡಿಯ |
ಲ್ಕಾಗನುಡಿದನು ಭಟ್ಟಪಾದಾಚಾರ್ಯವಿನಯದಲಿ || ೩೮

ಧರಣಿಮೊದಲೆನೆ ಭೂತಪಂಚಕ |
ದುರುವ ಸಂಮೇಳನದಿಜನಿಸಿಹ |
ಚರವಚರವೆಂದೆಂಬ ನಾನಾವಸ್ತುಜಾಲದಲಿ ||
ಭರತನಾಗಿಹನಲ್ತೆಲಕ್ಷ್ಮೀ |
ವರನುಬಳಿಕೇನಿಹುದು ಘಟದೊಳ |
ಗುರುಗಶಯನನು ವಿಷ್ಣುತಾನೇಭರಿತನಾಗಿಹನು || ೩೯

ಎನುತನುಡಿದುದ ಕೇಳಿಜನಪತಿ |
ಮನದಹರ್ಷವ ತೊರೆದುತನ್ನಯ |
ತನುವಿನಲಿ ನಿಶಿತಾಸ್ತ್ರಪೊಕ್ಕಂದದಲಿ ನಡನಡುಗಿ ||
ವನಜನಾಭ ಮುಕುಂದನಾನೆಂ |
ತಿನಿತು ವಿಪ್ರರಕೊಂದುದೋಷವ |
ನನುಭವಿಪನೆಂದೆನುತ ಬಲುಮರುಗಿದನುಮನದೊಳಗೆ ||

ಮರುಗದಿರು ರಾಜೇಂದ್ರಧರಣೀ |
ಸುರರನುಡಿಹೊಳ್ಳಹುದೆ ಜಗದೊಳು |
ಪುರಹರನಸುತಭಟ್ಟಪಾದನು ಪೇಳ್ದರೀತಿಯಲಿ ||
ಉರಗಶಾಯಿಯೆ ಘಟದೊಳಿರ್ಪನು |
ತೊರೆಯುವುದು ಸಂಶಯವನೆನುತಾ |
ನರಪತಿಯುಕೇಳ್ವಂತೆ ನುಡಿದುದು ವರನಭೋನಿನದ ||

ನಾಗಶಯನನ ವಿಪ್ರನೀತನೆ |
ಕೈಗಳಿಂತೆಗೆದೆತ್ತಿ ತೋರಿಸ |
ಲೀಗಸಭೆಯೊಳಗೆಂದು ಸೌಗತನಿವಹಗರ್ಜಿಸಲು ||
ನಾಗಚರ್ಮಾಂಬರನಸುತನನು |
ರಾಗದಿಂ ಕೈನೀಡಿತೆಗೆದನು |
ಸಾಗರಾಧಿನಿವಾಸ ವಿಷ್ಣುವಿನತುಲವಿಗ್ರಹವ ||

ತೋರುವೀ ಬ್ರಹ್ಮಾಂಡಘಟದೊಳು |
ಸೇರಿಸೇರದೊಲಿರ್ಪತೆರದಿಂ |
ತೋರುತಿರ್ಪಾಕಾಶದೊಳು ಪರಿಪೂರ್ಣಮಾಗಿರುವ ||
ಪಾರವಿಲ್ಲದ ಪರಮವಸ್ತುವೆ |
ತೋರುವೀಮೃತ್ತಿಕೆಯ ಘಟದೊಳು |
ಸೇರಿದಾಕಾಶದಲಿ ತೋರ್ಪುದುನಿಗಮಮುತವೈಸೆ ||




ಸುಧನ್ವರಾಜಾಸ್ಥಾನದಲ್ಲಿ ಭಟ್ಟಪಾದರಿಗೆ ವಿಜಯಪ್ರಾಪ್ತಿ.

ಪೊಳೆವಹೆಡೆಗಳನಡುವೆ ಧರೆಯನು |
ತಳೆದ ಶೇಷನ ದೇಹಮಧ್ಯದೆ |
ಮಲಗಿನಿದ್ರಿಸುತಿರ್ಪಭಾವದಿ ನೆರೆ ವಿರಾಜಿಸುವ ||
ಥಳಥಳಿಪನವರತ್ನನಿಚಯದ |
ಬೆಳಕನುರೆಬೀರುತ್ತ ಲಕ್ಷ್ಮೀ |
ನಿಳಯನರವಿಗ್ರಹವು ಮೆರೆದುದು ಗುಹನ ಕರತಳದಿ || ೪೪

ಕಂಡುನೃಪತಿಯು ತನ್ನ ಕರಗಳ |
ಮಂಡೆಯೊಳಗಾನುತ್ತ ಹರ್ಷದಿ |
ಪುಂಡರೀಕಾಂಬಕಗೆ ಬಲವಂದೆರಗಿ ಭಕ್ತಿಯಲಿ ||
ಚಂಡಕರಸಮತೇಜನೆನಿಸುವ |
ಪಂಡಿತೋತ್ತಮನಡಿಗೆ ತನ್ನಯ |
ಮಂಡೆಯನು ಚಾಚಿದನು ಗೌರವಿಸಿದನು ವಿಪ್ರರನು || ೪೫

ಬಳಿಕತಿರುಗಿದನಿತ್ತ ಸೌಗತ |
ಬಳಗವನು ನೋಡಿದನು ಕಾಲನ |
ತುಳಿದ ರುದ್ರನ ಕೋಪವನು ತಾಕೇಣಿಗೊಂಡಂತೆ ||
ಪೊಳೆಯೆ ಕೋಪಜ್ವಾಲೆ ಮುಖದಲಿ |
ಜಳಕನುಣ್ಮಲು ಘರ್ಮಜಲಕಣ |
ತಳೆದವರುಣಚ್ಛವಿಯನಕ್ಷಿಗಳಾಗ ಜನಪತಿಯ || ೪೬

ಕಡಿಕಡಿದು ದಂತಗಳ ವಿಲಯದ |
ಮೃಡನ ಪೋಲಾರ್ಭಟಿಸಿ ಖಡುಗವ |
ನೊಡನೆ ಝಳಪಿಸುತೆತ್ತಿ ಸಚಿವರಕರೆದು ಕೋಪದಲಿ ||
ಪೊಡವಿಪತಿನಿಯಮಿಸಿದ ತನ್ನಯ |
ಪೊಡವಿಯೊಳಗುಳ್ಳಖಿಳಬೌದ್ಧರ |
ಕಡಿದು ಹರಹುವುದೆನುತ ಸೌಗತಗಡಣನಡನಡುಗೆ || ೪೭

ರಾಮಸೇತುವಿನಿಂದ ವರಹಿಮ |
ಧಾಮಶೈಲದ ಮಧ್ಯದೇಶದೆ |
ತಾಮಸರ ಸೌಗತರ ಶಿರವೊಂದುಳಿಯದಂದದಲಿ ||
ನಾಮಮಾತ್ರವನುಳುಹಿ ಕೊಲ್ಲುವ |
ನೇಮವನು ನೃಪನೀಯಲಾಕ್ಷಣ |
ತಾಮಸರನರೆಸಿದರು ಯಂತ್ರೋಪಲದಿಮಂತ್ರಿಗಳು ||

ಸೌಗತರು ನಿರ್ನಾಮರಾದರು |
ನೀಗುತಸುವನು ಕೆಲರು ದೇಶವ |
ನೀಗಿಸಾಗಿದರಾಹಿಮಾಲಯಮಾರ್ಗವನುಕಳೆದು ||
ಆಗಮದ್ವೇಷಿಗಳ ಸಂಕಟ |
ಕಾಗಿ ಮರುಗುವರಾರು ಜಗದೊಳು |
ಸೌಗತರಪಡೆಯಡಗಿಪೋದುದು ಮುನಿಪಕೇಳೆಂದು ||

ಎಂತುಯೋಗದಬಲದಿ ಯೋಗಿ ದು |
ರಂತವಹ ಯೋಗಘ್ನವೆನಿಪಾ |
ಭ್ರಾಂತಿವೊದಲಾದಖಿಳವಿಘ್ನವ ಜಯಿಸಿ ನಿಲ್ಲುವನೋ ||
ಅಂತು ನೃಪತಿಸುಧನ್ವ ಗಿರಿಜಾ |
ಕಾಂತಸುತಷಣ್ಮುಖನಬಲದೆ ಸ|
ಮಂತಭದ್ರನಮತದಪಾಷಂಡಿಗಳ ಜಯಿಸಿದನು ||

ವೇದದೂಷಕರಪ್ಪನಾಸ್ತಿಕ |
ವಾದಿಗಳನೆಲ್ಲರನು ನಾಶವ |
ನೈದಿಸುತಲಾಬಳಿಕ ತಮುವನುಗೆಲಿದರವಿಯಂತೆ ||
ಆದಿವೌಕಸಸೈನ್ಯದಧಿಪತಿ |
ವೇದಮಾರ್ಗವು ಸಕಲದೆಸೆಯೊಳು |
ಮೋದದಿಂ ಪ್ರಜ್ವಲಿಪತೆರದಲಿ ಹರಿಹಿದನು ಯಶವ ||

ಪರಿಪರಿಯ ಸತ್ಕರ್ಮಜಾಲವ |
ನೊರೆಯಲೋಸುಗ ಕಮಲಜಾತನು |
ಧರೆಯೊಳಗೆಜನಿಯಿಸಿರೆ ಮಂಡನಮಿಶ್ರನಾಮದಲಿ ||
ಒರೆಯುತಾತಗೆ ಕರ್ಮಕಾಂಡವ |
ಪರಶುಧರನಂದದಲಿ ವಿಪ್ರರ |
ಪೊರೆದನಾ ಶ್ರೀಕಂಠಸಂಭವನಧಿಕ ಕರುಣದಲಿ || ೫೨

ಸಂಧಿ ೯ಕ್ಕೆ ಪದ್ಯ ೩೧೬ಕ್ಕೆ ಮಂಗಳ.

# ಹತ್ತನೆಯ ಸಂಧಿ.

**ಸೂಚನೆ** || **ಪಾಲಿತಾಮರವೃಂದ ಪರಶಿವ |**
**ಲೀಲೆಯಿಂದಾ ಕೇರಳಕ್ಷ್ಮಾ ಕ |**
**ಪಾಲಕಗೆವರವಿತ್ತು ಕಳುಹಿದನಧಿಕ ಕರುಣದಲಿ ||**

ಕೇಳಿದೈ ಮುನಿಕುಲವರೇಣ್ಯನೆ |
ಫಾಲಲೋಚನನಿತ್ತ ನೇಮವ |
ಪಾಲಿಸಲು ಶರಜನ್ಮನಿಳೆಯೊಳು ಜನಿಯಿಸಿದತೆರನ ||
ಶೈಲಜಾವರವಕ್ಷಕುಂಕುಮ !
ಜಾಲಮಂಡಿತಹೃದಯಶಂಕರ |
ಲೀಲೆಯನು ಪೇಳುವೆನು ಲಾಲಿಪುದೆಂದನಾ ಸೂತ || ೧

ಹರಿವನದಿಯನು ಗೃಹಸಮೀಪಕೆ |
ಬರಿಸಿದನು ಶಂಕರನದೆಂಬೀ |
ಪರಿಯುವಾರ್ತೆಯು ಜಗದೊಳೆಲ್ಲಿಯು ಜನಜನಿತಮಾಗೆ ||
ಪುರಹರನದರ್ಶನಕೆ ಜನಗಳ |
ನೆರವಿಯ್ಯೆತರುತಿರ್ದುದಾಗಲು |
ಧರೆಯಸುರವರರಗ್ರಹಾರವು ತುಂಬಿತುಳುಕಾಡೆ || ೨

ದೇಶದೇಶದಜನಗಳೆಲ್ಲ ಬಿ |
ಲೇಶಯವಿಭೂಷಣನ ಪಾದಕು |
ಶೇಶಯಂಗಳಕಂಡು ನಮಿಸುತಭಕ್ತಿಭಾವದಲಿ |
ತೋಷಮಿಗೆ ತಮ್ಮಖಿಳಮನದಭಿ |
ಲಾಷೆಗಳ ಪಡೆಯುತ್ತತಮ್ಮಯ |
ದೇಶಗಳ ಸಾರುತ್ತಲಿರ್ದರು ನುತಿಸುತಾಹರನ ||

ಚಂಡಕಿರಣನು ತಮದರಾಶಿಯ |
ಖಂಡಿಸುತ ಬಳಿಕಖಿಳಧರಣೀ |
ಮಂಡಲದಿ ತನ್ನತುಳತೇಜವ ಹರಹುವಂದದಲಿ ||
ರುಂಡಮಾಲಾಧರನು ಭಕ್ತರ |
ತಂಡದಖಿಳಾಮಯವ ಹರಿಸುತ |
ಖಂಡಕೀರ್ತಿಯನೆರಹಿ ರಂಜಿಸುತಿರ್ದನವನಿಯಲಿ ||

ಕಾಲಟಿಯೊಳೀತೆರದ ಬಾಲಕ |
ಲೀಲೆಯಿಂದಿರುತಿರ್ಪನೆಂಬ ವಿ |
ಶಾಲವಾರ್ತೆಯಕೇಳಿ ಮನದೊಳು ತಳೆದು ಸಂಭ್ರಮವ ||
ಇಲಬಿಲನಂಶಜನು ಕೇರಳ |
ಪಾಲಕನು ತನ್ನಾಪ್ತಸಚಿವರ |
ಮೇಳವಿಸಿಕಳುಹಿದನು ಕರೆತರೆ ಪುರಕೆ ಶಂಕರನ ||

ಬಂದರಾಸಚಿವೋತ್ತಮರು ಬಾ |
ಲೇಂದುಧರನಿದ್ದೆಡೆಗೆ ಸಮ್ಮುದ |
ದಿಂದ ಕಾಣಿಕೆಯಿತ್ತು ಕರಗಳಮುಗಿದು ನಿಂದಿರಲು ||
ಅಂದುಸಂಪ್ರೀತಿಯಲಿ ಸಚಿವರ |
ವೃಂದವನು ನೋಡುತ್ತ ಮುಖದಲಿ |
ಮಂದಹಾಸವು ಮಿನುಗೆ ಕೇಳಿದನಾರುನೀವೆನುತ

ಭೂಮಿಬುಧಕೇಳಾವು ಕೇರಳ |
ಭೂವರನಮಂತ್ರಿಗಳು ನಿನ್ನಯ |
ಭೂವಿಲಂಬಿತಯಶವಲಾಲಿಸುತೊಲ್ದುತವಕದಲಿ ||
ಕೋವಿದಾವಳಿಯಲ್ಲಿ ನೆರೆಸಂ |
ಭಾವಿಸಲು ನಿನ್ನಡಿಯ ನಮ್ಮಧ |
ರಾವರನು ಕರೆತರಲುಕಳುಹಿದನೆಮ್ಮ ನಿನ್ನೆಡೆಗೆ || ೭

ಧರೆಯೊಳಗೆ ವಿದ್ವಾಂಸರಾದವ |
ರುರುನೃಪಾಲಾಸ್ಥಾನಮಧ್ಯದೆ |
ನೆರೆವಿರಾಜಿತರಾಗಿ ಸನ್ಮಾನವನುಕೈಕೊಳಲು ||
ಅರಸುಗಳನಾಶ್ರಯಿಸುತಿರ್ಪರು |
ನರಪತಿಯೆ ತಾನಿನ್ನ ಕರೆಸುವ |
ಪರಿಯು ಪುಣ್ಯವಿದ್ಯೆಸೆ ಬಿಜಯಂಗೈಯ್ಯಬೇಕೆನಲು || ೮

ಕೇಳಿದನು ಮಂತ್ರಿಗಳವಚನವ |
ಕಾಲಕಂಧರ ನಗುತ ನುಡಿದನು |
ಶೀಲವಂತರು ಪಂಡಿತೋತ್ತಮರೆಲ್ಲ ಧರೆಯೊಳಗೆ |
ಮೇಲೆನಿಪ ಮನ್ನಣೆಯ ಪಡೆಯೆ ನೃ |
ಪಾಲರಾಸ್ಥಾನವನು ಸೇರುತ |
ಲೋಲಗಿಪುದದು ಸಹಜವೆಮಗೇಕವರವರ್ತನೆಯು || ೯

ಪಂಡಿತನುನಾನಲ್ಲ ಪಂಡಿತ |
ಮಂಡಲಿಯನಾಶ್ರಯಿಸುತಿರುವೆನು |
ಮಂಡಲಾಧಿಪನಲ್ಲಿಗೈದುವ ಕಾರ್ಯಮೇನಿಹುದು ||
ಚಂಡಮತಿಗಳು ನೀವು ವರಭೂ |
ಮಂಡಲಾಧಿಪಗಿದನು ಪೇಳುವು |
ದಂಡಲೆಯೆಫಲವಿಲ್ಲ ಬಾರೆನು ಪೋಗಿ ನೀವೆಂದ || ೧೦

ಎನಲು ಕೇಳ್ದಾಸಚಿವರೆಲ್ಲರು |
ಮನದಿಲಜ್ಜೆಯ ತಾಳುತಲ್ಲಿಂ |
ಜನಪತಿಯ ಬಳಿಗೈದಿ ವಂದಿಸಿ ಕರಗಳನುಮುಗಿದು ||
ವಿನಯದಿಂದಾ ಬ್ರಹ್ಮಚಾರಿಯ |
ಜನಪತಿಯ ಬಳಿಗೈದಬೇಕೆಂ |
ದೆನೆಲು ಬರೆನೆಂದಾತನೆಂದುದ ನರುಹಿದರುನೃಪಗೆ ||

ಎಂದಮಾತನು ರಾಜಶೇಖರ |
ನಂದುಲಾಲಿಸಿ ತನ್ನಸಚಿವರಿ |
ಗೆಂದತಾನೇಪೋಗಿ ಕಾಲಿಟಿಯೊಳಗೆ ತದ್ವಿಜನ |
ನಂದನನ ಸತ್ಕರಿಸಿಬಹೆ ಮುದ |
ದಿಂದಲಾತನ ಚರಣಕರ್ಪಿಸೆ |
ಬಂಧುರದ ವಸ್ತುಗಳನೆಲ್ಲವ ಜೋಡಿಸುವುದೆಂದು ||

ಅರಸಬಳಿಕಾ ತನ್ನಪರಿಜನ |
ವೆರಸಿ ಕಾಲಟಿಗೈದಿ ಭೂಮೀ |
ಸುರರ ತರಳರನಡುವೆ ಬಹುದೇದೀಪ್ಯಮಾನದಲಿ ||
ವರಮೃಗಾಂಕನ ಕಿರಣದಂದದಿ |
ಮೆರೆವ ಗೆಳಸೂತ್ರದಲಿ ರಂಜಿಪ
ಪರಮಪುರುಷನ ದಿವ್ಯಮೂರ್ತಿಯ ಕಂಡನಿದಿರಿನಲಿ ||

ಚಂಡಕಿರಣಸಹಸ್ರತೇಜನ |
ದಂಡಧರನನುಕೊಂಡು ಮುನಿಪನ್ನ |
ಕಂಡುವಿನನಂದನನರಕ್ಷಿಸಿದತುಲಮಹಿಮನನು ||
ಖಂಡಶಶಿಶೇಖರನ ಮತ್ತಾ |
ಖಂಡಲಾರ್ಚಿತ ಪಾದಪದ್ಮನ |
ಖಂಡಪರಶುವ ಶಿವನ ಕಂಡನು ಮಂಡಲಾಧಿಪನು ||

ಉಟ್ಟ ಧೌತಾಂಬರದ ಕಟಿಗಳ |
ನಟ್ಟಕುಶಮೇಖಲೆಯ ಫಾಲದೊ |
ಳಿಟ್ಟಭಸ್ಮದ ರೇಖೆಯಿಂ ಥಳಥಳಿಪಶಂಕರನ ||
ಅಟ್ಟಬರುವಾಶ್ರುತಿಗೆ ನೆರೆವ್ಯೈ |
ಗೊಟ್ಟುವಿಲ್ಲದ ಕಾಲಕರ್ಮದ |
ಕಟ್ಟಗೊಳಗಾಗದ ಮಹೇಶನ ಕಂಡ ಕೇರಳನು || ೧೫

ಪರಮಕಾಂಚನಲತೆಯನಾಂತಿಹ |
ಸುರತರುವಿನಂದದಲಿ ಶೋಭಾ |
ಕರವೆನಿಪ ಯಜ್ಞೋಪವೀತವ ದಿವ್ಯವಸನವನು ||
ಧರಿಸಿರುವ ಶಾರೀರಕಾಂತಿಯು |
ಮೆರೆಯುತಿರಲಾ ನೀಲಕಂಠನ |
ಪರಮಮೂರ್ತಿಯ ಕಂಡು ಪುಳುಕಿತನಾದನಡಿಗಡಿಗೆ || ೧೬

ಬಲಿಯುಸತ್ರದೆ ಮೂರುಹೆಜ್ಜೆಯ |
ನೆಲನಬೇಡಿದ ವಟುವರೇಣ್ಯನ |
ಚೆಲುವನಾಂತಿರುತಿರ್ಪ ನತಜನಪಾಲಶಂಕರನ ||
ಸುಲಲಿತಾಂಗವ ಕಂಡುಭೂಪತಿ |
ತಿಲಕ ಭಯಭಕ್ತಿಯಲಿ ತತ್ಪದ |
ನಳಿನಗಳಿಗಭಿನಮಿಸಿ ನಿಂದನುಮುಗಿದ ಕರಗಳಲಿ || ೧೭

ನಂದನೆಯಕೈಕೊಂಡು ನೃಪತಿಯ |
ನಿಂದುಧರ ಹರಸಿದನು ಕುಶಲವ |
ನಂದಮಿಗೆಕೇಳಿದನು ಕರುಣಾಪಾಂಗದಲಿನೋಡಿ ||
ಮಂದಹಾಸವತಾಳಿ ಬಳಿಕತಿ |
ಬಂಧುರಪ್ರೀತಿಯಲಿ ಕೇರಳ |
ಗೆಂದನಾಶಂಕರನು ಬೆರಗಾಗಿರಲುಜನನಿವಹ || ೧೮

12

ಕೇಳುನೃಪಕುಲವರ್ಯ ಧರಣೀ ।
ಪಾಲಕರನನವರತ ವಿಪ್ರರ ।
ಜಾಲವಾಶ್ರಯಿಸುತ್ತಪಡೆಯೆ ಮನೋಭಿವಾಂಛಿತವ ॥
ಮೇಲೆನಿಸಪನೃಪಗೃಹದ ಬಳಿಯೊಳ ।
ಗೋಲಗಿಸುತಿರುಹುದು ಸೀಸೀ ।
ಕಾಲಟಿಗೆ ಬಂದಿಹುದಿದಚ್ಚರಿಯೆಂದು ಹರನುಡಿದ ॥

ಶಿವನು ನುಡಿದುದ ಕೇಳುತವನೀ ।
ಧವನು ನುಡಿದನು ಮತ್ತೆ ವಿನಯದಿ ।
ಭುವನದೊಳು ಸುಬ್ರಹ್ಮತೇಜದ ಬಲದಿ ಪಾರ್ಥಿವರು ॥
ತವೆ ಸುಕೀರ್ತಿಯ ಪಡೆದು ರಾಜಿಸು ।
ತವನಿಯನು ಪಾಲಿಪರದಲ್ಲದೆ ।
ಹವಣುತಾಬೇರಿಹುದೆ ವಿಪ್ರರನುಳಿದುರಾಜರಿಗೆ ॥

ಧರಣಿಯಮರೋತ್ತಮನೆ ನಿನ್ನೀ ।
ಪರಮನಿರ್ಮಲಯಶವು ಧರೆಯೊಳು ।
ಹರಹಿಕೊಂಡಿರೆ ಕೇಳಿ ನಿನ್ನಯ ಪಾದಸರಸಿಜವ ॥
ಪರಿಕಿಸಿಯೆ ನಾಂಬುಧರದಯೆಯಿಂ ।
ವಿರಚಿಸಿಹ ನಾಟಕವನಿವ ತವ ।
ಚರಣಸರಸೀರುಹದೊಳರ್ಪಿಸೆ ಬಂದಿಹೆನುನಾನು ॥

ಎಂದುಸಿರಿ ಶಂಕರಗೆ ನರಪ ।
ತಂದನಾಟಕಲಿಖಿತಪುಸ್ತಕ ।
ವೃಂದವನು ವರಜಾತರೂಪದ ನಾಣ್ಯವಯುತವನು ॥
ಇಂದುಮೌಳಿಯ ಪಾದಕರ್ಪಿಸು !
ತಂದುನುತ್ತಭಿನಮಿಸುತಿರೆ ಗರ ।
ಕಂಧರನು ನಾಟಕವನಂಗೀಕರಿಸುತಿಂತೆಂದ ॥

ಅರಸಕೇಳ್ವೈ ರೌಪ್ಯವಿದನಾ |
ದರಿಸಿ ಗಾರ್ಹಸ್ಥ್ಯದಲಿ ವರ್ತಿಪ |
ಧರೆಯವೃಂದಾರಕರಿಗೀವುದು ವರ್ಣಿಗೆನಗೇಕೆ ||
ವಿರಚಿಸಿಹನಾಟಕವ ನಿವನಾಂ |
ಪರಿಕಿಸುವೆನೆಂದೆನುತ ಹರನತಿ |
ಕರುಣದಿಂದಲೆತಾನೆವಾಚಿಸಿ ನೃಪತಿಗಿಂತೆಂದ || ೨೩

ವೀರ ಕರುಣಾದ್ಭುತವು ವರಶೃಂ |
ಗಾರ ಹಾಸ್ಯವು ಮೇಣ್ಭಯಾನಕ |
ಚಾರುತರಭೀಭತ್ಸರೌದ್ರವು ಶಾಂತವೆಂದೆಂಬ ||
ಸಾರತರ ನವರಸಗಳಿಂ ನೆರೆ |
ತೋರುತಿಹ ವಾತ್ಸಲ್ಯ ರಸದಿಂ |
ಸೂರಿಗಳು ನಲಿವಂತುಟಿರ್ಪವು ನಾಟಕತ್ರಯವು || ೨೪

ನವರಸಾಲಂಕಾರದಿಂದಲೆ |
ತವೆವಿರಾಜಿಪನಾಟಕವು ಭೂ |
ಧವನೆ ಕೇರಳದೇಶದೋಳ್ ಪ್ರಖ್ಯಾತವಾಗಿರಲಿ ||
ಭುವನದೊಳು ನಿನ್ನತುಳಕೀರ್ತಿಯು |
ಧವಳತೆಯನಾಂತಿರಲಿ ಗವಿುಸೆನೆ |
ಶಿವಗುರುವಿನಾತ್ಮಜಗೆವಿನಯದಿ ಮತ್ತೆ ನೃಪನುಡಿದು || ೨೫

ಲಾಲಿಸೈ ದ್ವಿಜವರ್ಯ ಜಗದಿ ವಿ |
ಶಾಲಭಾಗ್ಯವು ಮೇಣುಧರೆಯನು |
ಪಾಲಿಸುವ ಸಂಪದವು ಭುಜಬಲಕೀರ್ತಿವೈಭವವು ||
ಮೇಳವಿಸಿಕೊಂಡಿರ್ದು ಫಲಮೇ |
ನಾಲಿಯಿಲ್ಲದ ನರನತೆರದೊಳು |
ಬಾಲರಿಲ್ಲದಬದುಕು ನರಗೆ ನಿರರ್ಥಕರಮ್ಮೈಸೆ || ೨೬

ಆವವಿಧ ಜಪ ಹೋಮಸತ್ಕ |
ರ್ಮಾವಳಿಯನೆಸಗಿದರೆ ಬಳಿಕಿ |
ನ್ನಾವದೈವವಭಜಿಸಿದರೆ ಸಂತತಿಯುದೊರಕುವುದೊ ||
ಆ ವಿಧವ ದಯೆಗೈಯುತೆನ್ನನು |
ಕಾವುದೆಂದೆನುತಾಗ ಶಂಕರ |
ಪಾವನಾಂಘ್ರಿಯಪಿಡಿದು ಬೇಡಿದನಂದು ಭೂಪಾಲ ||

ಎಂದುಬೇಡುತ್ತಿರಲು ಕರುಣಾ |
ಸಿಂಧು ತನ್ನೃಪನುತ್ತಮಾಂಗವ |
ನಂದುಪಿಡಿದೆತ್ತಿದನು ಸಂತೈಸಿದನುಕರುಣದಲಿ ||
ಮಂದಹಾಸಮುಖಾರವಿಂದನು |
ಬಂಧುರಪ್ರೇಮದಲಿ ನರಪತಿ |
ಗೆಂದನೀಪರಿ ಕೇಳು ಭಾರ್ಗವಕುಲಶಿರೋಮಣಿಯೆ ||

ಇಷ್ಟವನುಪಡೆಯಲಿಕೆ ಸುತಕಾ |
ಮೇಷ್ಟಿಯನು ನೀನೊಲಿದು ಸುರಸಂ |
ತುಷ್ಟಿಯಹರೀತಿಯಲಿ ವಿರಚಿಸೆಬಳಿಕ ಕರುಣದಲಿ ||
ವಿಷ್ಟಪಾಧೀಶ್ವರನು ನಿನಗು |
ತ್ಕೃಷ್ಟವರಗಳನಿತ್ತು ನಿನ್ನನು |
ತುಷ್ಟಿಪಡಿಸುವನೆಂದು ನುಡಿದನು ಶಂಭುವಿನಯದಲಿ ||

ಎನಲು ಹರುಷಿತನಾಗಿ ಭೂಪನು |
ತನುಪುಳಕತೆಲೆದೋರೆ ನೃಪಡಪದ |
ವನರುಹಕ್ಕಭಿನಮಿಸಿ ಬಳಿಕಾನಿಷ್ಕವಯುತವನು ||
ಘನವೆನಿಪಗಾರ್ಹಸ್ಥ್ಯಧರ್ಮದ |
ಲನುವಿನಿಂವರ್ತಿಸುವ ಬಾಡಬ |
ಜನಕೆ ಮುದದಿಂದಿತ್ತು ಬೀಳ್ಕೊಂಡನುಸರಾಗದಲಿ ||




ಕೇರಳದೇಶಾಧಿಪನಾದ ರಾಜಶೇಖರನಿಗೆ ಪುತ್ರಕಾಮೇಷ್ಟಿಯಂ ಮಾಡುವಂತೆ
ಶ್ರೀಶಂಕರಾನುಗ್ರಹವಾದುದು.

ಬಂದುಪುರಕಾರಾಜಶೇಖರ |
ನಂದುತನಗಾರಾಜಶೇಖರ |
ಬಂಧುರಪ್ರೇಮದಲಿ ಪೇಳಿದಸಪ್ತತಂತುವನು ||
ಅಂದವೆನೆವಿರಚಿಸಿದನಾದ್ವಿಜ |
ಸಂದಣಿಯ ಸಂತುಷ್ಟಿವಡಿಸುತ |
ಲಿಂದುಮೌಳಿಯಪದವಭಜಿಸುತ್ತಿರ್ದನನುನಯದೆ || ೩೧

ಹರನ ದಯದಿಂದೇಕಪಿಂಗನು |
ವರವನಿತೆಯಾಚಿತ್ರಲೇಖೆಯ |
ಲುರುಸುತನ ನಳಕೂಬರಾಖ್ಯನ ಪಡೆದರೀತಿಯಲಿ ||
ನರಪತಿಯು ಶಂಕರನದಯೆಯಿಂ |
ವರಕುಮಾರನಪಡೆದು ಸಂತತ |
ಹರುಷಮಿಗೆ ಕೊಂಡಾಡುತಿರ್ದನು ಸೌಖ್ಯದಲಿಶಿವನ || ೩೨

ಇಂತು ಕೇರಳದವನಿಪಾಲಗೆ |
ಚಿಂತಿತಾರ್ಥವನಿತ್ತು ಸಲಹಿದ |
ಕಂತುಮಥನನ ಪರಮಲೀಲಾಚರಿತೆಯನುಕೇಳಿ ||
ಸ್ವಾಂತಶುದ್ಧರು ಪರಮಸಂಭ್ರಮ |
ವಾಂತುಚಿತ್ತದಿ ಬರುತಲಿರ್ದರು |
ಶಾಂತವಿಗ್ರಹನೆನಿಪ ಹರನನು ಕಾಂಬತವಕದಲಿ || ೩೩

ದೇಶದೇಶದ ವಿಪ್ರಜನಗಳು |
ವಾಸವಾರಾಧಿತನ ಮಿಗೆ ಸಂ |
ತೋಷದಿಂದಲೆಕಂಡು ವಿಸ್ಮಯಗೊಂಡು ಪರಿಣತೆಗೆ ||
ದೇಶಿಕೊತ್ತಮ ಹರನಿಗಂತೇ |
ವಾಸಿಗಳುತಾವಾಗಿ ಶಾಸ್ತ್ರಾ |
ಭ್ಯಾಸವನುಮಾಡುತ್ತಲಿರ್ದರು ಕಾಲಬಯೊಳಾಗೆ || ೩೪

ವರುಷವೇಳರ ಹರೆಯದೊಳಗಾ |
ಹರನು ವರವೇದಾಂತತತ್ತ್ವವ |
ನುರುತರಪ್ರೇಮದಲಿ ಶಿಷ್ಯಾವಳಿಗೆಬೋಧಿಸುತ ||
ವರಜನನಿಯಂಘ್ರಿಯುಗಸೇವಾ |
ಪರನು ತಾನೆಂದಿನಿಸಿ ಸಂತತ |
ಸುರನುತ ಶ್ರೀಕಂಠದೇವನುಸಲಹಿದನು ಜಗವ || ೩೫

ಸಂಧಿ ಹತ್ತಕ್ಕೆ ಪದ್ಯ ೩೫೧ಕ್ಕೆ ಮಂಗಳ.

## ಹನ್ನೊಂದನೆಯ ಸಂಧಿ.

ಸೂಚನೆ || ಘೋರತರಭವದುರಿತಪಾರಾ |
ವಾರಬಡಬನುದಾರಗುಣನಿಧಿ |
ಮಾರಹರನಾಪರಮಹಂಸಾಶ್ರಮವ ಕೈಕೊಂಡ ||

ಕೇಳು ಶೌನಕಮುನಿಪ ಖಳಕುಲ |
ಕಾಲಶಂಕರ ತನ್ನಶಿಷ್ಯಜ |
ನಾಳಿಗತಿಶಯತತ್ತ್ವವಿದ್ಯಾಸಾರಸಂಗತಿಯ ||
ಲೀಲೆಯಿಂ ಬೋಧಿಸುತ ನತಜನ |
ಪಾಲಕನು ಮಾತೆಯನುಭಕ್ತಿವಿ |
ಶಾಲದಿಂ ಸೇವಿಸುತಲಿರ್ದನು ಕಾಲಟಿಯೊಳಿಂತು || ೧

ತರಳನಿರವನು ಕಂಡುಮನದಲಿ !
ವರಜನನಿ ಹಿಗ್ಗುವಳು ಮೇಣಾ |
ನೆರೆಯವಿಪ್ರರು ಪರಮಸಂಭ್ರಮದಿಂದಲಿರುತಿಹರು ||
ಗುರುಜನಕೆ ಪರಿಜನಕೆ ಮತ್ತಾ |
ಧರೆಯಜನರೆಲ್ಲರಿಗೆ ಶಂಕರ |
ಸುರತರುನವಿನಂದದಲಿ ರಂಜಿಸುತಿರ್ದನನವರತ || ೨

ಇಂತೆಸೆವ ಬಾಲಕನಕಾಣುತ |
ಲಂತರಂಗೆದಲತುಲಹರ್ಷವ |
ನಾಂತುಸತಿಯಾರ್ಯಾಂಬೆ ತನ್ನಯುವರಕುಮಾರನಿಗೆ ||
ಕಂತುಪಿತನೊಲುಮೆಯಲಿ ಮದುವೆಯ |
ಸಂತಸದೊಳೆಸಗಿದರೆ ತನ್ನಯ |
ಚಿಂತೆ ಪರಿಹರವೆನುತಲಾಲೋಚಿಸುವಳಡಿಗಡಿಗೆ || ೩

ಬಾಲಕನಿಗನುರೂಪಳಾಗಿಹ |
ಬಾಲೆಯನು ಸೌಂದರ್ಯಸದ್ಗುಣ |
ಮಾಲೆಯನು ತಾತಂದು ವರವೈವಾಹಕರ್ಮವನು ||
ಶೂಲಪಾಣಿಯ ದಯದೊಳೆಸೆಗಲು |
ಮೇಲೆನಿಪಸುಖವವುದು ತನ್ನ ವಿ |
ಶಾಲವಂಶವು ವೃದ್ಧಿಯೈದುವುದೆನುತ ಹಿಗ್ಗುವಳು || ೪

ಈವಿಧದಲಾರ್ಯಾಂಬೆ ತನ್ನಯ |
ಭಾವದಲಿ ಬಹುವಿಧವನೆಣಿಸುತ |
ತೀವಿದುತ್ಸಹದಿಂದ ನಿಜಸುತತನಗೆವಿರಚಿಸುವ ||
ಸೇವೆಯನು ಕೈಕೊಳುತಲಿರುತಿರೆ |
ಭೂವಿಬುಧಸಂದೋಹವಾಗಲು |
ಭಾವಜಾರಿಯ ಪದವನೋಲಗಿಸುತ್ತಲಿರುತಿಹುದು || ೫

ಪರಮಶಿವ ಪರಮೇಶ ಪರಶಂ |
ಕರ ಪರಂಜ್ಯೋತಿಸ್ಸ್ವರೂಪನು |
ಪರ ಪರಾತ್ಪರನೆನಿಪ ಪರಮಾನಂದವಿಗ್ರಹನು ||
ಧರಣಿಯಲಿ ಮನುಜಾಕೃತಿಯೊಳವ |
ತರಿಸಿಹನು ತಾನೆಂಬವಾರ್ತೆಯ |
ನರಿದು ಮುನಿಗಳುಬಂದರಾ ಪುರಹರನದರ್ಶನಕೆ || ೬

ವರಮುನಿಪ ಗೌತಮ ದಧೀಚಿಯು |
ಸುರಪಪಿತಕಾಶ್ಯಪನಗಸ್ತ್ಯನು |
ಸುರವರಾರ್ಚಿತಚರಣನಾರದಮುನಿಪನುಪಮನ್ಯು ||
ವರತಪಸ್ವಿಯುಗಾರ್ಗ್ಯ ಗಾಲವ |
ಮರುತಭಕ್ಷಕ ದೀರ್ಘತಪ ತಿ |
ತ್ರಿರಿಗಳೆಂಬಾ ಮುನಿಗಳೈತರುತಿರ್ದರೊಗ್ಗಿನಲಿ || ೭

ಬಂದಮುನಿಗಳ ಕಂಡುಶಂಕರ |
ಸಂದಸಂಭ್ರಮದಿಂದಲವದಿರ |
ನಂದುನಡೆದಿದಿರ್ಗೊಂಡುವಂದಿಸಿ ಬಹುಳಭಕ್ತಿಯಲಿ ||
ಮಂದಿರಕೆಕರೆತಂದು ವಿಧಿಮತ |
ದಿಂದ ಸತ್ಕರಿಸುತ್ತ ಕರುಣಾ |
ಸಿಂಧು ಪೀಠವನಿತ್ತು ಕುಳ್ಳಿರಿಸಿದನುವಿನಯದಲಿ || ೮

ಬಳಿಕಲಾಶಂಕರನು ನಿರ್ಮಲ |
ಜಲವ ತಂದಾ ಮುನಿಜನಂಗಳಿ |
ಗೊಲಿದು ಚರಣವತೊಳೆಯುತರ್ಘ್ಯವನಿತ್ತು ಭಕ್ತಿಯಲಿ ||
ಸಲಿಸಿಮಧುಪರ್ಕವನು ಮತ್ತಾ |
ಕಲುಷದೂರನು ಪರಮಸಂಯಮಿ |
ಕುಲಕೆ ಕೈಗಳಮುಗಿಯುತಿಂತೆಂದನು ಸರಾಗದಲಿ|| ೯

ವಿಹಿತಜನ್ಮಸಹಸ್ರಸುಕೃತದ |
ಮಹಿಮೆಯನಗಿಂದಿನಲಿ ಸಲೆಸಂ |
ನಿಹಿತವಾಗುತ ನಿಮ್ಮಪದರಾಜೀವದರ್ಶನದ ||
ಬಹುಳಭಾಗ್ಯೋದಯವ ನೆರೆನಿ |
ರ್ವಹಿಸಿಕೊಟ್ಟುದು ಧನ್ಯತಾನೆಂ |
ದಹತಪರಿತೋಷದಲಿ ಪೊಗಳಿದನಂದುಮುನಿವರರ || ೧೦

ಕಾಣಲರಿಯರು ಪದವನಿವಗೀ ।
ರ್ವಾಣಪತಿಮೊದಲಾದಸುರರೆನೆ ।
ಕಾಣಿಕೆಗೆದೊರಕೊಂಡವೆಂತುಟೊ ಮಾನವಂಗೆನಗೆ ॥
ಕ್ಷೋಣಿಯಲಿ ನಾನಲ್ತೆ ಧನ್ಯನು ।
ಮೇಣುಮಾನ್ಯನು ಮೋಕ್ಷಪದನಿ ।
ಶ್ರೇಣಿಗಳ ಪದಕಮಲದರ್ಶನಲಭಿಸಿತೆನಗೆಂದ ॥ ೧೧

ಎಂದು ಹರನಾಡಿದುದ ಕೇಳುತ ।
ಮುಂದಪರಿತೋಷದಲಿ ತಾಪಸ ।
ವೃಂದವಾಶಂಕರನ ನರಲೀಲಾವಿನೋದವಿದು ॥
ಚಂದವಾದುದೆನುತ್ತಲನಿಬರು ।
ನಿಂದುಕರಗಳಮುಗಿದು ಚರಣಕೆ ।
ವಂದಿಸುತಲಿಂತೆಂದುನುಡಿದರು ಕಾಲಕಂಧರಗೆ ॥ ೧೨

ಘೋರತರಸಂಸಾರಶರಧಿಯ ।
ನಾರಕರುಣದ ತರಣಿಯಿಂದಲೆ ।
ಮೀರಿ ಪುನರಾವರ್ತರಹಿತಬ್ರಹ್ಮಪದವಿಯನು ॥
ಸೇರುವರೊ ಯೋಗಿಗಳು ತಾವಾ ।
ಮಾರವೈರಿಯ ಪರಮಸಾಕ್ಷಾ ।
ತ್ಕಾರದರ್ಶನಲಾಭದಿಂದತಿ ಧನ್ಯರಾದೆವಲೆ ॥ ೧೩

ಪರಮಪುರುಷನೆ ನೀನುಲೋಕ ।
ಕ್ಕರುತರದಮಾರ್ಗವನು ಬೋಧಿಸೆ ।
ತಿರೆಯೊಳುದಯಿಸಿ ಮಾನವಾಕೃತಿಯಿಂದೆ ಮುನಿಜನಕೆ ।
ಎರಗಿ ತೋರಿಸದಿರ್ದೊಡಿನ್ನೀ ।
ಗುರುಹಿರಿಯರೆಂದೆಂಬ ಗೌರವ ।
ವರಿಕೆಯಾಗದೆನುತ್ತವಂದಿಸಿ ತೋರ್ದೆಯತಿಶಯವ ॥ ೧೪

ನೀಲಕಂಧರ ನೀನುರಜತದ |
ಶೈಲದೊಳು ಕರುಣದಲಿ ನೇಮವ |
ಪಾಲಿಸಿದರೀತಿಯಲಿ ಸುರವರರೆಲ್ಲ ಧರಣಿಯಲಿ |
ಲೀಲೆಯಿಂದುದ್ಭವಿಸಿ ನಾಸ್ತಿಕ |
ರೇಳಿಗೆಯ ನೆರೆಮುರಿಯಲೋಸುಗ |
ಕಾಲಕಾಲನೆ ನಿನ್ನ ಕರುಣವ ನೀಕ್ಷಿಸುತ್ತಿಹರು ||

ಇನ್ನು ನೀಂಪಯೆಗೈದು ಧರೆಯೊಳ |
ಗುನ್ನತದ ಸದ್ಧರ್ಮಮಾರ್ಗವ |
ನನ್ನಿಯಿಂರಕ್ಷಿಸುತ ಪಾಷಂಡಿಗಳಶಿಕ್ಷಿಸುತ ||
ಭಿನ್ನ ಮತವನುಮುರಿದು ಪರಮಾ |
ಭಿನ್ನ ತತ್ವವನೊರೆದು ಲೋಕದ |
ಖಿನ್ನತೆಯ ಪರಿಹರಿಸಬೇಕೆಂದೆರಗಿದರುಪದಕೆ

ನಸುನಗುತಲವದಿರನುಮನ್ನಿಸಿ |
ಪಶುಪತಿಯು ಕರುಣದಲಿನುಡಿದನು |
ವಸುಧೆಯಲಿ ಷಣ್ಮತವ ಸಂಸ್ಥಾಪಿಸುತ ಧರ್ಮವನು ||
ಒಸೆದುರಕ್ಷಿಸಿ ಸರ್ವಲಿಂಗಿ |
ಪ್ರಸರವನುಪರಿಭವಿಸಿ ತಮವದು |
ನಸಿದುಪೋಪಂದದಲಿ ಹರಹುವೆ ಬೆಳಕನೆಂದೆನುತ ||

ಇಂತುಮುನಿಜನಗಳನು ಹರತಾ |
ಸಂತವಿಡುತ್ತಿರಲಾಗ ಶಿವಗುರು |
ಕಾಂತೆಯಾರ್ಯಾಂಬಿಕೆಯು ಮುನಿಗಳಬರವನಾರೈದು ||
ಸಂತಸದಿನಡೆತಂದು ವರಮುನಿ |
ಸಂತತಿಯಕಾಣುತ್ತ ಸಂಭ್ರಮ |
ನಾಂತು ಭಯಭಕ್ತಿಯಲಿ ನಮಿಸುತಲೆದ್ದು ಕೈಮುಗಿದು ||

ಕಾಮಲೋಭಪ್ರಮುಖವೈರಿ |
ಸ್ತೋಮವನು ನೆರೆ ಗೆಲಿದು ಸಂತತ |
ಕಾಮಹರಚರಣಾರ್ಪಿತಾಂತಃಕರಣರೆಂದೆನಿಪ ||
ಈ ಮಹಾಮುನಿನಿಕರದರ್ಶನ |
ಪಾಮರಳಿಗೆನಗೆಂತು ಪಾಪದ |
ಧಾಮವಹ ಕಲಿಯುಗದಿ ಘಟಿಸಿದುದೆಂದಳಾರ್ಯಾಂಚೆ || ೧೯

ಎಂದೊರೆದ ವಚನಗಳನಾಲಿಸು |
ತಂದಗಸ್ತ್ಯನು ವಿನಯದಿಂದಿಂ |
ತೆಂದನೆಲೆ ವನಿತಾಶಿರೋಮಣಿ ನಿನ್ನಪತಿಯಂದು ||
ಇಂದುಮೌಳಿಯ ಪಾದಕಮಲವ |
ನಂದಮಿಗೆಭಜಿಸುತ್ತ ಪುತ್ರಾ
ನಂದಕಾಂಕ್ಷೆಯೊಳಿರಲು ತಪದಲಿ ಬಳಿಕಲೊಂದುದಿನ || ೨೦

ಕನಸಿನಲಿ ದರ್ಶನವನಿತ್ತಾ |
ಮನಸಿಜಾಂತಕನೆಂದನೊಲವಿಂ |
ತನುಜನಲ್ಪಾಯುಷನ ಸಕಲಾಭಿಜ್ಞನೆನಿಸುವನ ||
ಅನುವಿನಿಂಬಯಸುವೆಯೊ ಮೇಣ್ಬನ |
ವೆನಿಸಿದಾಯುವ ಪಡೆದು ಜೀವಿಪ |
ತನುಜರತಿಮೂರ್ಖರನು ನೀಬಯಸುವೆಯೊಪೇಳೆಂದು || ೨೧

ಮತಿವಿಹೀನರನೊಲ್ಲೆ ನೆಲೆಪಶು |
ಪತಿಯೆ ನೆರೆಸರ್ವಜ್ಞನೆನಿಸುವ |
ಸುತನನೀಡುವುದೆಂದು ಶಿವಗುರುಬೇಡಿದನು ಹರನ ||
ಸತಿಯೆ ಕೇಳಾಬಳಿಕ ಕರುಣದಿ |
ನತಜನೋದ್ಧಾರಕನು ನಿನ್ನಯ |
ಸುತನೆನಿಸಿ ಜನಿಸಿದನು ಶಂಕರನಾಮವನು ತಳೆದು || ೨೨

ವರಯಶಸ್ವಿನಿ ನೀನು ನಿನ್ನಯ ।
ಪರಮಪುಣ್ಯಕೆ ಸರಿಯಕಾಣೆನು ।
ಧರೆಯೊಳಗೆ ಕೇಳೆನುತ ವ್ಯೈತ್ರಾವರುಣಿ ಪೊಗಳಿದನು ॥
ತರುಣಿಯುದನಾಲಿಸುತ ತನ್ನಯ ।
ವರಸುತನಿಗಾಯುಷ್ಯ ವೆನಿತಿಹು ।
ದೊರೆಯುಬೇಕೆಂದೆನುತ ಬೇಡಿದಳಾತಪೋಧನನ ॥

ಕೇಳುಸಾಧ್ವೀಮಣಿಯೆ ನಿನ್ನಯ ।
ಬಾಲಕನು ತಾನೆಂಟುಬರಿಸವು ।
ಬಾಳುತಿರಲಾಬಳಿಕಲದುತಾ ದ್ವಿಗುಣವಾಗುವುದು ॥
ಮೇಲೆಷೋಡಶಯುಗಳ ಮಹುದೆಲೆ ।
ಶೀಲವತಿ ದಿಟವೆಂದು ಪೇಳ್ದುವಿ ।
ಶಾಲಮತಿಗಳು ತೆರಳಿದರು ಮನಿಗಳು ತಪೋವನಕೆ ॥

ತಿರುಗಿದರು ಮುನಿವರರುತಮ್ಮಯ ।
ವರತಪೋವನಕತ್ತಲಿತ್ತಲು ।
ತರುಣಿಯಾರ್ಯಾಂಬಿಕೆಯು ತನ್ನಯ ತನಯನಾಯುಷವು ॥
ಕಿರಿದೆನುತ ಮುನಿವರರು ಪೇಳಿದ ।
ಪರಿಯ ಮನದಲಿ ನೆನೆದು ಮೂರ್ಛೆಯ ।
ಉರುಳಿದಳು ಬಿರುಗಾಳಿಗೊರಗಿದ ಕದಳಿಯಂದದಲಿ ॥

ಅಂದದನು ಕಾಣುತ್ತ ಶಂಕರ ।
ಬಂದನತಿವೇಗದಲಿ ಜಲವನು ।
ತಂದು ಜನನಿಗೆ ಕುಡಿಸಿ ಸಂತೈಸುತ ಹಿತೋಕ್ತಿಯಲಿ ॥
ಅಂದವಹ ಶೈತ್ಯೋಪಚಾರಗ ।
ಳಿಂದ ಲೆಬ್ಬಿಸುತಿರಲು ಬಳಿಕಾ ।
ನಂದನನನರೆಮಲಗಿ ತಾಂತುಳ್ಕಿರ್ದಳಾರ್ಯಾಂಬೆ ॥

ಏನಿದೇನೆಲೆ ಜನನಿ ಚಿತ್ತ |
ಗ್ಲಾನಿಯಿದು ಮತಿವಂತರಾದವ |
ರೀನೆಲನಬಾಳ್ವಿಕೆಯ ಶಾಶ್ವತವೆಂದು ನಂಬುವರೆ ||
ಹಾನಿವೃದ್ಧಿಗಳೆಂಬ ಭೇದವ |
ನೇನುವನು ಚಿತ್ತದೊಳುತಾರದೆ |
ಮೌನದಿಂ ಬಂದುದನು ಭೋಗಿಸೆ ದುಃಖವೆಲ್ಲಿಹುದು || ೨೭

ತರಣಿಯಸ್ತಮಿಸಿದಡೆ ಪಕ್ಷಿಯು |
ನೆರವಿ ತರುವೊಂದರಲಿ ಸೇರುತ |
ತರಣಿಯುದಯಿಸೆ ಬಳಿಕ ವಿಂಗಡವಾಗಿ ಪೋಪಂತೆ
ನರರು ಪೂರ್ವಾರ್ಜಿತದ ಕರ್ಮಕೆ |
ಸರಿಯೆನಿಪ ಸುಖದುಃಖದಲಿತಾವ್ |
ಬೆರೆತು ತೀರಿದಬಳಿಕ ಸಾರ್ವರು ದುಗುಡವಿದಕೇಕೆ || ೨೮

ಎಂದು ನಾನಾವಿಧದ ಬೋಧೆಗ |
ಳಿಂದ ಜನನಿಯು ಸಂತವಿಸಿ ಬಾ |
ಲೇಂದುಧರನಾಬಳಿಕ ಶಿಷ್ಯಾವಳಿಗೆ ತತ್ವವನು ||
ಎಂದಿನಂತುಪದೇಶಗೆ ಯುತ |
ಸಂದಸೌಖ್ಯದೊಳಿರಲು ದುಃಖವ |
ನಂದು ಮರೆದಾವನಿತೆ ಪೂಜಿಸುತಿರ್ದಳಾಹರನ || ೨೯

ಇರುತಿರಲು ಬಳಿಕೊಂದುದಿನವಾ |
ಹರನು ಜನನಿಯ ಸನಿಹಕೈದುತ |
ಚರಣಕೆರಗಲು ಹರಸಿಕುಳ್ಳಿರಿಸಿದಳು ನಂದನನ ||
ಹರುಷಗೊಂಡಾ ದೇವದೇವನು |
ಪರಶಿವನು ನಿಜಜನನಿಯೊಡನೀ |
ಪರಿಯಪೇಳುತಲಿರ್ದನೆಲೆ ಶೌನಕನೆ ಕೇಳೆಂದ || ೩೦

ಜನನಿಕೇಳೌ ವಿಪ್ರಬಾಲಕ |
ನನುಪಮಾನದ ವೇದಮಾರ್ಗವ |
ನನುಸರಿಸುತುಪನೀತರಾಗುತ ಗುರುಕುಲವಸೇರಿ ||
ಅನಘವಹ ಸದ್ಬ್ರಹ್ಮಚರ್ಯೆಯ |
ನನುವಿಸಿಂದಾಚರಿಸಿ ಗುರುವಿನ |
ಪರಮಕೃಪೆಯಲಿ ವಿದ್ಯೆಯಂಗ್ರಹಿಸುವುದು ಕುಲಧರ್ಮ || ೩೧

ಸಾಧಿಸಿದವಿದ್ಯೆಯನು ಕೃಪೆಯಿಂ |
ಬೋಧಿಸಿದ ಗುರುವರನ ಪಾವನ |
ಪಾದಪದ್ಮಂಗಳಿಗೆ ದಕ್ಷಿಣೆಯಿತ್ತುಪೊಡಮಟ್ಟು ||
ಮೋದದಿಂನೇಮವನು ಪಡೆದುರೆ |
ವೇದವಿದ ಸನ್ಯಾಸಮಾರ್ಗದ |
ಲೈದುವುದು ಮೋಕ್ಷವನು ಸುಖಕರವೆಂಬುದೊಂದುಮತ || ೩೨

ನೇರದಿಂ ಯತಿಯಾಗಿ ಮೋಕ್ಷವ |
ಸೇರಲಿಕೆ ಚೈತನ್ಯವಿಲ್ಲದ |
ಧಾರಿಣೀಸುರ ಗುರುವಿನಾಜ್ಞೆಯ ಪಡೆಯುತಾಬಳಿಕ ||
ಸಾರಮಹ ಗಾರ್ಹಸ್ಥ್ಯಧರ್ಮವ |
ಮೀರದಂದದಿ ಚರಿಸಿ ವನವನು |
ಸೇರಿ ತಪವನುಗೈದು ಯತಿಯಹುದೊಂದು ಮತವಹುದು || ೩೩

ಎರಡರೊಳಗುತ್ತಮವ ಪೇಳುವೆ |
ಪರಜನನಿ ಲಾಲಿಪುದು ಧರೆಯೊಳು |
ಪರಿಣಯವುಮೊದಲಾದ ತೊಡಕಿನಕರ್ಮಗಳ ತೊರೆದು ||
ಪರಮಹಂಸಾಶ್ರಮವ ಕೈಕೊಂ |
ಡುರುತರದಮೋಕ್ಷವನು ಪಾರಾ |
ಶರಿಯ ಸುತನಂದದಲಿ ಪಡೆವುದು ಯೋಗ್ಯವೆನಿಸುವುದು || ೩೪

ಕ್ಲೇಶದಿಂದೊಡಗೂಡಿ ಸಂತತ |
ಲೇಶಮಾತ್ರವು ಸುಖವನೀಯದ |
ದೋಷಯುತಸಂಸಾರಘೋರಾರ್ಣವವ ನಾಂಪುಗದೆ ||
ಲೇಸೆನಿಪ ಮೋಕ್ಷವನುಪಡೆಯಲು |
ಭಾಸುರದ ಯತಿಯಹೆನು ತಾನೆಂ |
ದಾಶಿವನು ನುಡಿಯುತ್ತಿರ್ದೆ ಕೇಳಿದಳದನು ನಿಜಜನನೀ || ೩೫

ಕೇಳುತಿರ್ದಳು ಕಿವಿಗೆಸಬಳವು |
ಕೀಲಿಸಿದತೆರನಾಯ್ತು ಶೋಕ |
ಜ್ವಾಲೆಪೆರ್ಚುತಲಕ್ಷಿ ಜಲಪ್ಲಾವರಿಸಿತಂಗನೆಗೆ ||
ಹೇಳಲರಿದೆನಿಪತುಳದುಃಖವ |
ತಾಳಲಾರದೆ ಸುಯ್ದುಬಳಿಕಾ |
ಬಾಲಶಶಿಧರನೊಡನೆ ನುಡಿದಳು ಗದ್ಗದಸ್ವರದಿ || ೩೬

ಮಗನೆಕೇಳುವುದೆನ್ನ ಮಾತನು |
ಬಿಗಡತನವಿದು ಬೇಡ ನೀನಾ |
ನಿಗಮಕರ್ಮವನೆಸಗೆ ಗೃಹಪತಿಯಾಗಿ ಯಜ್ಞದಲಿ ||
ಗಗನದಮರರ ತೃಪ್ತಿಗೊಳಿಸುತ |
ಮಗನಪಡೆದಾಬಳಿಕ ಮೋಕ್ಷವ |
ನೊಗುಮಿಗೆಯಸನ್ಯಾಸಮಾರ್ಗದಿ ಪಡೆಯುವುದು ಸಹಜ || ೩೭

ಇಂತು ನೀನಾಚರಿಸದಿರ್ದೊಡ |
ದೆಂತುನಿನ್ನನು ತೊರೆದು ಜೀವಿಪೆ |
ಕಂತುಹರನನು ಭಜಿಸಿ ಪಡೆದಿರುವೇಕಪುತ್ರನನು ||
ಅಂತವಾಗಲು ತನಗೆಕರ್ಮವ |
ನಿಂತುಮಾಡುವರಾರು ನೀನಿದ |
ಚಿಂತಿಸದೆ ಯತಿಯಹುದು ಮತವಲ್ಲೆಂದಳಾಸುದತೀ || ೩೮

ತನಯಕೇಳ್ಕೆ ಪತಿಯುನಗಲಿದ |
ವನಿತೆಯನು ವೃದ್ಧೆಯನು ನಿನ್ನಯ |
ಜನನಿಯನು ಸಕಲಾಗಮವ ನೆರೆ ತಿಳಿದವನು ನೀನು |
ಮನೆಯೊಳೊಬ್ಬಳ ಬಿಸುಟು ಪೋಪಡೆ |
ಮನವು ಕರಗದೆ ನಿನಗೆ ಕರುಣವ |
ನಿನಿತ ತೊರೆವರೆ ಕಂದ ನೀನೇನುತಪ್ಪಿದಳು ಮಗನ || ೪೯

ಈಪರಿಯ ಸುತಮೋಹವೆಂಬಾ |
ಕೂಪದಲಿ ನೆರೆಮುಳುಗಿ ಶೋಕಿಸು |
ವಾಪಲಕ್ಕಿಯ ವಿವಿಧಹಿತೋಕ್ತಿಯಲಿ ಸಂತೈಸಿ ||
ತಾಪವನುಪರಿಹರಿಸಿ ಬಳಿಕಾ |
ಪಾಪದೂರನು ತನ್ನಮನದೊಳ |
ಗೀಪರಿಯ ಚಿಂತಿಸಿದ ನೊದಗಿರಲಷ್ಟಮಾಬ್ದವದು || ೫೦

ಮನವೆರಗದೆನಗೀ ಪ್ರವೃತ್ತಿಯು |
ಅನಘಮಾರ್ಗನಿವೃತ್ತಿಯೆಂಬೊಡೆ |
ಜನನಿಯೊಪ್ಪಳು ಮಾತೆಯಾಜ್ಞೆಯಪಡೆದು ಯತಿಯಹುದು ||
ಅನುಮತವು ತಾನಹುದು ನಾನಿದ |
ಕನುವಕಾಣೆನು ಮಾಳ್ಪುದೇನೆಂ |
ದೆನುತ ಚಿಂತಿಸುತಿರ್ದನಾರಜನೀಶಶೇಖರನು || ೫೧

ಒಂದುದಿನವಾರ್ಯಾಂಬೆ ಗೃಹದೊಳ್ |
ಗಿಂದುಧರನನು ಪೂಜಿಸುತ್ತಿರೆ |
ಮಿಂದುಬಹೆತಾನೆನುತ ತಟಿನೀತಟದೆ ಶಂಕರನು ||
ನಿಂದು ಜಲದೊಳಗಿಳಿಯಲಾಗಲು |
ಸಂಧಿಸಿದುದೊಂದುಗ್ರನಕ್ರವು |
ಬಂಧಿಸಿತು ಚರಣವನು ಪಿಡಿದಾಲಯವಿವರ್ಜಿತನ || ೫೨




ಶ್ರೀಶಂಕರರು ಸನ್ಯಾಸವಂ ಸ್ವೀಕರಿಸಲು ತಾಯಿಯಿಂದ ಅನುಜ್ಞೆಯಂ ಪಡೆದುದು.

ಮಕರಿ ತನ್ನಯ ಕಾಲಪಿಡಿದರೆ |
ಯುಕುತಿಯಿದುಲೇಸೆನುತ ಶಂಕರ |
ನಕಟ ಕೆಟ್ಟೆನು ತಾಯೆ ಜಲಚರನುಂಗುತಿದೆ ತನ್ನ ||
ನಿಕಟಕೈತಹುದೆನುತ ಮೊರೆಯಿಡ |
ಲಕಟಗತಿಯೇನೆನುತ ಮನದೊಳು |
ಚಕಿತಳಾಗುತ ವೃದ್ಧಳೈದಿದಳಾಗನದಿಯೆಡೆಗೆ || ೪೨

ಬಂದುಕಂಡಳು ಮಗನು ಬಹುನಿ |
ರ್ಬಂಧದಲಿ ಸಿಲುಕಿಹುದನಾಗಲೆ |
ಬಂದರಾಬಾಂಧವರು ಕಂಡರು ಬಾಲಶಂಕರನ |
ಇಂದಿದೇನೈತಂದೆ ನಿನಗೀ |
ಬಂಧನವು ದೊರೆಕೊಂಡುದಕಟಕ |
ಟೆಂದು ಮರುಗಿದುದಖಿಳಬಂಧುವ್ರಾತಮರುಕೊಳಿಸಿ || ೪೪

ಪತಿಯಮರಣದ ಬಹುಳದುಃಖವ |
ಸುತಮುಖಾಲೋಕನದಿ ಮರೆದಿರೆ |
ಸುತನಮರಣವ ಕಾಣ್ಬದುರ್ಗತಿಯೊದಗಿತೆನಗಿಂದು ||
ಗತಿವಿಹೀನೆಯನಕಟ ಗಿರಿಜಾ |
ಪತಿಯೆ ಮರೆದೈ ನಿನ್ನ ಮೋಹದ |
ಸುತನರಕ್ಷಿಸು ತೊಡಕಪರಿಹರಿಸೆಂದಳಾರ್ಯಾಂಬೆ || ೪೫

ದೃಗುವಿಹೀನೆಯ ಕೈಯಕೋಲನು |
ತೆಗೆದುಬಿಸುಟಂದದಲಿ ಶಿವಶಿವ |
ಮಗನನೀಕೊಂಡೆನ್ನನುಳುಹಿದೊಡೇನುಫಲ ನಿನಗೆ ||
ಅಗಜೆಯರಸನೆನೀನು ದಯೆಯಿಂ |
ಮಗನಸಂಗಡ ಲೆನ್ನನೊಯ್ವುದು |
ಮಗನನುಳಿದಿರಲಾರೆ ನಾನೆಂದೊರಲಿದಳುಜನನೀ || ೪೬

ಅಳಲುತಿರಲಾಜನನಿ ಶಂಕರ |
ಜಲದೊಳೇಳುತ ಮತ್ತೆ ಮುಳುಗುತ |
ಬಲುಹಿನಿಂದಾಶಿಂಶುಮಾರನ ಕೊಡಹಿಚಾಡಿಸುತ |
ಎಲೆಜನನಿ ನೀನೀಗಲಾದರು |
ಲಲಿತಯತ್ಯಾಶ್ರಮಕೆ ನೇಮವ |
ನೊಲಿದುಕೊಟ್ಟೊಡೆ ಜನ್ಮಭೇದವದಾಗಿಜೀವಿಪೆನು ||

ಎನಲು ಕೇಳುತಲಾಗಲಾರ್ಯಾ |
ವನಿತೆ ಸುತ ಯತಿಯಾದೊಡಾಗಲಿ |
ಹನನವಿದುತಪ್ಪಿದೊಡೆ ಮುಖದರ್ಶನವು ದೊರೆಯುವುದು ||
ತನುಜನಳಿದೊಡೆ ಮುಖವ ನೋಳ್ಪುದು |
ತನಗೆದುರ್ಲಭವೆನುತ ಧೃಡವನು |
ಮನಕೆಂದಳು ಮಗನೆಕುರಿತಿಂತೆಂದಳಾವನಿತೆ ||

ಮಗನೆ ನೀಸನ್ಯಾಸಿಯಾಗುತ |
ಜಗತಿಯೊಳು ಬದುಕಿರ್ದೆಯಾದೊಡೆ |
ಮೊಗವನಾದರುನೋಳ್ಪೆ ನೀಂ ಯತಿಯಾಗಬಹುದೆನುತ ||
ಮಿಗೆಜನನಿ ಪೇಳಿದುದನಾಲಿಸಿ |
ನಗುತ ಹರತಾಂ ಪ್ರೇಷವೆಂಬುವ |
ನಿಗಮಂತ್ರವ ಜಪಿಸುತೆದ್ದನು ಕೈಗಳನುನೆಗಹಿ ||

ಸರ್ವಭೂತಕ್ಕಭಯವೆಂದಾ |
ಶರ್ವನುಚ್ಚರಿಸುತ್ತ ಪೇಳಲು |
ಸರ್ವದುಃಖಾಪಹವು ಯತ್ಯಾಶ್ರಮವುದಿಟವೆಂದು |
ಉರ್ವಿಗೆಚ್ಚರಿಪಂತೆ ನಕ್ರದ |
ಗರ್ವವನ್ನು ಕೆಡೆನೂಕಿ ಬಳಿಕಾ |
ಸರ್ವಲೋಕಾಧೀಶನೈದಿದ ಜನನಿಯಿದ್ದೆಡೆಗೆ ||

ಬಂದು ಜನನಿಯ ಬಳಿಗೆ ಶಂಕರ |
ವಂದಿಸುತಲೆಲೆತಾಯೆ ನೀನೀ |
ಬಂಧುರದ ಯತಿಧರ್ಮಕೂಣಿಯ ಬಾರದಂಪದಲಿ ||
ಎಂದುದನು ಮಾಡುವೆನು ಪೇಳಿನ |
ಲಂದು ಬಹುದುಃಖದಲಿ ನುಡಿದಳು |
ನಂದನನೆ ತನಗನ್ನವಸ್ತ್ರವನೀವರಾರೆನುತ || ೫೧

ಎನಲು ಮನದಲಿ ಮರುಗಿ ಶಂಕರ |
ಜನನಿಗೆಂದನು ಕೇಳು ತವಪತಿ |
ಯನುವಿನಿಂದಾರ್ಜಿಸುತಲಿಟ್ಟಿಹ ಸಕಲಸಂಪದವ ||
ಅನುಭವಿಪ ದಾಯಾದ್ಯನಿವಹವು
ನಿನಗೆ ಕುಡುತಿಹುದನ್ನವಸ್ತ್ರವ |
ನೆನಲು ಸಮ್ಮತಿಸುತ್ತ ನುಡಿದಳು ಮತ್ತೆ ದೈನ್ಯದಲಿ || ೫೨

ತನುಪರಿಚ್ಯುತಿಯಾಗೆ ತನಗಿ |
ನ್ನನಲಸಂಸ್ಕಾರವನು ಮಾಡುವ |
ಡನುವ ಪೇಳೆನಲದಕುಮಾಜ್ಞಾತಿಗಳೆ ಹೊಣೆಯೆನಲು ||
ತನುವಿದನು ಸಂಸ್ಕರಿಸಲನ್ಯರ |
ನೆನೆಯಲಾಗದು ಮಗನೆ ನೀನಾ |
ದಿನಕೆ ಬಿಡದೈತಂದು ಸಂಸ್ಕರಿಸೆಂದಳಾರ್ಯಾಂಬೆ || ೫೩

ಇಂತು ಸಂಸ್ಕಾರಾರ್ಥಮಾಗಿಯೆ |
ಚಿಂತಿಸುವ ಜನನಿಯನು ಕಂಡಾ |
ಕಂತುಮಥನನು ಕರುಣದಿಂದಲೆ ನುಡಿದನಿಂತೆಂದು ||
ಅಂತಕಾಲದೊಳೆನ್ನ ಮನದೊಳು |
ಚಿಂತಿಸಿದೊಡಾಂಬಂದು ನಿನ್ನನು !
ಸಂತವಿಡುವೆನು ಮೃತಿಯನೈದಲು ಕುಡುವೆನಗ್ನಿಯನು || ೫೪

ತನಯನಿವ ಸನ್ಯಾಸಿಯಾಗುತ |
ಲಿನಯನಿಲ್ಲದನಾಥೆಯೆನ್ನನು |
ಮನೆಯೊಳೊಬ್ಬಳಬಿಟ್ಟು ಪೋದನೆನುತ್ತ ಮರುಗದಿರು ||
ಸನಿಹದೊಳಗಿರದಿರ್ದೊಡೇಂ ಸಲೆ |
ನಿನಗೆ ಬೇಹುದನೊಲಿದು ವಿರಚಿಪೆ |
ಜನನಿ ಬಿಡುಚಿಂತೆಯನು ನಾನೆಲ್ಲಿರ್ದೊಡಂ ನಿನಗೆ

ಎಂದು ಜನನಿಯ ಸಂತವಿಟ್ಟಾ |
ಸ್ಕಂದಪಿತನಾಜ್ಞಾತಿವರ್ಗವ |
ಬಂಧುರಪ್ರೇಮದಲಿ ಕರೆದತಿವಿನಯವಚನದಲಿ ||
ನಿಂದೆನಾಂ ಸನ್ಯಾಸಧರ್ಮದೊ |
ಳಿಂದುಮೊದಲೀವೃದ್ಧಜನನಿಯ |
ಕುಂದುಬಾರದ ತೆರದಿ ರಕ್ಷಿಪುದೆಂದು ಬೇಡಿದನು ||

ಪುರಹರನು ಜನನಿಯನು ರಕ್ಷಿಪ |
ಪರಿಯನಾಗೋತ್ರಜರಿಗೊರೆದನು |
ಕರವಮುಗಿಯುತ ನಯನದಿಂದಿಳಿವಶ್ರುಧಾರೆಯನು ||
ಚೆರಳಿನಿಂಮಿಡಿಯುತ್ತ ನಿಂದಿಹ |
ವರಜನನಿಯನು ಬೀಳುಕೊಂಡಾ |
ಸುರನುತಶ್ರೀಕಂಠದೇವನು ತೆರಳಲನುವಾದ ||

ಸಂಧಿ ೧೧ ಕ್ಕೆ ಪದ್ಯ ೪೦೮ ಕ್ಕೆ ಮಂಗಳ.



# ಹನ್ನೆರಡನೆಯ ಸಂಧಿ.



ಸೂಚನೆ || ಕರುಣದಿಂ ಬಾಂಧವರ ಬೀಳ್ಕೊಂ |
ಡುರು ದಯಾಪರ ಹರನು ಬಂದಾ |
ವರಮುನಿಪಗೋವಿಂದಪಾದಗೆ ಶಿಷ್ಯನೆನಿಸಿದನು ||

ಕೇಳಿರೈ ಮುನಿಗಳಿರ ಪರಮಕೃ |
ಪಾಳುಶಂಕರ ತನ್ನಜನನಿಯ |
ಬೀಳುಕೊಳುತಿರಲಾಗಲಾ ವೃತ್ತಾಂತವನು ತಿಳಿದು ||
ಕಾಲಟಿಯಭೂಸುರರು ಪೂರ್ಣಾ |
ಕೂಲಕೈತರುತಾಗ ಯತಿಪನ |
ಕಾಲಿಗೆರಗುತ ವಿನಯದಿಂ ಬಿನ್ನೈಸಿದರು ಹದನ || ೧

ಪರಮಹಂಸಶ್ರೇಷ್ಠ ಲಾಲಿಸು |
ಪರಮಪಾವನವೆನಿಪ ನಿನ್ನಯ |
ಚರಣಪೂಜೆಯನೆಸಗಿ ನಾವತಿಧನ್ಯರಪ್ಪಂತೆ ||
ಕರುಣಿಪುದು ನೀನೆಮ್ಮಭಿಕ್ಷೆಯ |
ನೆರೆಪರಿಗ್ರಹಿಸುತ್ತಲೀದಿನ |
ಮರುದಿವಸ ನೀನೊಲಿದು ಬಿಜಯಂಗೈವುದಿಚ್ಛೆಯಲಿ || ೨

ಎಂದು ಬೇಡುತ್ತಿರಲು ಪುರಜನ |
ವಂದದಕೆ ಸಮ್ಮತಿಸಿ ವೈಭವ |
ದಿಂದರಾರಾಜಿಸುವ ಪೂರ್ಣಾನದಿಯತೀರದಲಿ ||
ಅಂದವೆನೆ ಶೋಭಿಸುವ ವರಹರಿ |
ಮಂದಿರವದೊಂದಿರಲು ಸಮ್ಮುದ |
ದಿಂದಲೊಳಪೊಕ್ಕಲ್ಲಿಸಿಂದನು ಶಿವನುಸಂಭ್ರಮದಿ || ೩

ಸುರನದೀಧರನೊಲಿದು ಪೂರ್ಣಾ |
ವರನದಿಯು ಜಲದೊಳಗೆಮಿಂದನು |
ಪುರಹರನು ಧರಿಸಿದನು ಫಾಲದೊಳಾತ್ರಿಪುಂಡ್ರವನು ||
ದ್ವಿರದಚರ್ಮಾಂಬರನು ಹರುಷದಿ |
ಧರಿಸಿದನು ಕಾಷಾಯವಸ್ತ್ರವ |
ನರರೆ ಯತಿಯಾಗೆಸೆದ ವಲ್ಲಭಸರ್ವಮಂಗಳೆಯು || ೪

ಪರಮವಸ್ತುವದೊಂದೆ ಜಗದಲಿ |
ಚರವಚರವೆಂದೆಂಬ ನಾನಾ |
ಪರಿಯರೂಪುಗಳಿಂದ ತೋರ್ಪುದುಪಾಧಿಭೇದದಲಿ |
ಪರಕಿಸುವುಡೆರಡೆಂಬುದದು ಪುಸಿ |
ಪರಮನೊಬ್ಬನೆ ಸತ್ಯವೆಂಬುದ |
ಧರೆಗೆ ಬೋಧಿಸುವಂತೆ ದಂಡವಧರಿಸಿದನು ಶೂಲಿ || ೫

ನೆರೆದಬಹುವಿಧ ದುರ್ಮತಾಹ್ವಯ |
ದುರಗದಂಷ್ಟ್ರದ ವಿಷದಿನೊಂದಿಹ |
ಧರೆಯಮನುಜರಿಗೆರೆಯುತವರನು ಪ್ರೋಕ್ಷಿಯಲೋಸುಗವೆ ||
ಸುರುಚಿರಾದ್ವೈತಾಖ್ಯಸುಧೆಯಿಂ |
ಭರಿತಮಾಗಿಹ ವರಕಮಂಡುಲು |
ನೆರೆವಿರಾಜಿಸಿತಾಗ ಕರದೊಳು ಜಾಹ್ನವೀಧರನ || ೬

ಇಂತು ರೂಪಾಂತರವನಾಜಿತ !
ಕಂತು ತಳೆದಿರೆ ಬಳಿಕವಿಪ್ರರು |
ಸಂತಸದೊಳೈತಂದು ಶಂಕರಯತಿಯಚರಣವನು ||
ಸ್ವಾಂತಶುದ್ಧಿಯೊಳೊಲಿದುಪೂಜಿಸಿ |
ಶಾಂತರೂಪಂಗಿತ್ತು ಭಿಕ್ಷೆಯ |
ಚಿಂತಿತಾರ್ಥವಪಡೆದು ನಮಿಸುತಲಿರ್ದರಡಿಗಡಿಗೆ || ೭



ಶ್ರೀಶಂಕರರು ಶ್ರೀ ಕೃಷ್ಣನಂ ಪೂಜಿಸಿದುದು.

ಬಳಿಕಲಾದ್ವಿಜವರರು ತಮ್ಮಯ |
ನಿಳಯಗಳ ಸಾರಿದರು ದೇಶಿಕ |
ಕುಲವರೇಣ್ಯನು ಕೃಷ್ಣದೇವಾಲಯದೊಳಿರುತಿರಲು ||
ನಳಿನಸಖನಪರಾಂಬುರಾಶಿಯೊ |
ಳಿಳಿಯೆ ತತ್ಕಾಲೋಚಿತಕ್ರಿಯೆ |
ಗಳನು ರಚಿಸಿದ ಯತಿಗೆ ನುಡಿದನು ಕೃಷ್ಣನೊಲವಿನಲಿ || ೮

ಮುನಿವರೇಣ್ಯನೆ ಕೇಳು ನಿನ್ನಯ |
ಜನನಿಗತಿಶಯವಪ್ಪ ಸುಖವನು |
ನೆನೆದು ನದಿಯನು ನಿಜನಿಕೇತನಸನಿಹಕ್ಕೈದಿಸಿದೆ ||
ಘನತರಂಗಗಳೆನ್ನ ಮಂದಿರ |
ವನು ವಿಭಾಡಿಸಿ ಕೊರೆಯುತಿರುವವು
ಸನುಮತದೊಳಿಂದೆನ್ನ ಬೇರೊಂದೆಡೆಯೊಳಿರಿಸುವುದು || ೯

ಎಂದುಮುರಹರ ಪೇಳಿದುದನಲ |
ವಿಂದಲಂಗೀಕರಿಸಿ ಪುರಹರ |
ನಂದಿನಿರುಳನು ಕಳೆದನಾಶ್ರೀಕೃಷ್ಣಮಂದಿರದೆ ||
ಇಂದುಮೌಳಿಯ ಚರಣದರ್ಶನ |
ಕೆಂದು ಸಭದಲಿ ನಿಂದನೆನಲರ |
ವಿಂದಸಖ ಸಂಭ್ರಮದಲಡರಿದನುದಯಪರ್ವತವ || ೧೦

ಬಳಿಕ ಕಾಲೋಚಿತವ ವಿರಚಿಸಿ |
ನಳಿನನಾಭನ ದಿವ್ಯಮೂರ್ತಿಯ |
ನೊಲವಿನಿಂ ಕರತಳದೊಳಾನುತ ಜಲತರಂಗಗಳು ||
ಅಲುಕಲೀಸದತೆರದೆ ಬೇರೊಂ |
ದೊಳಿತು ಭೂಪ್ರಾಂತ್ಯದಲಿ ನೆರೆನೆಲೆ |
ಗೊಳಿಸಿ ವರಸಿಗವೋಕ್ತಮಾರ್ಗದಿ ಯತಿಯುಪೂಜಿಸಿದ || ೧೧

ವಿಧಿವಿಹಿತಮಾರ್ಗದಲಿ ಶಂಕರ |
ಮಧುರಿಪುವಿನಾದಿವ್ಯಮೂರ್ತಿಯ |
ಪದುಳದಿಂ ಸ್ಥಾಪಿಸಿದ ಬಳಿಕಲ್ಲಿಂದ ಪೊರಮಡುತ ||
ವಿಧುವಿರಾಜಿತಶಿರನು ತನಗತಿ |
ಪದುಳವಹ ಸನ್ಯಾಸಧರ್ಮವ |
ಮುದದಿಬೋಧಿಪ ಗುರುವನರಸುತಲಾಗೆತೆರಳಿದನು ||

ಗುರುವು ತನಗಾರೆಂದು ಮನದಲಿ |
ನೆರೆತಿಳಿದು ಸರ್ವಜ್ಞನಲ್ಲಿಂ |
ತೆರಳುತಧ್ವದ ಭೂಜ ಜಲ ಪಾಷಾಣ ಗರ್ತಗಳ ||
ಗಿರಿಗುಹೆಯ ನೀಸುವನು ಮನದಲಿ |
ಪರಿಕಿಸದೆ ನಿಜಯೋಗಶಕ್ತಿಯ |
ಭರದಿನೈತಂದನು ಕಳಾನಿಧಿಜಾಪಗೆಯತಟಕೆ ||

ಕಡಲವೊಲ್ತೆರೆಮಸಗಿ ಗಗನವ |
ತುಡುಕುವಂತಿರೆ ವೊರೆದು ಸುಳಿಗಳ |
ಗಡಣದಿಂ ಸಲೆ ವಿತಳಲೋಕದ ಮಾರ್ಗವನುತೋರಿ ||
ಕಡುಭಯಂಕರಮಾದಗಾಧದ |
ಮಡುಗಳಿಂದಲಿ ಕೂಡಿ ನರ್ಮದೆ |
ಮೃಡನಸಂಮುಖದೊಳಗೆ ಮೆರೆದಳು ಗಾಢಗರ್ವದಲಿ ||

ನಳಿನಗಳಸತ್ತಿಗೆಯು ಮೀನಾ |
ಲಲಿತಹಂಸೆಯು ಚಾಮರಂಗಳ |
ನುಲಿವ ಶುಕಪಿಕಪಾಠಕರ ಜಲಚರದ ಪರಿಜನವ ||
ಪುಳಿನರಾಜಿಯು ರತ್ನನಿಚಯುವ |
ನಳವಡಿಸಿಕೊಂಡಾಗ ಯತಿಪನ |
ನೊಲಿದಿದಿರುಗೊಂಬಂತೆ ವಾಹಿನಿ ನೆರೆವಿರಾಜಿಸಿತು ||

ಇಂತೆಸೆವ ನರ್ಮದೆಯ ತೀರದ |
ನಂತವಿಧವೃಕ್ಷಗಳ ಶಂಕರ |
ಸಂತಸದ ಲೀಕ್ಷಿಸುತ ನಡೆತರುತಿರಲು ಬಳಿಕಲ್ಲಿ ||
ಭ್ರಾಂತಿವಿರಹಿತರಾಗಿ ಸಂತತ |
ಶಾಂತಿಯಿಂ ತಪಗೈವ ಮುನಿಸಂ |
ಕ್ರಾಂತನಿರ್ಮಲಮಂಗಳಾಶ್ರಮವೆಸೆದುದಿದಿರಿನಲಿ || ೧೬

ಪಾರಿಭದ್ರ ಮಧೂಕ ಚಂಪಕ |
ವೀರವೃಕ್ಷ ಕ್ರಮುಕ ದಾಡಿಮ |
ಪೂರಣೆಯು ವರಬಿಲ್ವ ಪಾಟಲಿ ಲಕುಚ ಪನಸಗಳು ||
ಭೂರಿಪಿಪ್ಪಲ ವಟವದೆಂಬೀ |
ಭೂರುಹಂಗಳ ತಳೆದು ಸಂತತ |
ಮಾರವೈರಿಯ ಮನಕೆ ಹರ್ಷವನಿತ್ತುದಾಶ್ರಮವು || ೧೭

ವರಗೆರಾಗರಿ ಮೊಲ್ಲೆ ಮಲ್ಲಿಗೆ |
ಕುರವಕವು ವಾಸಂತಿ ಮಾಲತಿ |
ಮರುವಕವು ಪರ್ಣಾಸಿ ಹಯಮಾರುಕವು ಶಿವಮಲ್ಲಿ ||
ಸುರುಚಿರದ ಬಂಧೂಕಜಾತಿಯು |
ಮೆರೆವ ಸೇವಂತಿಗೆಯು ಮೊದಲೆನೆ ||
ಪರಿಪರಿಯ ಸುಮಗಂಧವೆಸೆದಿಹುದಾತಪೋವನದೆ || ೧೮

ಮೊರೆವಪಾರಾವತವು ಖಂಜನ |
ಹರಡೆ ಹಂಗ ಕಳಿಂಗ ಕೃಕಣವು |
ವರವನಪ್ರಿಯ ಚಟಕ ಸಾರಸ ಕೀರ ಕೋಕಗಳು |
ನೆರೆನಲಿವ ನವಿಲುಗಳು ಹಂಸಗ |
ಳುರುತರಪ್ರೇಮದಲಿ ಯತಿಯನು |
ಕರೆವವೊಲು ಮೃದುರವವ ಬೀರುತಲಿರ್ಪುವಾವನದೆ || ೧೯

ಮಲಯಗಿರಿಯಿಂದಿಳಿದುಬಂದೀ |
ಲಲಿತನರ್ಮದೆಯೊಳಗೆ ಮಿಂದಾ |
ನಳಿನಧೂಳಿಯಪೊತ್ತು ಬಹುವಿಧತರುಗಳನು ಹಾಯ್ದು ||
ಉಲಿವಮೃಗಪಕ್ಷಿಗಳ ರವವನು |
ತಲೆಯೊಳಾನುತ ಸುಳಿದು ವನದಲಿ |
ಬಳಬಳಲಿಬರುತಿಹನು ಮರುತನು ಮಂದಗಮನದಲಿ || ೧೦

ಯೋಗಗಳನಾರೈವ ಬಹುವಿಧ |
ಯಾಗಗಳನಾಚರಿಪಸಂತತ |
ಭೋಗಿಭೂಷಣಪಾದಪಂಕೇರುಹವ ಪೂಜಿಸುವ ||
ನಾಗರಿಪುವಾಹನನ ವರನಿಗ |
ಮಾಗಮದಮಂತ್ರದಲಿ ನುತಿಪ ವಿ |
ರಾಗಿಗಳು ಸಂಚರಿಸುತಿಹರಾಶ್ರಮದೊಳೆಲ್ಲೆಡೆಯ || ೨೧

ಈಪರಿಯ ವನದೊಳಗೆ ರಂಜಿಸಿ |
ತಾಪಿನಾಕಿಯ ಕಂಗಳಿಗೆ ನೆರೆ |
ತಾಪಸೋತ್ತಮ ಗೌಡಪಾದನ ಶಿಷ್ಯನೆಂದೆನಿಪ ||
ತಾಪವಿರಹಿತನಾದ ಯತಿಕುಲ |
ದೀಪ ಶುದ್ಧಾದ್ವೈತಮಾರ್ಗದ |
ತಾಪಸನ ಗೋವಿಂದಪಾದಾಚಾರ್ಯನಾಶ್ರಮವು || ೨೨

ಅದನು ಕಾಣುತ ಮನದಿ ಹರ್ಷವ |
ಮದನವೈರಿಯು ತಳೆದು ಬಳಿಕಾ |
ಪದುಳದಿಂ ವಿಶ್ರಾಂತಿಯೈದುತ ವನದಿ ಕುಳಿತಿರಲು |
ಹೆದನನರಿತಾಪಶ್ಚಿಮಾದ್ರಿಯ |
ತುದಿಯೊಳಿರುತಿಹ ತರಣಿಯಾಗಲು |
ಮುದದಿ ನೋಡುತ ಸರಿದುಬಿದ್ದನು ಪಶ್ಚಿಮಾಬ್ಧಿಯಲಿ || ೨೩

ತರಣಿಯಾಗೆಮುನವನು ಕಾಣುತ |
ಸುರುಚಿರದ ಸಂಭ್ರಮುವ ತಾಳ್ದಾ |
ವರುಣದಿಗ್ದೇವತೆಗೆ ರಾಗವು ಪಸರಿಸಿದತೆರದೆ ||
ಮೆರೆಯೆ ಸಂಧ್ಯಾರಾಗವಾಗಲು |
ಹರನ ಶಿರವೊಳಗಿರ್ಪ ನಲ್ಲನ |
ಪರಿಯು ನೋಡಲು ಬಂದುದೆನೆ ತಾರಾಳಿ ರಂಜಿಸಿತು || ೨೪

ಸಿರಿನಿಕೇತನಗಳನು ಬಾಧಿಸಿ |
ಗುರುವನಿತೆಯನು ಕೂಡಿ ಪಡೆದಿಹ |
ಪರಮುಪಾತಕದಿಂದ ಯಕ್ಷ್ಮಾಮಯವ ನಾಂತಿಹೆನು ||
ಹರಚರಣಸರಸೀರುಹಂಗಳ |
ದರುಶನದ ಭೈಷಜ್ಯದಿಂದಿದ |
ಪರಿಹರಿಪೆನೆಂದೆನುತ ಬಂದಂತಿಂದುವುದಯಿಸಿದ || ೨೫

ಗಗನದಲಿ ತಲೆದೋರುತ್ತೈತರೆ |
ಮೃಗಧರನು ಕೊಳದಲ್ಲಿ ಕುಮುದಿನಿ |
ನಗುತಲಿರ್ದಳು ತೆತ್ತು ಮೈಯ್ಯನು ಮಧುಪಸಂಕುಲಕೆ ||
ಜಗದಿ ಕುಮುದಿನಿಯರಿಗೆ ಭಾವಿಸೆ ||
ನಗುವುದೊಬ್ಬನನೋಡಿ ನೇಹದ |
ಬಗೆಯು ಬೇರೊಬ್ಬನಲಿ ತೋರ್ಪುದು ಸಹಜವೆಂಬಂತೆ || ೨೬

ಇಂತೆಸೆವ ರಜನಿಯುಲಿ ರಜನೀ |
ಕಾಂತಶೇಖರ ಮನದಿ ಸಂತಸ |
ವಾಂತು ನೆರೆ ಗೋವಿಂದಪಾದಾಚಾರ್ಯನೊಲವಿನಲಿ ||
ಅಂತರಂಗದಿ ಪರಮುವಸ್ತುವ |
ಚಿಂತಿಸುತ ಕುಳಿತಿರ್ಪ ಕಂದರ |
ದಂತಕಂದ್ಯೆತಂದನಾಪ್ರಾದೇಶಮಾರ್ಗದಲಿ || ೨೭

ಬಂದು ನಿಂದನು ಗುಹೆಯ ಬಾಗಿಲೊ |
ಳಿಂದುಧರ ಗಹ್ವರವ ತಾ ಬಲ |
ವಂದು ಪುನರಪಿ ನಿಂದು ಬಿಲದಾದ್ವಾರದೇಶದಲಿ ||
ಅಂದದಿಂ ಸಾಷ್ಟಾಂಗದಿಂದಭಿ |
ವಂದಿಸುತಲಿಂತೆಂದ ಶ್ಲೋಕದ |
ಬಂಧನಕೆ ಸಿಲ್ಕದಿಹ ನಿರ್ಲಿಪ್ತ ನೀನತಿತುಷ್ಟನಹುದೆನುತ ||

ಗರುಡಕೇತನಗೊಲಿದು ಮೃದುಳ |
ಸ್ತರಣನಾಗಿಯೆ ಮೇಣು ಶಂಕರ |
ಚರಣಕಂದುಗೆಯಾಗಿ ಮೆರೆಯುವನಂತವಿಗ್ರಹನೆ ||
ಶಿರದೊಳೀಬ್ರಹ್ಮಾಂಡಘಟವನು |
ಧರಿಸಿಕೊಂಡಿಹ ಶೇಷರೂಪನೆ |
ಕರುಣಿಪುದು ನೀನೆನುತ ನಮಿಸುತಲಿರ್ದನಾಚಾರ್ಯ ||

ಸಾಸಿರದಮುಖದಿಂದ ರಂಜಿಪ |
ಭಾಸುರದ ನಿನ್ನತುಳಮೂರ್ತಿಯು |
ಸೂಸುವುದು ಬಲುಭಯವ ಶಿಷ್ಯರಿಗೆಂದು ಕರುಣದಲಿ ||
ಭಾಸಮಾನದ ಮುಖವನೊಂದನೆ |
ಲೇಸುಮಿಗೆ ಧರಿಸುತ್ತಲಂತೇ |
ವಾಸಿಗೆಳಿಗುಪದೇಶಗೈದ ಪತಂಜಲಿಯು ನೀನೇ ||

ನೀ ಸಕಲಗುಣಪೂರ್ಣವೇದ |
ವ್ಯಾಸಪುತ್ರನ ಶಿಷ್ಯನೆನಿಪಾ |
ಭೂಸುರೋತ್ತಮ ಗೌಡಪಾದನ ಶಿಷ್ಯನೆಂದೆನಿಪೆ ||
ದೇಶಿಕೋತ್ತಮ ಕೇಳು ನಿನ್ನುಪ |
ದೇಶವನು ನಾಂ ಪಡೆದು ಶೋಕವಿ |
ನಾಶವನು ಪಡೆದಾತ್ಮವಸ್ತುವನರಿಯಲ್ಬೈದಿಹೆನು ||

ಎಂದು ನುತಿಸುತ್ತಿರಲು ಸಲೆ ಗೋ |
ವಿಂದಪಾದಾಚಾರ್ಯನರಿದನು |
ಬಂದಿಹನು ಶಂಕರನು ಲೋಕವ ಪೊರೆಯಲೆಂಬುದನು ||
ಇಂದುಮೌಳಿಗೆ ತಾನು ಗುರುವಹು |
ದಿಂದು ಲೇಸಾಯ್ತೆನುತ ಮನದೊಳು |
ಸಂದ ಸಂಭ್ರಮದಿಂದ ಕೇಳಿದನಾರುನೀನೆನುತ || ೩೨

ನಾನು ಪೃಥ್ವಿಯುದಲ್ಲ ಜಲವು |
ಲ್ಲಾನು ಶೋಚಿಷ್ಕೇಶನಲ್ಲವು |
ನಾನು ಮಾರುತನಲ್ಲ ಮೇಣಾಗಗನ ನಾನಲ್ಲ ||
ನಾನು ತದ್ಗುಣಮಲ್ಲ ಪಿಂದ್ರಿಯ |
ನಾನುಮತ್ತಲ್ಲಾನು ವಿಷಯಮುದಲ್ಲ |
ನಾನು ಕೇವಲಪೂರ್ಣನಾಗಿಹ ಪರಮಶಿವನೆಂದ || ೩೩

ಇಂತು ಪರಮಾದ್ವೈತದರ್ಥವ |
ನಾಂತ ತದ್ವಾಕ್ಯಗಳನಾಲಿಸಿ |
ಸಂತಸದಿ ಗೋವಿಂದಪಾದಾಚಾರ್ಯನಿಂತೆಂದ ||
ಚಿಂತಿತಾರ್ಥವ ಜಗಕೆ ಕರುಣಿಪ |
ಕಂತುಹರ ನೀನೆಂಬುದನು ನಾ |
ಸ್ವಾಂತದಲಿ ತಿಳಿದಿರುವೆ ಪರಮಸಮಾಧಿದೃಷ್ಟಿಯಲಿ || ೩೪

ಎನುತ ಗುಹೆಯಾದ್ವಾರದೇಶದೆ |
ವಿನಯದಿಂ ಗೋಚರಿಪ ಗುರುವನು |
ಮನುಮಥಾರಿಯು ಕಂಡು ಜಗಕಾಚಾರಧರ್ಮವನು ||
ಅನುನಯದಲುಪದೇಶಿಪಂದದಿ |
ವಿನಮಿಸಲು ಬಳಿಕಿದನುಕಾಣುತ |
ಲನಿಮಿಷರು ಜಯರವದಿ ಕರೆದರು ಕುಸುಮವೃಷ್ಟಿಗಳ || ೩೫

ಈತ ಸಾಕ್ಷಾತ್ಬ್ರಹ್ಮವೆಂಬುದ |
ನಾತ ತಿಳಿದಾ ಸಂಪ್ರದಾಯವ |
ತೀತವಾಗದ ತೆರದಿ ಪಾಲಿಪ ಬುದ್ಧಿಯನು ತಳೆದು ||
ಭೂತನಾಥನು ವಿನಯದಿಂ ಪರ |
ಮಾತಿಶಯವೆನೆ ತನಗೆ ರಚಿಪಾ |
ಪ್ರೀತಿಯುತದುಪಚಾರದಿಂ ಸಂಭ್ರಮವ ತಾಳುವನು || ೩೬

ಆ ದಯಾಂಬುಧಿಹರನ ಸೇವೆಯ |
ಮೋದದಿಂ ಕೈಕೊಂಡು ಗುರುವರ |
ವೇದನಾಲ್ಕರ ಪರಮವಚನದ ಸಾರಸಂಗತಿಯ ||
ಬೋಧಿಸಿದನಾತತ್ವಮಸಿ ಮೊದ |
ಲಾದ ಸಿದ್ಧಾಂತವನು ವಿಬುಧಾ |
ರಾಧಿತಗೆ ಗೋವಿಂದಪಾದನುದಾರಕರುಣದಲಿ || ೩೭

ವರಪರಾಶರತನಯನುಸಿರಿಹ |
ಪರಮಸೂತ್ರದ ಗೂಢದರ್ಥದ |
ಪರಿಯನದ್ವೈತಾಖ್ಯವರಸಿದ್ಧಾಂತತತ್ವವನು |
ಸುರುಚಿರದ ಸನ್ಯಾಸರೂಪಿನ |
ಹರನು ತನ್ನಯ ಬುದ್ಧಿಶಕ್ತಿಯ |
ಲರಿದು ಗುರುಗೋವಿಂದಪಾದನ ಪೂಜಿಸುತಲಿರ್ದ || ೩೮

ವರಪರಾಶರಸುತನ ಶಿಷ್ಯನು |
ಪರಮಶುಕಯೋಗೀಂದ್ರನಾತಂ |
ಗುರುವಶಿಷ್ಯನು ಲೋಕಪೂಜ್ಯನು ಗೌಡಪಾದಾಖ್ಯ ||
ವರಮುನಿಪನೀತಂಗೆ ಶಿಷ್ಯನು |
ಧರೆಯೊಳಗೆ ಗೋವಿಂದಪಾದನು |
ಗುರುಪರಂಪರೆಯಿದುವೆ ತಾ ಶ್ರೀಕಂಠಯುತಿವರಗೆ ೩೯

ಸಂಧಿ ೧೨ಕ್ಕೆ ಪದ್ಯ ೪೪೭ಕ್ಕೆ ಮಂಗಳ.






ಶ್ರೀಶಂಕರರು ನರ್ಮದಾನದಿಯ ಉಗ್ರಪ್ರವಾಹವನ್ನು ಕಮಂಡುಲದಲ್ಲಿ ತಡೆದುದು.

# ಹದಿಮೂರನೆಯ ಸಂಧಿ.

ಸೂಚನೆ ॥ ಕರಕನಲಿ ನರ್ಮದೆಯ ಗರ್ವವ ।
ಪರಿಹರಿಸಿ ವರಗುರುವಿನಾಜ್ಞೆಯ ।
ನೆರೆ ಪಡೆದು ಯತಿವರ್ಯನೈದಿದ ಕಾಶಿಕಾಪುರಕೆ ॥

ಲಾಲಿಸೈ ಮುನಿವರ್ಯ ಭುವನವ ।
ಲೀಲೆಯಿಂ ಶಿರಮಧ್ಯದೊಳು ನೆರೆ ।
ತಾಳಿಕೊಂಡಿಹ ಶೇಷರೂಪಿನಶೇಷಮಹಿಮನಲಿ ॥
ಲೀಲೆಯಿಂ ಯತಿರೂಪನಾಂತಿಹ ।
ಶೂಲಪಾಣಿಯು ಸಕಲತತ್ವವ ।
ನಾಲಿಸುತಲಿರುತಿರ್ದನಾ ನರ್ಮದೆಯ ತೀರದಲಿ ॥ ೧

ಪೂರ್ವಪುಣ್ಯಸಹಸ್ರಫಲದಿಂ ।
ದುರ್ವಿಯಲಿ ಸನ್ಯಾಸಧರ್ಮವ ।
ನಿರ್ವಹಿಪ ಯತಿಮಧ್ಯದೊಳಗುತ್ತಮನು ತಾನೆನಿಸಿ ॥
ಶರ್ವನುರೆ ರಾಜಿಸಿದನಾಗ್ರಹ ।
ಸಾರ್ವಭೌಮಾದಿಗಳ ಮಂಡಲ ।
ಕುರ್ವಿಯೊಳಗುನ್ನತದಿ ಪೊಳೆವಾ ಧ್ರುವನ ತೆರದಂತೆ ೨

ವಾಸರಾದ್ಯಂತದಲಿ ಶೋಭಿಪ ।
ವಾಸವನ ವಾಹನವ ನಾಂತಿಹ ।
ಭಾಸುರದ ಹಿಮಶೈಲಕೂಟವ ಪೋಲುವಂದದಲಿ ॥
ವಾಸವಾರಾಧಿತನು ಪಾಟಲ ।
ವಾಸವನು ನೆರೆ ತಳೆದು ವರಸ ।
ನ್ಯಾಸಧರ್ಮದಿ ಚರಿಸುತಿರ್ದನುದಾರತೇಜದಲಿ ॥ ೩

ಜಗವ ಬಾಧಿಸುತಿರ್ದ ಗಜನನು ।
ಸಿಗಿದು ರಕ್ತದಿತೊಯ್ದ ಚರ್ಮವ ।
ನಗಜೆಯರಸನು ಬಿಗಿದು ಕೊಂಡಿಹ ತೆರದೆ ಯತಿವರನು ॥
ಬಗೆಯಲಜ್ಞಾನಾಖ್ಯಗಜವನು ।
ಸಿಗಿದು ತಾಂ ಕಾಷಾಯವಸ್ತ್ರವ ।
ಬಿಗಿದು ಕೊಂಡಿರುತಿಹನು ಯತಿಧರ್ಮಾನುಸಾರದಲಿ ॥

ವರನಿಗಮಸಂಚಾರಿ ಸತ್ಯನು ।
ಪರಮಹಂಸೋಚಿತದಗತಿಯಲಿ ।
ಚರಿಪ ಪರಮಬ್ರಹ್ಮವೆಂದಾನಿಗಮ ಪೊಗಳುವುದು ॥
ವರಯತಿಯ ಶಂಕರನನಲ್ಲದೆ ।
ಸರಸತಿಯಪತಿಯೆನಿಸಿ ವನದಲಿ ।
ಚರಿಪ ಹಂಸೆಯನೇರ್ದ ಬೊಮ್ಮನನಲ್ಲ ಪರಿಕಿಸಲು ॥

ನೆರೆ ದಶಾವಸ್ಥೆಗಳನಾಸುತ ।
ಧರೆಗೆ ಮಾಯೆಯ ಬಿಗಿದು ಕುಣಿಸುವ ।
ಹರಿಯ ತದ್ವಿಷ್ಣೋಃಪರಮಂಪದವೆಂದು ವಾಚಿಸುವ ॥
ವರನಿಗಮ ವೆರಡೈದವಸ್ಥೆಯ ।
ತೊರೆದು ಮಾಯೆಯ ಹರಿದು ಜಗವನು ।
ಪೊರೆವ ಯತಿಯನು ಪೊಗಳುವುದಿದಚ್ಚರಿಯೆ ಜಗದೊಳಗೆ ॥

ಭೂತಸಂಗವ ತಳೆದು ಮತ್ತೆ ವಿ ।
ಭೂತಿಸಂಸರ್ಗದಲಿ ರಂಜಿಸಿ ।
ಸಾತಿಶಯದಿ ಗವಾವಿಹರಣನುಮಾಗಿ ಭೋಗಿಗಳ ॥
ಪ್ರೀತಿಯಿಂ ಕೂಡುತ್ತಲಿಹ ಗುಹ ।
ತಾತನನು ನುತಿಸುವುದೆ ವೇದವು ।
ಭೂತಳದೊಳಿವುಗಳನು ಬಿಟ್ಟಿಹ ಯತಿಯ ನುತಿಸದೆಯೆ ॥

ಸುರಗಿರಿಯು ಚಾಪವನು ಪೇಣಾ |
ಹರಿಯುಶರವನು ಧರೆಯುರಥವನು |
ಹರಿಶಶಿಗಳಿಬ್ಬರನು ಚಕ್ರಗಳಾಗಿ ವಿರಚಿಸುತ ||
ಹರನು ಜಯಿಸಿದ ಮೂರುಪುರವನು |
ವರಯುತ್ರಿಪನಸಹಾಯದಿಂದಲಿ |
ಧರೆಯೊಳಗೆಜಯಿಸಿಹನು ಪುರ್ಯಷ್ಟಕವನತಿಶಯದೆ || ೮

ಘೋರತರಸಂಸಾರವೆನಿಸುವ |
ಪಾರದುಃಖದಹೊನಲನೊದವಿಪ |
ಭೂರಿವರ್ಷಾಕಾಲವನು ತಾ ದೂರದಲಿ ತೊರೆದು ||
ಕ್ರೂರಹ ನಾಸ್ತಿಕರ ಕೀರ್ತ್ಯಂ |
ಘೋರುಹದ ಷಂಡವನು ಭಕ್ಷಿಸಿ |
ಸಾರಿ ಸನ್ಯಾಸದಿ ಚರಿಪುದು ಪರಮಹಂಸವಿದು || ೯

ಕ್ಷೀರವದು ತಾ ಬ್ರಹ್ಮ ಜಗವಿದು |
ನೀರು ತಾವಿವು ಬೆರೆಸಿಕೊಂಡಿರೆ |
ಚಾರು ಶೇಮುಷಿಯೆಂಬ ಚಂಚುವಿನಿಂದ ಮತ್ತವನು ||
ಬೇರೆಮಾಡುತ ಜಕಗೆ ತಾನಾ |
ಕ್ಷೀರವನು ತೋರುತ್ತ ಶುಭ್ರಾ |
ಕಾರದಲಿ ರಂಜಿಪುದು ವರಯತಿಯೆಂಬ ಹಂಸೆಯಿದು || ೧೦

ಹೊರಗೆ ತುಂಬಿಹ ತಮದರಾಶಿಯ |
ತರಿದು ಜನಗಳ ಬಾಹ್ಯ ದೃಷ್ಟಿಗೆ |
ನೆರೆ ಜಗವ ತಾ ತೋರಿ ರವಿ ಹಂಸಾಖ್ಯೆಯನು ಪಡೆದ ||
ಒರಸುತಂತರ್ವ್ಯಾಪ್ತತಮವನು |
ವರನಯನಕಾಬ್ರಹ್ಮವಸ್ತುವ |
ನಿರದೆ ತೋರುವ ಯತಿಗೆ ಸಂದುದು ಪರಮಹಂಸಾಖ್ಯೆ || ೧೧

ಇಂತು ವೇದಾನೀಕ ಪೊಗಳಲ |
ನಂತಮಹಿಮನು ಗುರುವರೇಣ್ಯನ |
ಸಂತಸದಿ ಸೇವಿಸುತಲಿರುತಿರೆ ನರ್ಮದಾತಟದೆ ||
ಅಂತರಾತ್ಮನ ನೆನೆದು ಲೋಕ |
ಭ್ರಾಂತಿಯನು ನೆರೆತೊರೆದ ಮುನಿವಿ |
ಕ್ರಾಂತರನುದಿನ ಪೊಗಳುತಿರ್ದರು ಯತಿಯು ಪಶುಪತಿಯು || ೧೨

ಧರೆಯುಜನರಿಗೆ ಹರುಷವಿತ್ತಾ |
ದರಿಸುತಿರ್ದಾ ವರವಸಂತನ |
ಪರಿಭವಿಸಿ ಮೆರೆಯುತ್ತಲಿರ್ಪಾಗ್ರೀಷ್ಮರಾಜನನು ||
ಪರಿಕಿಸುತಲಾವರ್ಷಋತು ತಾ |
ನುರುವಕೋಪದಲವನ ಜಯಿಸಲು |
ನೆರಹುತಿಹ ಸೈನ್ಯವೆನೆ ರಂಜಿಸಿತಾಗ ಘನನಿವಹ || ೧೩

ಜಲನಿಧಿಯ ಸಾರುತ್ತಲಾಬಹು |
ಜಲಧರಂಗಳು ಜಲವ ಪೀರುತ |
ಜಲಜನಾಭನ ಚರಣಸೀಮೆಯ ಸಾರ್ದು ಗರ್ಜಿಸುತ ||
ಜಲವನುಗುಳುತ್ತಿರಲು ಬಳಿಕಾ |
ಜಲಜಮಿತ್ರನ ತೇಜವಡಗಿರೆ |
ಜಲಜಸಂಭೂತಾಂಡ ಮುಳಗಿತು ತಿಮಿರಜಲಧಿಯಲಿ || ೧೪

ಧರಯು ಜನರನು ಬಾಧೆಗೊಳಿಸುತ |
ತರಣಿಶಶಿಗಳ ಕಾಣಲೀಸದೆ |
ಗುರುಬುಧದ್ವಿಜನಿಕರಕಾಂತಿಯ ಧರೆಗೆ ಮರೆಮಾಡಿ ||
ವರುಷನೃಪ ತಾಂ ದುರಭಿಮಾನದಿ |
ಮೆರೆಯುತಿಹ ನಿಜಶಿರವನರಿಯಲು |
ಬರುತಲಿಹ ಶರದಿರವ ಕಾಣದೆ ಮಂದವುತಿಯಾಗಿ || ೧೫

ಘನನಿವಹ ಚಂಚಲವು ಸೌದಾ |
ಮಿನಿಯು ಚಂಚಲ ಮೇಣು ವಜ್ರಿಯ |
ಧನುವು ಬಹು ಚಂಚಲವು ತನ್ನಯ ಪದವಿ ಚಂಚಲವು ||
ಎನುತಲರಿಯದೆ ತಾನು ಶಾಶ್ವತ |
ನೆನುತಲಾ ವರ್ಷರ್ತು ತನ್ನಯ |
ಮನದಲುರೆ ಭಾವಿಸುತ ಮೊಳಗುವನಿರದೆ ಬಯಲಿನಲಿ || ೧೬

ಹರಿಪದದಿ ವರ್ತಿಸುತಲಿರುತಿಹ |
ಪರಮಸದ್ವಿಜಕುಲಕೆ ಬೊಮ್ಮವ |
ಕರುಣದಿಂ ಬೋಧಿಸುತ ಘನಗುರುರವವನಾಲಿಸುತ ||
ಇರದೆ ಸಾಯುಜ್ಯಾಖ್ಯಮುಕ್ತಿಯ |
ನೆರೆ ಪಡೆದ ಬಳಿಕಲ್ಲಿ ಸದ್ವಿಜ |
ನೆರವಿ ಗೋಚರಿಸುವುದೆ ಘನಮಹಿಮೆಯಲಿ ಮುಳುಗಿದುದು || ೧೭

ಕಲಿತ ಜಲಧರದಿಂದಲಂಬರ |
ಮಲಿನವಾಗಿರೆ ಶಶಿಯು ಷೋಡಶ |
ಕಲೆಯನಾಂತಿರುತಿರ್ದು ಪಡೆಯನು ಸುಪ್ರಕಾಶತೆಯ ||
ಸಲೆ ಕಲಾವಿದರಾದ ಮನುಜರು |
ಮಲಿನವಸ್ತ್ರದೊಳಿರಲು ಜಗದೊಳು |
ಲಲಿತತೇಜವು ದೊರೆಯದೆಂಬುದು ಸುಪ್ರಸಿದ್ಧವಲೆ || ೧೮

ವೃಷ್ಟಿಯುದಕವ ಬಯಸಿ ದಾಹದಿ |
ಕಷ್ಟಪಡುತಿಹ ಚಾತಕವ್ರಜ |
ತುಷ್ಟಿಯಾಂತುದು ಪಾನಗೈಯುತ ಮಳೆಯ ಹನಿಗಳನು ||
ಸೃಷ್ಟಿಯಲಿ ಸತ್ಕಾರವೊದಗಿರ |
ಲಿಷ್ಟವನು ಜನಗಳಿಗೆ ತಾನು |
ತ್ಕೃಷ್ಟವೆನಿಪಾಶ್ರಯವು ಕುಡುವುದಕುಂಟೆ ಸಂಶಯವು || ೧೯

ಈ ಪರಿಯ ಮಳೆಗಾಲದೊಳಗಾ |
ತಾಪಸೋತ್ತಮರೊಲಿದು ವಾಸಿಪ |
ಪಾಪದೂರವೆನಿಪ್ಪವರನರ್ಮದೆಯತೀರದಲಿ ||
ವ್ಯಾಪಿಸಿದುದಭ್ರದಲಿ ಮೇಘಾ |
ಲಾಪ ಮತ್ತಲ್ಲಲ್ಲಿ ಸುರಪನ |
ಚಾಪವದು ತೋರಲಿಕೆ ಬೀಸಿದುದು ಬಿರುಗಾಳಿ || ೨೦

ಮರನ ಮರ ತಕ್ಕೈಸುತಿರ್ದುವು |
ಬರಸಿಡಿಲು ಗಿರಿಗಳನು ಚದುರಿಪ |
ತೆರದಿ ಹೊಡೆದವು ಮಿಂಚುಗಳು ಹೊಳಕಿದವು ದೆಸೆಗಳಲಿ ||
ಕರಿಯ ಸುಂಡಿಲ ತೆರದಿ ಬಿರುವಳೆ |
ಸುರಿದುದವನಿಗೆ ಕಾರುಗತ್ತಲೆ |
ನೆರೆದು ಭಯವನು ಬೀರುತಿರ್ದುದು ಸಕಲಜನ ಮನಕೆ || ೨೧

ಇಂತು ಬಿರುವಳೆಯೈದುದಿನ ಪರಿ |
ಯಂತರವು ತಾಂ ಬಿಡದೆ ಲೋಕಕ |
ನಂತ ಬಾಧೆಯನಿತ್ತು ಸುರಿದುದು ಬಹುಳ ರಭಸದಲಿ ||
ಕಂತುಮಾತುಲಜಾತೆಯಾಗ ನಿ |
ರಂತರದ ವರ್ಷದಲಿ ಹೆಚ್ಚುತ |
ನಂತವಹ ಭೀತಿಯನು ಬೀರುತಲಿರ್ದಳಡಿಗಡಿಗೆ || ೨೨

ಮೇಲೆಮೇಲ್ಕೈತರುತವಾಹಿನಿ |
ಸಾಲಸಾಲ ರಸಾಲತರುಗಳ |
ಜಾಲಜಾಲವ ಮುರಿದು ಗುಳಿತಿವರುಗಳ ಮುಚ್ಚುತಲೆ ||
ಕಾಲಕಾಲನ ಚರಣ ಕಮಲವ |
ನೋಲಗಿಸುತಿರುತಿರ್ಪ ಮುನಿಗಳ |
ತೇಲಿಸಿತು ಮುಳುಗಿಸಿತು ರಾಜಿಪಪರ್ಣಶಾಲೆಗಳ || ೨೩

ಮೀರಿ ನದಿಯುಕ್ಕಿದುದು ಕೂಲದ |
ತೋರವೃಕ್ಷಗಳೆಲ್ಲ ಮುರಿದವು |
ಬೇರು ಸಹಿತಲೆ ಕೊಚ್ಚಿಬರುತ್ತಿರ್ದುವು ವನಾಂತರದೆ ||
ಘೋರತರವೆನಿಪಾಪ್ರವಾಹಕೆ |
ಮಾರುಗೊಂಡವು ಸಕಲ ಮೃಗತತಿ |
ಚೀರುತಿರ್ದುವು ವಿಹಗಸಂಕುಲ ತೇಲಿ ಜಲದೊಳಗೆ || ೨೪

ಸುಳಿಸುಳಿದು ಭೋರ್ಗರೆದು ಮತ್ತಾ |
ಘುಳುಘುಳುಧ್ವನಿವೆರಸಿ ಹರಿಯುತ |
ಲಲೆಗಳಲಿ ವೇಲೆಗಳನೊದೆದೊದೆದತಿ ಭಯಂಕರದಿ ||
ಪ್ರಳಯಜಲನಿಧಿಯಂತೆ ಗರ್ಜಿಸಿ |
ಕಲುಷದಿಂದೊಡಗೂಡಿ ಮಕರಿಯ |
ಬಳಗೆಗಳನೊಡಗೊಂಡು ಸುಳಿದಳು ನರ್ಮದೆಯು ಭರದಿ || ೨೫

ಮೇಖಲಾತ್ಮಜೆಯಿಂತು ವನದಲಿ |
ಭೀಕರಾಕಾರದಲಿ ಹರಿಯುತ |
ನೇಕ ವಿಪ್ರರು ವಾಸಗೊಂಡಿರುವಗ್ರಹಾರದಲಿ ||
ಸೋಕಿ ತಾನಾವರಿಸಿಕೊಳಲು ಪಿ |
ನಾಕಿ ಕಂಡನು ಬಹುಳಜಲದೊಳ |
ಗೇಕರೂಪವನಾಂತ ವಿಪ್ರರ ನಿಳಯಪಙ್ತಿಗಳ || ೨೬

ತಿರುಗಿ ಕಂಡನು ತನ್ನ ಗುರುವರ |
ಪರಮಯೋಗದೊಳಿರ್ಪ ತೆರನನು |
ವರಜಲಾಕರ್ಷಣದ ಮಂತ್ರವ ಜಪಿಸಿ ಶಂಕರನು ||
ಕರಕಮಂಡುಲವನ್ನು ಧರೆಯೊಳ |
ಗಿರಿಸಲಾಕ್ಷಣ ಬಹುಳ ರಭಸದಿ |
ಹರಿವ ರೇವಾತಟಿನಿಯಡಗಿದುದಾಗ ಪಾತ್ರೆಯಲಿ || ೨೭

ಕುಂಭಸಂಭವನಂದು ತನ್ನ ಕ |
ರಾಂಬುಜವನರಳಿಸುತ ನೆರೆ ಸ |
ಪ್ತಾಂಬುನಿಧಿಯನು ಸೆಳೆದು ಜಠರದೊಳಿಳುಹಿದಂದದಲಿ ||
ಅಂಬರದ ಗಂಗೆಯನು ಜಟೆಯೊಳು |
ಶಂಭುತಾಳಿದ ತೆರದಿ ವರಯತಿ |
ತುಂಬಿದನು ನರ್ಮದೆಯ ಕರಕದೊಳಿಂದು ಲೀಲೆಯಲಿ || ೨೮

ಬಳಿಕಲಾನದಿಯುಗ್ರಭಾವವು |
ಸಲೆಸುಶಾಂತತೆವೆತ್ತುದಾಬಲು |
ಮಳೆಯು ನಿಂದುದು ಪವನನಾಡಂಬರವು ತಗ್ಗಿದುದು ||
ಬಲುಮೆಯಿದಕಾಣುತ್ತವಿಪ್ರರ |
ಬಳಗವತಿಸಂಭ್ರಮವ ಚಿತ್ತದೆ |
ತಳೆದು ಯತಿಯನು ನುತಿಸುತಿರ್ದುದು ನೆರವಿನೆರವಿಯಲಿ || ೨೯

ಆಗಲಾಗೋವಿಂದಪಾದನು |
ಯೋಗಮುಖದಿಂದೆದ್ದು ದಕ್ಷನ |
ಯಾಗಹರನೆಸಗಿದುದ ಕೇಳುತ ತನ್ನಮನದೊಳಗೆ ||
ಯೋಗಸಿದ್ಧಿಯಪಡೆದ ತೆರದಿಂ |
ರಾಗವನು ತಾಳಿದನು ಬಳಿಕಾ |
ಭೋಗಿಭೂಷಂಗೊಲಿದು ಬೋಧಿಸುತಿರ್ದ ತತ್ವವನು|| ೩೦

ಒಂದುದಿನ ಗೋವಿಂದಪಾದನು |
ಸಂದಶಿಷ್ಯನ ಯತಿವರೇಣ್ಯನ |
ಬಂಧುರಪ್ರೀತಿಯಲಿ ಕರೆದಿಂತೆಂದ ನಸುನಗುತ ||
ಕಂದ ಕೇಳೀಶರದಿ ಗಗನವ |
ನಿಂದುನೋಡಲಭಿನ್ನವಾಗಿಹೆ |
ಚಂದದಲಿ ತೋರುವುದು ಬ್ರಹ್ಮಾತ್ಮೈಕ್ಯಲಕ್ಷಣವು || ೩೧




ಶ್ರೀ ಗುರು ಗೋವಿಂದಪಾದಾಚಾರ್ಯರು
ಶ್ರೀ ಶಂಕರರಿಗೆ ಅನುಗ್ರಹಿಸಿದುದು.

ಉದಕಧಾರೆಯನೆರೆದಡಾಸಸಿ |
ಪದುಳದಿಂ ವೃದ್ಧಿಯನು ಪಡೆಯುವ |
ವಿಧದಿ ಕೇಳೈ ಸೋಮನಿಭವರಶಾಂತವಿಗ್ರಹನೆ ||
ಸದುಪದೇಶದವಾಕ್ಯವೆಂಬುವ |
ಸದಮಲದ ಜಲಧಾರೆಯಿಂದಲಿ |
ಸದುಹೃದಯವೆಂದೆನಿಪ ಸಸಿ ತಾಂ ವಿಶದವಾಗುವುದು || ೩೨

ವಾರಿದಂಗಳ ಬಾಧೆಯಿಲ್ಲದೆ |
ತೋರುತಿಹ ಬಹುಶುಭ್ರದಭ್ರದಿ |
ನೀರಜಾರಿಯು ಪರಮಕಾಂತಿಯ ತಳೆದು ತೋರ್ಪಂತೆ ||
ಭೂರಿಮಾಯಾವರಣ ತೊಲಗಿಹ |
ಸಾರನಿರ್ಮಲಹೃದಯ ಮಧ್ಯದೆ |
ತೋರುವುದು ವರತತ್ವಬೋಧಾಚಂದ್ರಬಿಂಬವದು || ೩೩

ನೆರೆದ ಕೌಮುದಿಯೆಂಬ ಭಸಿತವ |
ಸುರುಚಿರಾಂಗಕೆ ಪೂಸಿ ರಂಜಿಪ|
ಹರಿಯಮಂಡಲವೆಂಬ ಶುಭ್ರಕಮಂಡುಲವಧರಿಸಿ ||
ಅರಳಿರುವ ಬಂಧೂಕಸುಮಗಳು |
ಮಿರುಪ ಪಾಟಲವಸ್ತ್ರದಂತಿರೆ |
ಶರವಿದುವೆ ಸನ್ಯಾಸಿಯಂದದಿ ಶೋಭಿಪುದು ಮುದದಿ || ೩೪

ವರಸುಚಂದನರಜದ ಮಧ್ಯದೆ|
ಸುರುಚಿರದ ಕೌಸ್ತುಭದ ರತ್ನವ |
ಧರಿಸಿಕೊಂಡುರುತರದ ಕಾಂತಿಯನಾಂತು ರಂಜಿಸುವ ||
ಹರಿಯವಕ್ಷದ ತೆರದಿ ತೋರ್ಪುದು |
ಶರದಮೇಘದ ನಡುವೆ ಶೋಭಿಸ |
ಹರಿಯಮಂಡಲದಿಂದಕೂಡಿದ ನಭವು ನೋಡೆಂದ || ೩೫

ಧ್ಯಾನ ಧಾರಣ ವರಸಮಾಧಿಯು |
ಮೌನ ಮೊದಲಾದತುಳಯೋಗದ |
ನೂನಮಾರ್ಗದಿ ವರ್ಷರುತುವಿನ ಕಾಲವನು ಕಳೆದು ||
ಜಾನಪದಗಳೊಳೊಲಿದು ನೆರೆ ಸು|
ಜ್ಞಾನಮಾರ್ಗವ ಜನಕೆಬೋಧಿಸೆ |
ಮೌನಿಗಳು ಸಂಚರಿಪರನುಪಮಶರದ ಕಾಲದಲಿ || ೩೬

ಘೋರತರ ಭವಮರಣವೆನಿಪ ವಿ |
ಕಾರದಾವಾಗ್ನಿಯನು ನಂದಿಸೆ |
ವಾರಿಧರವಹ ತತ್ವಪದ್ಧತಿ ನಿನ್ನದೆಸೆಯಿಂದ ||
ಧಾರಿಣಿಗೆ ಗೋಚರಿಸಬೇಹುದು |
ಸಾರುನೀನದರಿಂದ ಪುತ್ರನೆ |
ವಾರಣಾಸಿಗೆನುತ್ತ ನುಡಿದನು ಗುರುವರನು ಯತಿಗೆ || ೩೭

ಲಾಲಿಸೈ ಶಂಕರನೆ ವರಹಿಮ |
ಶೈಲದುಪವನದೊಳಗೆ ಹಿಂದೆ ವಿ |
ಶಾಲಯಜ್ಞವನತ್ರಿಮುನಿ ರಚಿಸಿದನು ವಿಭವದಲಿ ||
ಮೇಲೆನಿಪ ವರಯಜ್ಞಶಾಲೆಯ |
ಲೀಲೆಯಿಂದಜಸುರಪಮುಖ್ಯಸು |
ರಾಳಿ ಪೊಕ್ಕುದು ಮುನಿಗಳೊಡನಾಂಪೋದೆನಾಬಳಿಗೆ || ೩೮

ಭೂದಿವಿಜ ಸಭೆಯೊಳಗೆ ಬಳಿಕಾ |
ಬಾದರಾಯಣ ಮುನಿಯು ಕರುಣದಿ |
ವೇದತತ್ವಾರ್ಥವನು ವಿವರಸುತಿರಲು ನಾನದನು |
ಮೋದದಿಂದಲೆ ಕೇಳಿ ಮತ್ತಾ |
ಬಾದರಾಯಣಮುನಿಗೆ ನುಡಿದೆನು |
ಸಾದರದಿ ಲಾಲಿಪುದು ತನ್ನಯ ಬಿನ್ನಪವನೆಂದು || ೩೯

ಯತಿವರೇಣ್ಯನೆ ನೀನು ದಯೆಯಿಂ |
ಶ್ರುತಿವಿಭಾಗವಗೈದು ಮುನಿಜನ |
ಕತಿಶಯದ ಸೌಖ್ಯವನು ಕಲ್ಪಿಸಿ ಜಸವನಾಂತಿರುವೆ ||
ಕ್ಷಿತಿತಲದೊಳೀಬ್ರಹ್ಮಸೂತ್ರಕೆ |
ಮತಿವಿದನೆ ಸುರುಚಿರದಭಾಷ್ಯವ |
ನತುಲಕರುಣದಿ ನೀನು ರಚಿಪುದು ವಿಶದವಹತೆರದೆ ೪೦

ಎಂದು ನಾಂಬೇಡುತಿರೆ ಮುನಿಪತಿ |
ಯೆಂದು ನುಡಿದನು ಸೂತ್ರಭಾಷ್ಯವ |
ನಂದವೆನೆ ವಿರಚಿಸುವ ವಿಷಯವ ರಜತಶೈಲದಲಿ ||
ಇಂದುಧರ ಸಭೆಯೊಳಗೆ ಪೇಳಿಹ |
ನಿಂದುಸಂಭವೆಯುಗ್ರಜಲವನು |
ಬಂಧಿಸುವ ವರಯತಿಯು ಭಾಷ್ಯವ ರಚಿಪನೆಂದೆನುತ || ೪೧

ಎಂದು ಸಾತ್ಯವತೇಯ ಪೇಳುತ |
ಲಂದವೆನಿಪಾ ಯಜ್ಞಕರ್ಮವು |
ಸಂದ ಬಳಿಕಾ ರಜತಶೈಲಕೆ ಗಮಿಸಿದನು ಭರದಿ ||
ಕಂದ ಕೇಳಿದನೆನುತ ವರಗೋ |
ವಿಂದ ಪಾದಸು ನುಡಿದು ಬಳಿಕಿಂ |
ತೆಂದನಾ ಯತಿವರನಿಗಭಿಮತಕಾರ್ಯವಿಸ್ತರವ || ೪೨

ವರಪರಾಶರಸುತನು ನುಡಿದಂ |
ತುರುನದಿಯ ನರ್ಮದೆಯ ಜಲವನು |
ಕರಕಮಂಡಲದೊಳಗೆ ತುಂಬಿದೆ ನೀನು ಯತಿವರನೆ ||
ಪಿರಿದೆನಿಸುವಾ ಬ್ರಹ್ಮಸೂತ್ರಕೆ |
ಪರಮಭಾಷ್ಯವ ರಚಿಸಿ ಜಗದೊಳ |
ಗುರುತರದ ಕೀರ್ತಿಯನು ಪಡೆಯುವುದೆನುತ ಗುರುನುಡಿದ || ೪೩

ಗಮಿಸುವುದು ನೀ ವಾರಣಾಸಿಗೆ |
ವಿಮಲಗಂಗಾಜಲದಿ ಮಿಂದಾ |
ಸುಮನಸಾರಾಧಿತನ ಗಿರಿಜಾವರನ ಶಂಕರನ ||
ನಮಿಸುತಲಿ ಪಡೆದಾತನಾಜ್ಞೆಯ |
ನಮಲಭಾಷ್ಯವರಚಿಸಿ ಸೂತ್ರಕೆ |
ಸುಮಶರಾಂತಕನಂತೆ ರಂಜಿಪುದೆಂದನಾಚಾರ್ಯ || ೪೫

ಎಂದು ಗುರು ಪೇಳಿದುದ ತಾನಾ |
ನಂದದಿಂದಾಲಿಸುತ ಶಂಕರ |
ಸಂದ ಭಯಭಕ್ತಿಯಲಿ ಗುರುವಿನ ಪಾದಪಂಕಜಕೆ||
ವಂದಿಸುತ ಬೀಳ್ಕೊಂಡು ಮುನಿಜನ |
ವೃಂದವನು ಸಂತೈಸಿ ಬಳಿಕ |
ಲ್ಲಿಂದ ನಡೆದೈತರುತಲಿರ್ದನು ಕಾಶಿಕಾಪುರಕೆ || ೪೬

ಹರನು ವರಕಾಷಾಯವಸ್ತ್ರವ |
ಧರಿಸಿ ಪಣೆಯೊಳಗಾತ್ರಿಪುಂಡ್ರವ |
ಕರದಿ ದಂಡಕಮಂಡುಲಂಗಳ ಧರಿಸಿ ನಲವಿನಲಿ ||
ವರಪರಾಶರಸುತನ ಸನಿಹಕೆ |
ಬರುವ ಶುಕಯೋಗೀಂದ್ರನಂದದಿ |
ಬರುತಲಿರ್ದನು ಸಕಲಜನಕಚ್ಚರಿಯ ಬೀರುತಲಿ || ೪೭

ವೀತಿಹೋತ್ರಾಂಬಕನು ಮಾರ್ಗದೊ |
ಳೈತರುತ ಬಹುವಿಧದ ವೃಕ್ಷ |
ವ್ರಾತಗಳ ಗಿರಿಗಳನು ನಾನಾವಿಧದ ಮೃಗಗಳನು ||
ಖ್ಯಾತಿಯಾಂತಿಹನದಿಯ ಬಹುಜಲ |
ಪಾತಗಳನೋಡುತ್ತಲತಿಸಂ |
ಪ್ರೀತಿಯಿಂದೈತಂದು ಹೊಕ್ಕನು ವಾರಣಾಸಿಯನು || ೪೮




ಗುರುಗೋವಿಂದಪಾದಾಚಾರ್ಯರ ಅನುಮತಿಯಂ ಪಡೆದು ಶ್ರೀಶಂಕರರು
ಕಾಶೀಪಟ್ಟಣಕ್ಕೆ ಬರುತ್ತಿರುವುದು.

ತನ್ನ ಸಾಧನೆ ವಿಶ್ವನಾಥನು |
ತನ್ನ ಮಹಿಮೆಯಪಾರಮಹಿಮೆಯು |
ತನ್ನೊಳಗೆ ಮೃತಿಯಾಂತವರು ಪಡೆಯುವರುನ್ನತದಗತಿಯ ||
ಪನ್ನಗಾರಿಧ್ವಜನ ಪಾದೋ |
ತ್ಪನ್ನೆ ತನ್ನೊಳಗಿಹಳು ತನ್ನಿಂ ||
ದುನ್ನತರದಾರೆನುತ ಮೆರೆದುದು ಕಾಶಿಕಾಖ್ಯಪುರ || ೪೮

ಕಾಶಿಯೇ ಕೈಲಾಸ ಮೇಣಾ |
ಕಾಶಿಯೇ ವೈಕುಂಠಪುರವರ |
ಕಾಶಿಯೇ ವರಸತ್ಯಲೋಕವದೆಂಬುದದು ಸತ್ಯ ||
ಕಾಶಿಯನು ಸಂಸ್ಮರಿಸಿದಾತನು |
ಲೇಸೆನಿಪ ಮೋಕ್ಷವನು ಪಡೆವನು |
ಕಾಶಿಗೆಣೆಯಹಕ್ಷೇತ್ರ ತಾಂ ಬೇರುಂಟೆ ಜಗದೊಳಗೆ || ೪೯

ಇಂತೆಸೆವ ವರವಾರಣಾಸಿಯ |
ಕಂತುಹರನೈದುತ್ತ ಕಂಡನು |
ಪಾಂಥರಿಗೆ ವಿಶ್ರಾಂತಿಸೌಖ್ಯವನಿತ್ತು ರಕ್ಷಿಸುತ ||
ಸಂತಸದಿ ಹರಿಯುತಲೆ ಭಕ್ತರ |
ಸಂತತವು ಪೊರೆಯುತ್ತ ರಂಜಿಪ |
ನಂತಮಹಿಮೆಯನಾಂತ ಗಂಗೆಯ ಶುಭತರಂಗೆಯನು || ೫೦

ಸಗರಕಂಧರಶಿರದೊಳಿರ್ದಾ |
ಸಗರವಂಶೋದ್ಭವನ ಪಾಲಿಸೆ |
ಸಗರಪುತ್ರರ ಭಸ್ಮರಾಶಿಯು ಬೆರೆದು ಸಾಗರವ ||
ಪುಗುತಲಿರ್ದರು ಪಾನಗೈದಡೆ |
ಸೊಗಯಿಸುವ ಸುಧೆಯಹೆನು ತಾನೆಂ |
ಬೊಗುಮಿಗೆಯ ಹರ್ಷದಲಿ ಮೊರೆಯುತ್ತಿರ್ದಳಾಗಂಗೆ || ೫೧

ಹರಿಯುಪದಪಂಕಜದೊಳುದಯಿಸಿ |
ಹರಕಪರ್ದದೊಳಿರ್ದು ಮೇಣಾ |
ಸರಸಿಜೋದ್ಭವಕರಕಮಂಡುಲದೊಳಗೆ ಹುದುಗಿರ್ದು ||
ಪರಮ ಮೂರ್ತಿತ್ರಯದ ಮಹಿಮೆಯ |
ನೆರೆತಳೆದ ತನಗಾರು ಸಮರೀ |
ಧರೆಯೊಳೆನುತಲೆ ಹರುಷಮಿಗೆನರ್ತಿಪಳು ಸುರಸಿಂಧು || ೩೨

ತಾನಧೋಮಾರ್ಗದಲಿ ಚರಿಸುತ |
ಲಾನತರಿಗೂರ್ಧ್ವಪ್ರಲೋಕವ |
ಸಾನುನಯದಿಂದಿತ್ತು ವಿಷಮಯಳಾಗಿ ತಾನಿರುತ ||
ಪಾನಗೈವರಿಗೀವಳಮೃತಸ |
ಮಾನನಿರ್ಮಲಜೀವನೀಯುವ |
ನೂನ ಮಹಿಮೆಯುಗಂಗೆ ತಾನು ವಿರುದ್ಧಚರಿತೆಯಲಿ || ೩೩

ತನ್ನ ಜಾನಿಸೆ ಸುರಪತಿತ್ವವ |
ನನ್ನಿಯಿಂದವಗಾಹಮಿರಲ |
ತ್ಯನ್ನತದ ಪರಮೇಷ್ಠಿಪದವಿಯ ತನ್ನನುತಿಪರಿಗೆ ||
ಪನ್ನಗಾರಿಧ್ವಜನ ಪದವಿಯ |
ನಿನ್ನುಪಾನಂಗೈಯೆ ವರಸಂ |
ಪನ್ನಮೋಕ್ಷವ ನೀವೆನೆನ್ನುತಲಿಹಳು ಜಾನ್ಹವಿಯು || ೩೪

ಇಂತೆಸೆವ ಗಂಗೆಯನು ಕಂಡತಿ |
ಸಂತಸವ ತಾಳುತ್ತ ಮನದೊಳು |
ಕಂತುಹರನವಗಾಹಸವ ವಿಸ್ತರಿಸಿ ಭಕ್ತಿಯಲಿ ||
ಶಾಂತರೂಪನು ಯತಿಸುಧರ್ಮವ |
ನಂತವನು ತಾನೆಸಗಿ ಮತಿವಿ |
ಕ್ರಾಂತನೈತರುತಿರ್ದನಾಪುರವರದ ವೀಧಿಯಲಿ || ೩೫

ಮುಂದೆ ಬರುತಿರೆ ಚಾಹ್ನವೀಜಲ ।
ಬಿಂದುಮಾತ್ರದಿ ಸಕಲ ಪಾಪವು ।
ಬೆಂದುಪೋಪುದೆನುತ್ತ ಸಾರುತ ಭಕ್ತನಿವಹವನು ॥
ಬಂಧುರಪ್ರೇಮದಲಿ ಸಲಹುವ ।
ಬಿಂದುಮಾಧವನಿಳಯವನು ಕಂ ।
ಡಂದು ಯತಿವರನೆರಗಿ ತೆರಳಿದ ಮುಂದೆ ವಹಿಲದಲಿ ॥ ೫೬

ಖಂಡಶಶಿಶೇಖರನು ಬರುತು ।
ದ್ದಂಡಕಾಶೀಪುರದೆ ಕಂಡನ ।
ಖಂಡಮಹಿಮಾನ್ವಿತನ ದಿವಿಜೋದ್ದಂಡ ಧುಂಡಿಯನು ॥
ಕಂಡವರ ಬಹು ವಿಘ್ನಜಾಲವ ।
ಖಂಡಿಸುವ ಮಹಿಮನನು ಬಳಿಕಲ ।
ಖಂಡಸಂಭ್ರಮದಿಂದ ಗಮಿಸಿದನವನ ಬೀಳ್ಕೊಂಡು ॥ ೫೭

ಸೇರಿ ಕಾಶೀಪುರವ ತಮ್ಮ ಶ ।
ರೀರವನು ಬೀಳ್ಕೊಂಬ ಮನುಜರ ।
ಘೋರಪಾಪಕೆ ತಕ್ಕ ಶಿಕ್ಷೆಯನಾಕ್ಷಣಾರ್ಧದಲಿ ॥
ಸೇರಿಸುತಲವದಿರಿಗೆ ಕರುಣದಿ ।
ಮಾರವೈರಿಯು ಪದವನೀಯುವ ।
ಪಾರಮಹಿಮನ ನಿಳಯ ಮೆಸೆದುದು ಕಾಲಭೈರವನ ॥ ೫೮

ಅದನು ಪೊಕ್ಕಲ್ಲಿಂದ ತೆರಳುತ ।
ಮದನ ವೈರಿಯು ಭಕ್ತನಿಚಯಕೆ ।
ಪದುಳದಿಂ ಸುಜ್ಞಾನವೈರಾಗ್ಯಾಖ್ಯ ಭಿಕ್ಷೆಯನು ॥
ಒದವಿಸುವ ಮಾತಾನ್ನಪೂರ್ಣಾ ।
ಸದನವನು ಕಾಣುತ್ತ ನೆರೆ ಸಂ ।
ಮುದದಿ ತಾಂ ನಡೆತಂದನಾ ವಿಶ್ವೇಶಮಂದಿರಕೆ ॥ ೫೯

ಬಂದು ದೇವಾಲಯಕೆ ಯತಿವರ |
ಬಂಧುರದಭಕ್ತಿಯಲಿ ನಮಿಸುತ |
ಲಿಂದುಧರನನು ನುತಿಸಿ ಪೂಜಿಸಿ ಬಹುಳನಿಯಮದಲಿ ||
ವಂದಿತಾಖಿಲದೇವದಾನವ |
ವೃಂದ ಶುದ್ಧಸ್ಫಟಿಕವಿಗ್ರಹ |
ಸಿಂಧುರಾಜಿನಧಾರಿ ಸುಜನೋದ್ಧಾರಿ ರಕ್ಷಿಪುದು ||

ಎನುತ ತನ್ನನು ತಾನೆಪೊಗಳುತ |
ತನಗೆತಾನೇ ನಮಿಸಿಕೊಳ್ಳುತ |
ಚಿನುಮಯನು ತನ್ನೊಳಗೆ ತನ್ನನು ತಾನೆ ಜಾನಿಸುತ ||
ಘನಮಹಿಮನದ್ವೈತತತ್ವವ |
ವಿನಯದಿಂಭಾವಿಸುತ ವರಸ |
ಜ್ಜನನುತಶ್ರೀಕಂಠನಿರ್ದನು ವಾರಣಾಸಿಯಲಿ ||

ಸಂಧಿ ೧೩ಕ್ಕೆ ಪದ್ಯ ೫೦೮ಕ್ಕೆ ಮಂಗಳ.



# ಹದಿನಾಲ್ಕನೆಯ ಸಂಧಿ.

ಸೂಚನೆ|| ಹರಿಯು ನರರೂಪಿನಲಿ ಬಂದಾ |
ಹರನ ಚರಣಕ್ಕೆರಗಿ ನುತಿಸುತ |
ಪರಮಯತ್ಯಾಶ್ರಮವ ನೆರೆಕೈಕೊಂಡನೊಲವಿನಲಿ ||

ಕೇಳಿರೈ ಮುನಿಗಳಿರ ಪರಮುಕ್ತ |
ಪಾಳುವಿನ ಸಚ್ಚರಿತೆಯನು ಸುಜ |
ನಾಳಿಗದ್ವೈತದನುಸಂಧಾನವನುಬೋಧಿಸುತ |
ಲೀಲೆಮಿಗಿಲಾವಾರಣಾಸಿಯ |
ಪಾಲಿಸುವ ವರವಿಶ್ವನಾಥನ |
ನೋಲಗಿಸುತಿರುತಿರ್ದನಾ ಯತಿವರನು ಕಾಶಿಯಲಿ ||

ಇರುತಿರಲು ಬಳಿಕೊಂದುದಿನವಾ |
ಹರನು ಸುರಸಿಂಧುವಿನ ತೀರದ |
ಲಿರಲು ಬಂದನು ವಿಪ್ರನೊಬ್ಬನು ಪಂಡಿತೋತ್ತಮನು ||
ಸರಸಿಜೇಕ್ಷಣಸಮಸುತೇಜೋ |
ಭರಿತ ನಿರ್ಮಲಕರಣಯುತನಾ |
ಪರಮಹಂಸನ ಕಂಡು ಪದಪಂಕಜಕೆ ನಮಿಸಿದನು || ೨

ಪಾದಪದ್ಮವ ಪಿಡಿದು ದೈನ್ಯದಿ |
ವೇದವೇದ್ಯನನುತಿಸಿ ತನ್ನಯ |
ಬಾಧೆಯನು ಪರಿಹರಿಸಿ ರಕ್ಷಿಸಬೇಹುದೆಲೆಗುರುವೆ ||
ನೀ ದಯಾಂಬುಧಿಯೊಲಿಯುತೆನ್ನನು |
ಕಾದುಕೊಳ್ವುದೆನುತ್ತಬೇಡಲು |
ಸಾದರದಿ ಯತಿಯುವನ ಸಂತೈಸುತ್ತ ನುಡಿಸಿದನು || ೩

ಎಲೆಮನುಜ ನೀನಾರು ನಿನ್ನಯ |
ನೆಲೆಯದಾವುದು ಪೆಸರದೇನೀ |
ನೆಲೆಗದೇತಕೆಬಂದೆ ನಿನಗಾರುಂಟು ಬಾಂಧವರು ||
ಬಳಲುತಿಹೆ ನೀನೇಕೆ ಪೇಳುವು |
ದಲಸದೆನ್ನೊಡನೆನಲು ಕೇಳುತ |
ಲಲಘುಮಹಿಮಗೆ ಪೇಳ್ದನಾತನು ವಿನಯಪರನಾಗಿ || ೪

ಕ್ಷಿತಿಯಮರಕುಲಜಾತನಾನೆಲೆ |
ಯತಿವರೇಣ್ಯನೆ ಕೇಳು ಭುವನದ |
ಲತಿಶಯಪ್ರಖ್ಯಾತಿಯಾಂತಾ ಚೋಳದೇಶದಲಿ ||
ಪ್ರಥಿತನಹ ವಿಮಲಾಖ ವಿಪ್ರನ |
ಸುತ ಸನಂದನನೆಂಬ ಪೆಸರಿನ |
ಗತಿಶಯದಬಾಂಧವನು ನೀನೀ ವಾರಣಾಸಿಯಲಿ || ೫

ಬಂದೆ ನಾನೀನೆಲೆಗೆ ಭವಭಯ |
ಬಂಧನವ ಕಳಚುವರೆ ತನಗತಿ |
ಬಂಧುರಸುಮಾರ್ಗವನು ಕಾಣದೆ ಬಳಲಿ ನಿಮ್ಮಡೆಗೆ ||
ಇಂದು ತನಗೀಭವವ ತಪ್ಪಿಸಿ |
ತಂದೆ ಕರುಣಿಪುದೆನುತ ಮತ್ತಿಂ |
ತೆಂದು ನುಡಿದನು ಬಹುಳ ದೈನ್ಯದೊಳಾಸನಂದನನು ||

ಗುರು ಕಮಲಸಂಭವನು ಮತ್ತಾ |
ಗುರುವೆ ಕಮಲದಳಾಯತಾಕ್ಷನು |
ಗುರುವರನೆ ಕಮಲಾಪ್ತಶಶಿಶಿಖಿನೇತ್ರನೆನಿಸುವನು ||
ಗುರುವೆ ಸಾಕ್ಷಾತ್ಬ್ರಹ್ಮವಸ್ತುವು |
ಗುರುಚರಣಸರಸೀರುಹಂಗಳ |
ತರಣಿಯಲಿ ಭವಸಾಗರವನುತ್ತರಿಸೆ ಬಂದಿಹೆನು ||

ಗುರುವರನೆ ನಿನ್ನತುಳುದಯೆಯಿಂ |
ಬುರುತರದ ಗಂಗಾವಗಾಹದಿ |
ವರಶುಚಿತ್ವವನಿತ್ತು ಪೊರೆ ಗುಣದೋಷಗಳ ಭಾವಿಸದೆ ||
ಧರಣಿಯಲಿ ತನಗಿನ್ನು ನಾಥರು |
ಪೆರರದಿಲ್ಲೆಲೆ ಪರಮಕರುಣಾ |
ಶರಧಿ ನೀ ಕೈಗಾಯಬೇಕೆಂದೆರಗಿದನು ಪದಕೆ ||

ಮೇದಿನಿಯೊಳುದ್ಭವಿಸಿ ಮೋಕ್ಷದ |
ಹಾದಿಗಾಣದೆ ಪಲವು ಕರ್ಮವ |
ನಾದರದೊಳೆಸಗುತ್ತ ಸಗ್ಗದ ಸೊಗದ ಬಯಕೆಯಲಿ ||
ಆದಿತೇಯರಪುರವ ಸೇರುತ |
ಮೋದದಿಂದಿರುತಿರ್ದು ಕೆಲದಿನ |
ಖೇದದಿಂದಿಳಿತಹನು ಮನುಜನು ಪುಣ್ಯಫಲಸವೆಯೆ ||

ಜಗದೊಳಗೆ ಜನಿಯಿಸುತ ನರನಾ |
ಬಗೆಬಗೆಯ ದುಷ್ಕರ್ಮಜಾಲವ |
ಸೊಗಸಿನಿಂದಲೆ ರಚಿಸಿ ಬೀಳುತ ನರಕಕೂಪದಲಿ ||
ಬಗೆಬಗೆಯ ಶಿಕ್ಷೆಗಳ ತರಣಿಯ |
ಮಗನವರು ಕೊಡುತಿರಲು ನೊಂದೀ |
ಜಗದಿ ಮತ್ತುದಿಸುವನು ಬಹುವಿಧ ಪಾಪಕರ್ಮದಲಿ || ೧೦

ಹಿಂದೆಮಾಡಿದ ಕರ್ಮಫಲವನು |
ಚಂದದಿಂದನುಭವಿಸಲೋಸಗ |
ಬಂಧನದಿ ಸಿಲುಕುತ್ತ ತಾಯಿಯ ಜಠರದೇಶದಲಿ ||
ದುಂದುಗವನನುಭವಿಸಿ ಮಾಂಸದ |
ಬಂದಿಯಲಿ ಸಿಲುಕುತ್ತ ರಕ್ತದ |
ಸಿಂಧುವಿನಲೋಲಾಡಿ ಶಿಶುವೊರಲುವುದು ಬಸಿರೊಳಗೆ || ೧೧

ಚಿಂತಿಸುತ ಪೂರ್ವಾಪರವನಾ |
ಜಂತುಗಳು ಕಡಿಯುತಿರೆ ಹುಳುಗಳ |
ತಿಂತಿಣಿಯೊಳುರೆ ಮುಳುಗುತುದರಾಗ್ನಿಯಲಿ ಬೇಯುತ್ತ ||
ಶ್ರಾಂತನಾಗುತ ಬಹುಳದುಃಖವು |
ತೊಂತಿಕೊಂಡರೆ ಮಾತೃಗರ್ಭದ |
ಲಿಂತು ದುರವಸ್ಥೆಯನು ಪಡುತಿಹನಕಟ ನರನೆಂದ || ೧೨

ಸಲೆಹಸಿದು ಬಲುಬಿಸಿಯ ಜನನಿಯು |
ಮೆಲಲು ಸಂಕಟಗೊಳುತ ಮತ್ತಾ |
ಮಲದಮೂತ್ರಕ್ಷಾರಕುರೆ ಬೆದರುತ್ತ ಗರ್ಭದಲಿ ||
ಬಲಿದು ನವಮಾಸಗಳ ಕಷ್ಟದಿ |
ಕಳೆದು ಬಳಿಕಾ ಶಿಶುವುಬಸಿರಿಂ |
ದಿಳಿವ ಕಷ್ಟವನೇನಪೇಳುವೆನೆಂದನಾ ವಿಪ್ರ || ೧೩

ಒಲ್ಲೆ ನಾಂ ಜನನವನು ಭೂಮಿಗೆ ।
ತಳ್ಳಬೇಡೆನ್ನುವನು ನೀನೆನು ।
ತಲ್ಲಿಯೊದರುತ್ತಿರಲು ಕೇಳದೆ ಸೂತಿಕಾವಾಯು ॥
ನಿಲ್ಲಗೊಡಿಸದೆ ಬಡಿದುತನ್ನನು ।
ತಳ್ಳಲಲ್ಲಿಂದುರುಳಿಬೀಳುವ ।
ತಲ್ಲಣವ ತಾನೊಲ್ಲೆನೆಂದು ಸನಂದನನು ನುಡಿದ ॥ ೧೪

ಆಗಲಾ ವರವಿಷ್ಣುಮಾಯಾ ।
ಯೋಗವಾಯುವು ಬೀಸಿ ಮತಿಯನು ।
ನೀಗಿ ತಮವನುತುಂಬಿ ಸಂಸಾರದಲಿ ಕೊರಗೆಂದು ॥
ಸಾಗಲಿತ್ತಲು ಕಣ್ತೆರೆದು ಸಲೆ ।
ಕೂಗಿ ಬಲುವೊರೆಯಿಡುತ ಬಹುವಿಧ ।
ಬೇಗೆಯಲಿ ಬೇವುದನು ಬಯಸುವರಾರು ಧರಣಿಯಲಿ ॥ ೧೫

ಕೆಡೆಯೆ ಜಗದೊಳು ಬಳಿಕ ದಿನದಿನ ।
ಹಿಡಿದು ಬಲುಬಿಸಿನೀರನೆರೆಯಲು ।
ನುಡಿಯಲರಿಯದಲಳುತ ಕಡುಸೊಪ್ಪಾಗಿ ನಿದ್ರಿಸುತ ॥
ಪೊಡೆಹಸಿಯೆ ಗೋಳಿಡಲು ಹಾಲನು ।
ಕೊಡದೆ ಮಗುವಿಗೆ ದೃಷ್ಟಿದೋಷವು ।
ತೊಡಕಿತೆನ್ನುತ ಸುಟ್ಟು ಕಡ್ಡಿಯ ಬೊಟ್ಟನಿಕ್ಕುವರು ॥ ೧೬

ಬೇನೆಯಿಂದಳುತಿರಲು ತಮ್ಮಯ ।
ಸೂನು ಹಸಿದಿಹನೆಂದು ಪಾಲನು ।
ಪಾನಗೈಸುತ ಹಸಿದಳಲು ತೊಟ್ಟಿಲಲಿ ತೂಗುತ್ತ ॥
ತಾನು ನಿದ್ರೆಯ ಬಯಸೆ ಕಡು ಸು ।
ಮ್ಮಾನದಿಂದಾಡಿಸುತ ನಲಿವರು ।
ಹೀನಶಿಶುವಿದೆನುತ್ತ ಬೈವರು ಮೀರಿಯಳುತಿರಲು ॥ ೧೭

ತಾಯಿ ಮಾಡುವಪಥ್ಯದಿಂದಲಿ |
ವಾಯುರೋಗವು ತಗಲೆ ಶಿಶುವಿಗೆ |
ಪಾಯುವಾಯಿತ್ತೆನುತ ವೈದ್ಯರಕರೆಯುತೌಷಧವ ||
ಬಾಯಿಗೆರೆವರು ರೋಗಹೆಚ್ಚಲು |
ಪಾಯವಿದಕೇನೆನುತ ಚಿಂತಿಸಿ |
ಮಾಯಕಾರರ ಮಾಂತ್ರಿಕರ ಕರೆತಂದು ತೋರಿಸಲು || ೧೮

ಬಂದು ಮಾಂತ್ರಿಕ ನೋಡಿ ಶಿಶುವಿಗೆ |
ಸಂಧಿಸಿತು ಬಲುಭೂತವದತಾಂ |
ಬಂಧಿಸುವೆನೆಂದೆನುತ ತನಗಾವಶ್ಯವಸ್ತುಗಳ ||
ಬೃಂದವಂತರಿಸುತ್ತ ಹ್ರಾಂಹ್ರೀ |
ಮೆಂದು ಬೊಬ್ಬೆಯಗೈದು ಪೋಗಲು |
ಕಂದನಿಗೆ ಸುಖವಾದುದೆನ್ನುತ ಬರಿದೆ ಭಾವಿಪರು || ೧೯

ಇಂತುದುರವಸ್ಥೆಯಲಿ ಶೈಶವ |
ಕಂತವಾಗಲು ಬಳಿಕ ಬಹುದು ದು |
ರಂತಕಷ್ಟವು ಬಾಲ್ಯದೊಳಗದ ಪೇಳಲೆನಗಳವೆ ||
ಅಂತರಂಗದಿ ಬಯಸಿ ವಸ್ತುವ |
ನಂತವನು ದೊರೆಯದಿರೆ ಮನದಲಿ |
ಚಿಂತಿಸುತಲಳುತಿಹನು ಸತತಂ ಬಾಲ್ಯದಲಿ ನರನು || ೨೦

ನಡೆನುಡಿಯ ಕಲಿತೂರಮಕ್ಕಳ |
ಗಡಣದೊಡನಾಡುತ್ತಲವದಿರು |
ಬಡಿದು ಕೈಕಾಲುಡಿದುಹಲುಗಳುಕಳಚಿ ಸಾರುತಿರೆ ||
ಪಡೆದವರು ಮನದೊಳಗೆ ಭಾವಿಸಿ |
ಸಡಗರದಿ ಗುರುಸದನಕಾಗಲು |
ಬಿಡದೆ ನೂಕಲು ಕಷ್ಟಪಡುವನು ಗುರುನಿಕೇತನದೆ || ೨೧

ಭೂತಳದೊಳಬ್ದಗಳು ಪದಿನೈ ।
ದೀತೆರದಿ ಕಳೆದೊಡನೆ ಚೇತೋ ।
ಜಾತನಗ್ನದ ಶರಕೆ ಗುರಿಯಾಗೊಡಲನೆರೆಯೊಡ್ಡಿ ॥
ಸೋತು ನಾರಿಯರುರುಬೆಯಲಿ ಮನ ।
ಕಾತರಿಸುತುನ್ಮತ್ತನಾಗಿಹ ।
ರೀತಿಯಲಿ ತಿರುಗುವನು ಮನುಜನು ಯೌವನದಿ ಬಿಡದೆ ॥

ಕುಳಿಯೊಳಾನೆಯು ಬಿದ್ದು ನೆರೆ ಶೃಂ ।
ಖಲವ ಪದದಲಿತಾಳ್ದ ತೆರದೊಳು ।
ಲಲನೆಯೊಬ್ಬಳತಂದು ಪಡೆದವರೊಲಿದು ಗಂಟಿಕ್ಕಿ ॥
ಬಳಿಕ ಮಕ್ಕಳ ಪಡೆಯುತವದಿರ ।
ನೊಲಿದು ಪಾಲಿಸಲರ್ಥನಿಚಯವ ।
ಗಳಿಸಲೋಸುಗ ಪರರ ಸೇವೆಸಿ ತೊಳಲಿ ಬಳಲುವನು ॥

ಸತಿಸುತರ ಪಾಲಿಸುತ ಮುಂದಣ ।
ಗತಿಯನರಿಯದೆ ಬಂಧುವರ್ಗವು ।
ಮೃತಿಯನೈದಲು ದುಃಖಸಾಗರದೊಳಗೆ ಮುಳುಗುತಲಿ ॥
ಸತತ ವಿತ್ತಾರ್ಜನೆಗೆ ಚಿಂತಿಸಿ ।
ಮತಿವಿಕಳನಾಗುತ್ತ ತಿರುಗುವ ।
ನತಿಶಯದ ಸೌಖ್ಯವಿದು ಕೌಮಾರದಲಿ ಮನುಜನಿಗೆ ॥ ೨೫

ಅಳಿಯೆ ಜೌವನ ಬಳಿಕ ವಾರ್ಧಿಕ ।
ಬಲುಮೆಯಿಂದಾವರಿಸಿ ಕೊಳ್ಳಲು ।
ಗಳಿಸಿದರ್ಥಗಳಡಗಿ ಕರಣಾದಿಗಳು ಸಲೆಯುಡುಗಿ ॥
ಅಳಲಿ ಬೆದಬೆದಬೆಂದು ತಾನತಿ ।
ಬಳಲಿ ಬೆಂಡಾಗುತ್ತ ಮನದಲಿ ।
ತೊಳಲುತಿಹುದೇಸೌಖ್ಯ ಮನುಜಗೆ ಮುಪ್ಪಿನೊಳಗೆಂದ ॥ ೨೬

ಮುದದೊಳೆಳಸಿದ ತಿನಿಸ ಮೆಲ್ಲಲು |
ರದನ ವಿಲ್ಲದೆಯುಳಲಿ ಬಳಿಕತಿ
ಮೃದುವೆನಿಪ ವಸ್ತುಗಳ ತಿಂದೊಡಜೀರ್ಣಮಡಿಸಿರಲು ||
ಎದೆಯೊಡೆಯೆ ಕೆಮ್ಮುತ್ತ ತನ್ನಯ |
ಸುದತಿ ಪುತ್ರರು ಕಂಡಸಹ್ಯದಿ |
ಬದುಕಸುಡುಸುಡೆನುತ್ತ ಜರೆಯಲು ಮನದಲಳಲುವನು || ೨೭

ಉಡುಗೆ ಕೈಕಾಲುಗಳು ರೋಗಗ |
ಳಡಸಿ ತನ್ನನು ಕಣ್ಣು ಕಾಣದೆ |
ಮಡದಿ ಮಕ್ಕಳನೆಲ್ಲ ಪೀಡಿಸಿ ಮಲಗಿಶಯ್ಯೆಯಲಿ ||
ನುಡಿಯಲಸದಳವಾಗಿ ಕಂಠವ |
ನಡಸಿಬರೆಕಫ ಮನದಿ ಕೊರಗುತ |
ಬಿಡುವನತಿ ಕಷ್ಟದಲಿ ಜೀವವನಿಂತು ಮಾನವನು || ೨೭

ಇಂತು ಜನನಿಯ ಗರ್ಭವಾಸದಿ |
ನಂತವನು ತಾಪಡೆವದಿನ ಪ |
ರ್ಯಂತ ತಪ್ಪದೆ ಬರ್ಪ ಬಹುವಿಧ ಕಷ್ಟ ಸಂಕುಲವ ||
ಅಂತಿರುವ ಭವವಿದನು ಕೇಳ್ಕೆ |
ಶಾಂತರೂಪನೆ ತನಗೆ ತಪ್ಪಿಸಿ |
ಸಂತಸದಿ ಪೊರೆಯೆಂದು ಬೇಡಿದನಾಸನಂದನನು || ೨೮

ಪರಮಪುರುಷನೆ ಕೇಳು ಸಾಸಿರ |
ವರುಷ ಪರಿಯಂತರವು ತಪ್ಪದೆ |
ವರುಷವದುವರ್ಷಿಸಲು ಸಾಗರದೊಳಗೆ ಫಲಮುಂಟೆ ||
ನೆರೆ ಮರುಸ್ಥಲದೊಳಗೆ ದಿನವೊಂ |
ದಿರದೆ ಸುರಿದೊಡೆ ಸಫಲಮಾಗುವ |
ತೆರದಿ ದೀನೆಂಗೆನಗೆ ನೀಂ ಕರುಣಿಸಲು ಫಲಮುಹುದು|| ೨೯

ತರಣಿಪುರ ಚಂದ್ರಮನಪಟ್ಟಣ |
ಸುರಪತಿಯ ಮಂದಿರವು ಮತ್ತಾ |
ಹರಿನಿಕೇತನ ಯಮನನರಗೃಹ ನಿರುತಿಯಾಸ್ಥಾನ ||
ವರುಣ ವಾಯು ಕುಬೇರ ಶಂಕರ |
ರುರುತರದ ಲೋಕಗಳ ಲಕ್ಷ್ಯಕೆ |
ತರದ ವಿರತಿಯನೀವ ತತ್ವವ ಕರುಣಿಸುವುದೆನಗೆ ||

ಘನತರಾದ್ವೈತಾಖ್ಯ ರುಚಿಯಿಂ |
ಜನಿ ಮರಣವೆಂದೆಂಬ ಕತ್ತಲೆ |
ಯನು ನಿವಾರಿಪ ಯೋಗಿಹೃತ್ಸರಸಿಜವನರಳಿಸುವ ||
ಅನುವಿನಿಂ ಜೀವಾತ್ಮರೆನಿಸುವ |
ವಿನುತ ಕೋಕಂಗಳನು ಕೂಡಿಪ |
ದಿನಕರನೆ ನೀನೊಲಿದು ರಕ್ಷಿಪುದೆನ್ನ ಕರವಿಡಿದು ||

ಯೋಗಿಹೃದಯಚಕೋರಕತಿಶಯ |
ರಾಗವನು ಬೀರುತ್ತ ಪರಮವಿ |
ರಾಗಿಗಳ ಸುಜ್ಞಾನದೃಕ್ಕೈರವವ ನರಳಿಸುವ ||
ಆಗಮಾಂಭೋನಿಧಿಯನತುಳಸ |
ರಾಗದಿಂ ಪೆರ್ಚಿಸುವ ಮೃಗಧರ |
ಪೋಗಲಾಡಿಸು ತಮವನದ್ವೈತಾಖ್ಯ ಕೌಮುದಿಯಿಂ ||

ಘೋರತರವೆಂದೆನಿಪ ಬಹುಸಂ |
ಸಾರಬಂಧನದುಃಖಪಾರಾ |
ವಾರವನು ದಾಂಟಲ್ಕೆ ನಿನ್ನಯ ಕರುಣವೆಂದೆನಿಪ ||
ಚಾರುತರಣಿಯ ನೊಂದನಲ್ಲದೆ |
ಬೇರೆ ಸಾಧನವರಿಯೆ ಕೃಪೆಯನು !
ತೋರಿ ತನ್ನನು ಪೊರೆಯಬೇಹುದೆಸುತ್ತ ಕೈಮುಗಿದ ||

ಎಂದು ಬೇಡುತ್ತಿರಲು ಕರುಣಾ |
ಸಿಂಧು ನೋಡುತ ಮನದೊಳೀತನು |
ಮಂದರೋದ್ಧರನೆಂದು ತಿಳಿದತಿಸಂತಸವ ತಳೆದು ||
ಅಂದವಹ ತುರ್ಯಾಶ್ರಮುವನಾ |
ನಂದಮಿಗೆ ಕರುಣಿಸಲು ಬಳಿಕ ಸ |
ನಂದನನು ನಮಿಸಿದನು ಭಗವತ್ಪಾದಗತಿಮುದದಿ || ೩೪

ಇಂತು ಜಗವನು ಪೊರೆವಲಕ್ಷ್ಮೀ |
ಕಾಂತನಾ ಸನ್ಯಾಸಧರ್ಮವ |
ನಾಂತುಶಂಕರಪಾದಪದ್ಮವ ಭಜಿಸುತಿರುತಿರಲು ||
ಕಂತುಮಥನನ ಚರಣಸೇವೆಯ |
ಸಂತಸದಲೆಸಗುತಲೆ ತನ್ನಯ |
ಚಿಂತಿತಾರ್ಥವ ಪಡೆಯಲ್ಕೈದಿದನಾಗಸುರಗುರುವು || ೩೫

ಬಂದು ಧಿಷಣನು ನಮಿಸುತಾ ಬಾ |
ಲೇಂದು ಮೌಳಿಯನುತಿಸುತಾತನ |
ಬಂಧುರಪ್ರೀತಿಯಲಿ ತಾನಾನಂದಗಿರಿಯೆನಿಸಿ ||
ದಂದುಗವನೀಡಾಡಿ ನೆರೆಭವ |
ಬಂಧನವ ಪರಿಹರಿಪ ಪರಮಾ |
ನಂದಕರತುರ್ಯಾಶ್ರಮುವ ಕೈಕೊಂಡನೊಲವಿನಲಿ || ೩೬

ಬಳಿಕಲಾ ಸುರವರರು ಸಮ್ಮುದ |
ಪುಳಕಿತರು ತಾವಾಗಿ ಶಂಕರ |
ಲಲಿತಪದಪಂಕೇರುಹಂಗಳನೊಲಿದು ಸೇವಿಸಲು ||
ಕಲಿಕು ಕಾಶೀಪುರದೆ ಮರ್ತ್ಯರ |
ಲಲಿತ ರೂಪವನಾಂತು ಶಂಕರ |
ನೊಲವ ಪಡೆಯುತ ಶಿಷ್ಯರಾಗಿರುತಿರ್ದರತಿಮುದದಿ || ೩೭

ಹರನು ತುಹಿನಾದ್ರಿಯಲಿ ಪಿಂತಾ ।
ವರವಟದ ಮೂಲದಲಿ ಕುಳ್ಳಿ ।
ರ್ದುರುತರದ ಸುಜ್ಞಾನಬೋಧೆಯ ನೆಸಗುತಿರಲಂದು ॥
ಭರಿತ ಭಯಭಕ್ತಿಯಲಿ ಲಾಲಿಸಿ ।
ಪರಮ ಸಂಭ್ರಮವಾಂತ ಮುನಿಗಳು ।
ನರನ ರೂಪಿನಹರನ ಭಕ್ತಿಯಲಿಂದು ಸೇವಿಪರು ॥ ೩೮

ಮೌನದಲಿ ತಾನಿರ್ದ ವರಸು ।
ಜ್ಞಾನ ಮುದ್ರೆಯ ತೋರುತದ್ವೈ ।
ತಾನುಸಂಧಾನವನು ಬೋಧೆಯಗೈದತಾನಂದು ॥
ಮೌನವನು ನೆರೆತೊರೆದು ವರಸು ।
ಜ್ಞಾನಮಾರ್ಗವ ಶಿಷ್ಯವರ್ಗಕೆ ।
ಸಾನುರಾಗದೊಳಿಂದು ಬೋಧಿಸುತಿರ್ದ ಶಂಕರನು ॥ ೩೯

ಕಿರಣಗಳ ಮಧ್ಯದಲಿ ರಂಜಿಪ ।
ತರಣಿಮಂಡಲದಂತೆ ಮೇಣಾ ।
ಸುರರ ಮಧ್ಯದೊಳೆಸೆವ ವರಪರಮೇಷ್ಠಿಯಂದದಲಿ ॥
ಚರಣಕಾನತರಾಗಿ ನುತಿಸುವ ।
ಪರಮಶಿಷ್ಯರ ನೆರವಿಯೊಳಗಾ ।
ಸುರನುತಶ್ರೀಕಂಠನಿರ್ದನು ವಾರಣಾಸಿಯಲಿ ॥ ೪೦

ಸಂಧಿ ೧೪ಕ್ಕೆ ಪದ್ಯ ೫೪೮ಕ್ಕೆ ಮಂಗಳ





ಶ್ರೀಶಂಕರರಿಗೆ ವಿಶ್ವೇಶ್ವರನು ಪುಲ್ಕಸವೇಷದಿಂದ ದರ್ಶನವನ್ನು ಕೊಟ್ಟುದು.

# ಹದಿನೈದನೆಯ ಸಂಧಿ.

---

ಸೂಚನೆ॥ ಹರನಿರೂಪವನಾಂತು ಭಾಷ್ಯವ।
ವಿರಚಿಸುವೊಡಾ ಬ್ರಹ್ಮಸೂತ್ರಕೆ।
ಪರಮಯತಿಯೈತಂದು ಹೊಕ್ಕನು ಬದರಿಕಾಶ್ರಮವ॥

ಕೇಳಿ ಶೌನಕಮುಖ್ಯ ಮುನಿಗಳು।
ಫಾಲನೇತ್ರನು ತನ್ನ ಶಿಷ್ಯರ।
ಮೇಳದಿಂದೊಡಗೂಡಿ ವಾರಾಣಸಿಯ ಪುರದೊಳಗೆ॥
ಲೀಲೆಯಿಂದದ್ವೈತತತ್ವವ।
ಪಾಲಿಸುತಲಾ ಶಿಷ್ಯವರ್ಗಕೆ।
ಮೇಲೆನಿಪ ಸೌಖ್ಯಗಳನೊದವಿಸುತಿರ್ದ ನೊಲವಿನಲಿ॥ ೧

ಇರುತಿರಲು ಬಳಿಕೊಂದುದಿನವಾ।
ಹರನು ಶಿಷ್ಯರುವೆರಸಿ ಗಂಗಾ।
ವರನದಿಯ ತೀರದಲಿ ವಿರಚಿಸಿ ಯತಿಯಧರ್ಮಗಳ॥
ಬರುತಿರಲು ಮಾರ್ಗದಲಿ ಶಂಕರ।
ವರಯತಿಯ ಸನಿಹಕ್ಕೆ ಬಂದನು।
ಮೊರೆವ ನಾಯ್ಗಳ ಗಡಣದಿಂದಲದೋರ್ವ ಪುಂಸ್ಕಲನು॥ ೨

ಸಾರಮೇಯಗಳೊಡನೆ ಸನಿಹಕೆ।
ಸಾರುತಿಹ ಚಂಡಾಲನಿರವನು।
ಪಾರಿಕಾಂಕ್ಷಿಪ್ರವರ ನೀಕ್ಷಿಸುತೊಡನೆ ಬೆರಗಾಗಿ॥
ದೂರ ನಡೆ ನಡೆ ದೂರವೆನ್ನುತ।
ಸಾರುತಿರಲದ ಕೇಳಿ ಬಳಿಕಾ।
ಕ್ರೂರರೂಪವನಾಂತ ಮಾಯಾಶ್ವಪಚ ನಿಂತೆಂದ॥ ೩

ಯತಿವರೇಣ್ಯನೆ ಪೇಳುನೀನೆಂ ।
ದತಿಶಯೋಕ್ತಿಯದೇನದಾರನು ।
ಮತಿವಿದನೆ ನಡೆದೂರವೆನ್ನುತಪೇಳ್ದಿನೀನೀಗ ॥
ಪೃಥಿವಿ ಮೊದಲೆನೆ ಪಂಚಭೂತ ।
ಪ್ರತತಿ ಮಯವೆಂದೆನಿಪ ದೇಹವೊ ।
ಹತಿಯನೈದದ ಪರಮವಸ್ತುವೊ ದೂರನಡೆಯುವುದು ॥

ತನುವಿದನು ನಡೆದೂರವೆಂಬೊಡೆ ।
ಸನುಮತವೆ ಜಡದೇಹವಿದುತಾ ।
ನನುವಿನಿಂಪೋಗುವೊಡೆಶಕ್ತಿಯನೆಂತುತಾಳಿಹುದು ॥
ಘನಮಹಿಮನೀಪೇಳು ಚಿನ್ಮಯ ।
ನೆನಿಸುವಾತ್ಮನ ಸಾರುನೀನೆಂ ।
ದೆನಲು ಸಾರುವನೆಂತು ದೂರಕೆ ಸಕಲಪರಿಪೂರ್ಣ ॥

ಅನ್ನಮಯವೆಂದೆನಿಪ ದೇಹದಿ ।
ಭಿನ್ನಭಾವನೆಯೇಕೆ ಪೇಳ್ಸಂ ।
ಪನ್ನಯತಿವರ ನೀನುನಾನೆಂದೆಂಬತೋರ್ಕೆಯಿದು ॥
ನನ್ನಿಯಹುದೇ ಜಗದೊಳಗೆ ನಿ ।
ರ್ಭಿನ್ನವಹಪರವಸ್ತು ವೊಂದಿರ ।
ಲಿನ್ನು ದೂರಕೆ ಗಮಿಸುವುದು ತಾನೆಂತು ಪೇಳೆಂದ ॥

ಪರಮವೇದಾರ್ಥಗಳದಾವುದ ।
ಪುರುಷನಾತ್ಮನು ಸತ್ಯರೂಪನು ।
ವರನಿರಂಜನ ಸಂಗಹೀನನು ಪರಮನಿರ್ಗುಣನು ॥
ಭರಿತತೇಜನಭಿನ್ನನೆನ್ನುತ ।
ಲೊರಲುತಿರಲಾ ಬ್ರಹ್ಮವಸ್ತುವಿ ।
ಗಿರದೆ ನೀಂಭೇದವನು ಕಲ್ಪಿಪುದಚ್ಚರಿಯು ಜಗದೆ ॥

ಧರಿಸಿರುವೆ ಕಾಷಾಯವಸ್ತ್ರವ |
ಕರದೊಳಿರ್ಪುದುದಂಡ ಶಿಷ್ಯರ |
ನಿರವಿಗತಿ ಮುದದಿಂದಲದ್ವೈತನು ಬೋಧಿಸುವೆ |
ಪರಮನನುವಂಚಿಸುತ ದೇಹವ |
ನಿರದೆ ನಾನೆಂದೆಂಬ ಭಾವದೊ |
ಳಿರುವೆ ನೀಸನ್ಯಾಸಿವೇಷವನಾಂತು ಕಪಟದಲಿ || ೮

ಎನಲು ಕೇಳುತಲಾಗ ಶಂಕರ |
ಮನದೊಳಚ್ಚರಿವಡುತ ಭುವನದೊ |
ಳಿನಿತು ತತ್ವವ ಬಲ್ಲ ಪುಂಸ್ಕಲನುಂಟೆ ಭಾವಿಸಲು ||
ಅನುವಿನಿಂದದ್ವೈತಸುಧೆಯನು |
ಮನದೊಳೀಂಟುವನಾವನಾತನೆ |
ಘನಮಹಿಮನೆಂದೆನುತ ಭಾವಿಸಿ ನುಡಿದನಿಂತೆಂದು || ೯

ಲಾಲಿಸೈ ನರವರನೆ ಲೌಕಿಕ |
ಶೀಲದಲಿ ವರ್ತಿಪುದು ಧರ್ಮವ |
ಪಾಲಿಸುವ ಹದನಹುದಿದೆಂಬುದು ಸುಪ್ರಸಿದ್ಧವಲೆ ||
ಮೇಲೆನಿಪ ನಿನ್ನತುಳಮಹಿಮೆಗೆ |
ತಾಳಿದೆನು ಸಂಭ್ರಮವ ಚಿತ್ತದಿ |
ಪೇಳುವೆನು ನಿನಗೀಗಲೆನ್ನಯಮತಿಯ ನಿಶ್ಚಯವ || ೧೦

ಕನಸುಮೇಣೆಚ್ಚರ ಸುಷುಪ್ತಿಗ |
ಳೆನಿಪವಸ್ಥಾತ್ರಯದಿ ರಂಜಿಸು |
ತನುವಿನಿಂ ತನುಗಳಲಿ ಬೆರೆಯುತ ಸಾಕ್ಷಿರೂಪದಲಿ ||
ಮಿನುಗುತಿಹಸುಜ್ಞಾನ ತಾನೆಂ |
ದೆನುತ ಮೇಣೀದೃಶ್ಯತಾನ |
ಲ್ಲೆನುತ ತಿಳಿದವನಾವನಾಗಲಿ ಜಗಕೆ ಗುರುವಹನು || ೧೧

ಪರಮವಸ್ತುವೆ ತಾನು ಮೋಹಿ |
ಧರೆಯು ಚಿನ್ಮಾತ್ರದಲಿ ವಿಸ್ತರ |
ವೆರೆಸಿದಂತಿರೆ ತೋರುವುದು ಗುಣಮಯದವಿದ್ಯೆಯಲಿ ||
ನಿರತವೆಂಬುದನರಿದು ದೃಢದಲಿ |
ಪರಮ ನಿರ್ಮಲ ನಿತ್ಯವಸ್ತುವ |
ಬೆರದಿಹನು ತಾನಾವನಾತನೆ ಜಗಕೆ ಗುರುವಹನು || ೧೨

ಭೂರಿ ಜಗವಿದನಿತ್ಯವೆಂಬುದ |
ನಾರು ಗುರುಮುಖದಿಂದಲರಿದು ವಿ |
ಕಾರವಿರಹಿತವೆನಿಪ ಪರವಸ್ತುವನು ಭಾವಿಸುತ ||
ದೂರಗೈದಭಿಮಾನವೆಲ್ಲವ |
ಸಾರತರಸುಜ್ಞಾನ ಶಿಖಿಯಲ |
ಪಾರ ಪಾಪಂಗಳನು ದಹಿಸುವನವನೆ ಗುರು ಜಗಕೆ || ೧೩

ಆವ ವಸ್ತುವನಾತ್ಮವೆಂದೇ |
ಭಾವಿಪರೊ ಸುರನರರುಪಶುಗಳ |
ದಾವ ಪರವಸ್ತುವಿನ ತೇಜೋಬಲದಿ ಕರಣಗಳು ||
ತಾವು ಪಡೆದವೊ ಸಕಲಶಕ್ತಿಯ |
ನಾವಿಮಲ ವಸ್ತುವನು ತಿಳಿದವ |
ನಾವನಾಗೆಲಿ ಗುರುವು ಜಗಕವನೆಂಬುದೆನ್ನಮತ || ೧೪

ಆರ ಸಹಜಾನಂದವಾರ್ಧಿತು |
ಷಾರಮಾತ್ರದಿ ಸುರಪಮುಖ್ಯರ |
ಪಾರಸಂತುಷ್ಟಿಯನು ಪಡೆದಿಹರಾವ ವಸ್ತುವನು ||
ಸೇರಿಸುತ ಚಿತ್ತದಲಿ ಯೋಗಿಯ |
ಪಾರವೆನಿಪಾಬ್ರಹ್ಮಸೌಖ್ಯವ |
ಸೇರುವನೊ ತಾನದನು ತಿಳಿದವ ಜಗಕೆ ಗುರುವಹನು || ೧೫

ಮತಿಯೊಳಿದ ನಿಶ್ಚಯಿಸಿಕೊಂಡಿಹೆ |
ಮತಿವಿದನೆ ಕೇಳೆನುತ ಶಂಕರ |
ಯತಿವರನು ಪೇಳಲ್ಕೆ ಕೇಳುತಲೊಲಿದು ತಲೆದೂಗಿ ||
ಕೃತಕರೂಪವನುಳಿದು ಗಿರಿಜಾ |
ಪತಿಯು ಯತಿಪತಿಯನ್ನು ಪೊಗಳುತ |
ಅತಿಶಯದ ಸಂಪ್ರೀತಿಯಿಂದಲೆ ನಿಂದನಿದಿರಿನಲಿ || ೧೬

ತರಣಿಬಿಂಬಸಹಸ್ರತೇಜೋ |
ಭರಿತವಹ, ವರಸುಪ್ರದೇಶದ |
ವರಕವಾಟವ ತೆರೆದ ಪರಿಯಲಿ ಬೆಳಕುಪಸರಿಸಲು ||
ಮೆರೆವ ತೇಜೋರಾಶಿ ಮಧ್ಯದ |
ಉರುಮಹೋಕ್ಷವ ನೇರಿ ರಂಜಿಪ |
ಪರಶಿವನ ವರವಿಶ್ವನಾಥನ ಕಂಡನಾ ಯತಿಪ || ೧೭

ಪರಮನನು ಪರಮಾತ್ಮನನು ನೆರೆ |
ಪರಕೆ ಪರತರನೆನಿಪ ಶಿವನನು |
ವರನಿಗಮವಂದಿತನ ನಗಜಾಲೋಲ ಶಂಕರನ ||
ಸುರವರಾರ್ಚಿತಪಾದಪೀಠನ |
ನೆರೆ ಚರಾಚರಭರಿತನಾಗಿಹ |
ಹರನ ಸದ್ಯೋಜಾತರೂಪನ ಕಂಡನಾ ಯತಿಪ || ೧೮

ರೂಪರಸಗಂಧಾದಿವಿಷಯ ವಿ |
ರೂಪನನು ಶಂಕರನ ಭವನಿ |
ರ್ಲೇಪನನು ನಿರ್ದ್ವಂದ್ವ ನಿರ್ಗುಣನೆನಿಪ ಪಶುಪತಿಯ ||
ರೂಪರಹಿತನ ಬಹು ಚರಾಚರ |
ರೂಪಿನೊಳು ಚೈತನ್ಯನಾದ ವಿ |
ರೂಪಲೋಚನ ವಾಮದೇವನ ಕಂಡನಾ ಯತಿಪ || ೧೯

ಮಾರವೈರಿಯ ನತುಲ ಸುಜನೋ |
ದ್ಧಾರಿಯನು ನಿಗಮಾಗಮಾರ್ಚಿತ |
ಚಾರುತರ ಚರಣಾರವಿಂದನ ನಮಿತ ಮಹಿಮನನು ||
ಪಾರಿಕಾಂಕ್ಷಿಪ್ರವರ ಚಿತ್ತ ವಿ |
ಹಾರಿಯನು ಭುಜಗೇಂದ್ರ ಭೂಷನ |
ಮೇರುಕೋದಂಡನನಘೋರನ ಕಂಡನಾ ಯತಿಪ ||

ಪರಮಪುರುಷನ ಪುಣ್ಯರೂಪನ |
ನುರುದಯಾನ್ವಿತ ಶಿವನ ಮೃಗಧರ |
ಧರನ ಗಂಗಾಧರನ ನಮಲ ಬ್ರಹ್ಮವಿಗ್ರಹನ ||
ಗಿರಿಶನನು ಗಿರಿರಾಜತನಯಾ |
ವರನ ರವಿಶಶಿಯಗ್ನಿನೇತ್ರನ |
ಪರಮ ಘನತತ್ಪುರುಷ ಶಿವನನು ಕಂಡನಾ ಯತಿಪ ||

ಕಾಲಕಾಲನ ಸಕಲ ಸುರಕುಲ |
ಮೌಳಿಮಂಡಿತಚರಣನನು ವರ |
ಶೂಲಡಮರುಗಹರಿಣದ್ರುಹಿಣಕಪಾಲಹಸ್ತನನು ||
ಫಾಲನೇತ್ರನ ಪುಣ್ಯಗಾತ್ರನ |
ಕಾಲಕಂಠನ ಕಲುಷದೂರ ಸು |
ಶೀಲ ಪರಮೇಶಾನಶಿವನನು ಕಂಡನಾ ಯತಿಪ ||

ಪುಂಡರೀಕಾಜಿನಧರನ ಪದ |
ಪುಂಡರೀಕವ ಕಂಡು ನಿಜಹೃ |
ತ್ಪುಂಡರೀಕದೊಳಮಲ ಭಕ್ತಿಯನಾಂತು ಹರುಷದಲಿ |
ಖಂಡಶಶಿಧರಚರಣಕಮಲಕ |
ಖಂಡವಿನಯದೊಳೆರಗಿ ಶಿಷ್ಯರ |
ತಂಡ ಸಹಿತಾ ಯತಿಪನುತಿಸಿದನಾಗ ಶಂಕರನ ||

ಜಯನಮೋಜಗದಾದಿರೂಪನೆ |
ಜಯನಮೋಜಗದೇಕದೇವನೆ |
ಜಯನಮೋಜಗದೇಕರಕ್ಷಾಮಣಿಯೆ ಗುಣಮಣಿಯೆ ||
ಜಯನಮೋಜಗದೇಕವಂದ್ಯನೆ |
ಜಯನಮೋಜಗದಂತ್ಯರೂಪನೆ |
ಜಯನಮೋಜಗದೇಕವಲ್ಲಭ ಶಿವನಮೋಜಯತು || ೨೪

ವೇದಮಯ ವೇದಾತ್ಮ ದುರಿತಾಂ |
ಬೋಧಿವಾಡಬ ಸತ್ಯರೂಪನೆ |
ವೇದಶೀರ್ಷವಿಭೂಷಚರಣನೆ ವೇದವಿಗ್ರಹನೆ ||
ಆದಿತೇಯಾರಾಧಿತನೆ ಜಗ |
ದಾದಿಮಧ್ಯಪ್ರಳಯಕಾರಣ |
ನಾದಬಿಂದುಕಲಾವಿಶೇಷಾತೀತ ಜಯಜಯತು || ೨೫

ವರರಜೋಗುಣದಿಂದ ಜಗವಿದ |
ನೆರೆ ರಚಿಸಿ ವರಸತ್ವಗುಣದಿಂ |
ಪೊರೆದು ಮತ್ತದನುರುತಮೋಗುಣದಿಂದ ಸಂಹರಿಸಿ ||
ಬೆರೆದ ಪರಿಯಲಿ ತೋರಿ ಜಗದೊಳು |
ಬೆರೆಯದಳಿಯದ ಶುದ್ಧ ನಿರ್ಗುಣ |
ಪರತರಾತ್ಮನೆ ವರಪರಂಜ್ಯೋತಿಯೆ ನಮೋಜಯತು || ೨೬

ಪರ ಪರಮ ಪರಮಾತ್ಮ ಪರಮೇ |
ಶ್ವರ ಪರಬ್ರಹ್ಮೈಕ ವಿಗ್ರಹ |
ಪರಮಪಾವನ ಪರಮನಿಸ್ಪೃಹ ಪರತರಾನಂದ ||
ಪರಮಹಂಸನೆ ಪರಮಶಾಂತನೆ |
ಪರಮತರ ನಿತ್ಯಾತ್ಮ ಪರಶಿವ |
ಕರುಣಿಪುದು ನೀನೆಂದು ಪೊಡಮಡುತಿರ್ದನಾ ಯತಿಪ || ೨೭

ಎಂದು ಸಮ್ಯಜ್ಞಾನ ವಚನಗ |
ಳಿಂದ ನುತಿಸುತ ನಮಿಸುತಿರೆ ಬಾ |
ಲೇಂದು ಮೌಳಿಯು ನೋಡಿ ಕರುಣಾಪಾಂಗದಲಿ ಯತಿಯು ||
ಬಂಧುರಪ್ರೀತಿಯಲಿ ತಕ್ಕಿಸು |
ತಂದಮಿಗೆ ವೈದಡವಿ ನಗುತಿಂ |
ತೆಂದು ನುಡಿದನು ವರಗುಹಾಗ್ರಜತಾತ ನೀಮಾತ || ೩೮

ಕೇಳು ಯತಿಪವರೇಣ್ಯ ಲಕ್ಷ್ಮೀ |
ಲೋಲ ಜಗದೊಳು ಜನಿಸಿ ಮುನಿಕುಲ |
ಮೌಳಿವೇದವ್ಯಾಸನಾಮದಿ ವೇದಭಾಗವನು ||
ಲೀಲೆಯಿಂದಲಿಗೈದು ಬಹುಳವಿ |
ಶಾಲಕೀರ್ತಿಯ ತಳೆದು ಲೋಕವ |
ಪಾಲಿಸಿದ ರೀತಿಯಲಿ ನೀವರಸೂತ್ರಭಾಷ್ಯವನು || ೩೯

ವಿರಚಿಸುತಲದ್ವೈತತತ್ವದ |
ಪರಮಸಿದ್ಧಾಂತವನು ಬೋಧಿಸು |
ತುರುತರದ ಸುಜ್ಞಾನಕಾಂಡವ ಪೊರೆದು ನಾಸ್ತಿಕರ ||
ಪರಿಭವಿಸಿ ದುರ್ಮತವನೇಕವ |
ನೆರೆವಿಭಾಡಿಸುತೇರಿ ಮೆರೆವುದು |
ಸುರುಚಿರದ ಸರ್ವಜ್ಞಪೀಠವನೆಂದು ಹರನುಡಿದ || ೪೦

ಖಂಡಪರಶುವಿನುಕ್ತಿಗಳ ತಾ |
ಮಂಡೆಯೊಳುಧರಿಸುತ್ತ ಮುದದಿಂ |
ಪಂಡಿತಾಗ್ರಣಿ ನಮಿಸೆ ಬಹುಮುದವಾಂತು ಮನದೊಳಗೆ ||
ಚಂಡಕಿರಣಸಹಸ್ರತೇಜನ |
ಖಂಡಮಹಿಮ ಪರಾತ್ಮ ನಿರ್ಜಿತ |
ದಂಡಧರನೊಲಿದಾಗಲಂತರ್ಧಾನಪರನಾದ || ೪೧

ತೆರಳಲಾ ಶಂಕರನು ಬಳಿಕೀ |
ಪರಮಯತಿಶಂಕರನು ಶಿಷ್ಯರು |
ನೆರಸಿ ಸಂಭ್ರಮವಾಂತು ಗಂಗಾವರತರಂಗಿಣಿಯ ||
ಮೆರೆವಕೂಲದಿ ನಿಂದು ಮುದದಿಂ |
ವಿರಚಿಸಿದನಾಹ್ನಿಕವ ಬಳಿಕಾ |
ಹರನು ನೆನೆದನು ಸೂತ್ರಭಾಷ್ಯವ ವಿರಚಿಸುವತೆರನ || ೨೨

ಬ್ರಹ್ಮವಂದಿತಚರಣ ಪೇಳ್ದಾ |
ಬ್ರಹ್ಮಸೂತ್ರಸುಭಾಷ್ಯವೆಸಿಪಾ |
ಬ್ರಹ್ಮವಿದ್ಯೆಯ ರಚಿಸಿ ಸಕಲ ಬ್ರಹ್ಮಸಂಕುಲವ ||
ಬ್ರಹ್ಮವಿದರಂಗೈದು ವರಸು |
ಬ್ರಾಹ್ಮ್ಯವನು ರಕ್ಷಿಸುವೊಡಮಲ |
ಬ್ರಹ್ಮಪಾರಾಶರ್ಯನಾಶ್ರಮ ಯೋಗ್ಯವಾಗಿಹುದು || ೨೩

ಎನುತ ನಿಶ್ಚಯಿಸುತ್ತ ಬದರಿಯ |
ವನಕೆ ತೆರಳಲು ಶಿಷ್ಯವರ್ಗ |
ಕ್ಕನುಮತಿಯನೀಯುತ್ತ ತಾನಾ ವಾರಣಾಸಿಯನು ||
ವಿನಯದಿಂ ಬೀಳ್ಕೊಂಡು ಸನ್ನುತ |
ಜನಶಿರೋಮಣಿ ಸಕಲ ಬುಧಜನ |
ವನಜದಿನಮಣಿ ಬರುತಲಿರ್ದನು ಬದರಿಕಾಶ್ರಮಕೆ | ೨೪

ಶರಧಿತನುಜನು ಪಶ್ಚಿಮಾಶಾ |
ವರಶಿಲೋಚ್ಚಯದಲ್ಲಿ ತೇಜೋ |
ಭರಿತನೆಸೆದನು ಸಕಲವಿದ್ಯಾಸಾರ್ವಭೌಮಕನು ||
ಬರುತಿರಲು ನೆರೆ ಪಶ್ಚಿಮಾಂಗನೆ |
ಧರಿಸಿದಳು ವರಪುಂಡರೀಕವ |
ಪರುತವದಲೆಂದೆನಲು ಕೇಳ್ಕೈ ಭೃಗುಕುಲೋದ್ಭವನೆ || ೨೫

ಕೆಲವೆಡೆಯೊಳತ್ಯುಷ್ಣವಾಗಿಯೆ ।
ಕೆಲವೆಡೆಯೊಳತಿಶೀತವಾಗಿಯೆ ।
ಕೆಲವೆಡೆಯು ಕುಟಿಲತ್ವ ಮತ್ತತಿ ರುಜುವು ಕೆಲವೆಡೆಯೋಳ್ ॥
ಕೆಲವುಮಾರ್ಗವು ಕಂಟಕಾನ್ವಿತ ।
ಕೆಲವಕಂಟಕವಾಗೆ ಕುಜನರ ।
ಬಳಕೆಯಂತಿಹ ಬಟ್ಟೆಯನು ಮೆಟ್ಟುತಲಿ ನಡೆತಂದ ।

ಸರ್ವಲೋಕಾಧೀಶ ನೆನಿಸುವ ।
ಶರ್ವನಾವಾರ್ಗದಲಿ ಬರುತಲೆ ।
ನಿರ್ವಿಕಾರನು ನಿತ್ಯತೃಪ್ತನು ಫಲವ ಭುಂಜಿಸುತ ॥
ಸರ್ವಶಿಷ್ಯರು ವೆರೆಸಿ ಬಂದನು ।
ಪಾರ್ವತೀಪಿತನೆನಿಪ ಪರ್ವತ ।
ಸಾರ್ವಭೌಮಕ ನೆಡೆಯೊಳೆಸೆವಾ ಬದರಿಕಾಶ್ರಮಕೆ ॥

ತರಣಿರಶ್ಮಿಯು ಸೋಂಕಿ ಕರಗಿದ ।
ವರತುಹಿನಜಲಹರಿದು ಬರುತಿರೆ ।
ಪರಮಶೈತ್ಯವನೊಸೆದು ಬೀರುತ ಗಾಳಿಬೀಸುತಿರೆ ॥
ಇರದೆ ಸುರವರ್ತ್ಮಕದಿನ್ಸೈಕಿಲು ।
ಸುರಿವುತಿರೆ ಸಂತತವು ಪಾಂಥರ ।
ಮರುಗಿಸುತಲೊರಿಗಿಸುತಲಿರ್ದುದು ಬದರಿಕಾಶ್ರಮವು ॥

ಧರೆಯೊಳುತ್ತಮವೆನಿಪ ತಪವನು ।
ಚರಿಪ ಮುನಿಗಳ ಗಡಣದಿಂದಲಿ ।
ಮೆರೆವ ಪಾವನವೆನಿಪ ನರನಾರಾಯಣಾಶ್ರಮದೆ ॥
ವರಸನಂದನಮುಖ್ಯಶಿಷ್ಯರು ।
ವೆರಸಿ ಸಂಭ್ರಮವಾಂತು ಸಂತತ ।
ಸುರನುತ ಶ್ರೀಕಂಠ ಯತಿವರನಿರ್ದ ನೊಲವಿನಲಿ ॥

ಸಂಧಿ ೧೫ಕೆ ಪದ್ಯ ೫೮೭ಕ್ಕೆ ಮಂಗಳ ॥

# ಹದಿನಾರನೆಯ ಸಂಧಿ.

ಸೂಚನೆ || ಪದ್ಮ ಪಾದಾಭಿಖ್ಯೆಯನು ನೆರೆ |
ಪದ್ಮನಾಭಂಗಿತ್ತು ಯತಿಕುಲ |
ಪದ್ಮಪೀಠನು ಬೋಧಿಸಿದನಾ ಸೂತ್ರಭಾಷ್ಯವನು ||

ಕೇಳು ಮುನಿಕುಲಮೌಳಿ ಶಂಕರ |
ಲೀಲೆಯನು ಯತಿಪತಿಯು ಶಿಷ್ಯರ |
ಮೇಳದಿಂದಿರುತಿರ್ದು ನರನಾರಾಯಣಾಶ್ರಮದೆ ||
ಮೇಲೆನಿಸುವಾಬ್ರಹ್ಮಸೂತ್ರವಿ |
ಶಾಲಭಾಷ್ಯವರಚಿಸಿ ಮತ್ತದ |
ಫಾಲನೇತ್ರನು ಬೋಧೆಗೈದನು ಲೋಕಹಿತಮೆನಿಸಿ || ೧

ಬಾದರಾಯಣಮುನಿಯು ದಯದಿಂ |
ಮೇದಿನಿಗೆ ಹಿತವೆನಿಸಿ ಪೇಳಿಹ |
ವೇದನಾಲ್ಕರಸಾರವೆನಿಪಾ ಬ್ರಹ್ಮಸೂತ್ರಗಳು ||
ಬೋಧೆಯಾಗುವತೆರದಿ ತತ್ವದ |
ಹಾದಿಯನು ಬಲ್ಲಿರಿಗೆ ಭಾಷ್ಯವ |
ನಾದಿಶಂಕರನೊಲಿದು ರಚಿಸಿದ ವಿಶದಮೆಂದೆನಿಸಿ || ೨

ವಿವರಮೆನೆ ವೇದಾಂತತಾತ್ಪ |
ರ್ಯವನು ನಿರ್ಣಯಿಸಲ್ಕೆ ಕರುಣದಿ |
ಭುವನವಂದ್ಯಪದಾಬ್ಜಪೀಠನು ಬಾದರಾಯಣನು ||
ಕುವರನಹ ಶುಕಮುನಿಯ ಕರೆದತಿ |
ವಿವರದಿಂದೀಬ್ರಹ್ಮಸೂತ್ರವ |
ನವನತರ ಪಾಲಿಸಲು ವಿರಚಿಸಿದನು ದಯಾವನಧಿ || ೩

ಇದನು ನಾಲ್ಕಧ್ಯಾಯಮೆಂದೆನ |
ಲದರಲೊಂದೊಂದರಲಿ ನಾಲಕು |
ಪದಗಳಿರೆ ಸಾಸಿರದಲರ್ಥವು ಮೇಣ್ಯತಾರ್ಥಕವು |
ಇದರ ಮೇಲಿನ್ನೈದು ಸಂಖ್ಯೆಯು |
ಪದುಳ ಸೂತ್ರಂಗಳನು ವಿರಚಿಸಿ |
ಪದನತಾಮರವೃಂದ ಪಾಲಿಸಿದನು ಜಗತ್ರಯವ ||

ಸದಮಲಾಧ್ಯಯಗಳು ನಾಲ್ಕಕೆ |
ಮೊದಲು ಕೇಳು ಸಮನ್ವಯಾಖ್ಯೆಯು |
ಮದರ ಬಳಿವಿಡಿದಿಹುದು ತಾನವಿರೋಧನಾಮಕವು ||
ಅದು ಕಳೆಯಲಾಬಳಿಕ ಸಾಧನೆ |
ಯುದರ ಬಳಿಯಲಿ ಫಲವು ತಾನೆನೆ |
ವಿದಿತ ಮಾಗಿಹುದಿಂತು ಜೀವಬ್ರಹ್ಮಮೀಮಾಂಸೆ ||

ಅಂದವಹ ವೇದಾಂತ ವಾಕ್ಯಗ |
ಳೊಂದಕೊಂದು ವಿರೋಧವಾಗಿಹ |
ಚೆಂದದಿಂ ತೋರುತ್ತಲಿರಲು ಸಮನ್ವಯುವಗೈದು ||
ಒಂದಕೊಂದು ವಿರೋಧಮಿಲ್ಲೆನಿ |
ಪಂದವನು ತೋರುವುದು ಸೂತ್ರದ |
ಬಂಧುರಪ್ರಥಮಾಖ್ಯಭಾಗವು ವಿಶದಮುಹತೆರದೆ ||

ವರನಿಗಮ ವೇದಾಂತ ವಾಕ್ಯದ |
ನೆರವಿ ಪರಮಬ್ರಹ್ಮವಸ್ತುವ |
ನೊರೆದು ಮತ್ತದರೊಳಗೆ ತಾನು ಸಮನ್ವಯುವದಪ್ಪ ||
ತೆರನ ಬೋಧಿಪ ಸೂತ್ರಭಾಗವು |
ವರಸಮನ್ವಯುವೆಂಬ ನಾಮವ |
ನೆರೆ ಪಡೆದು ರಂಜಿಪುದು ತಾನನ್ವರ್ಥಮಾಗಿರುತ ||

ಶ್ರುತಿಗಳರ್ಥಗಳೊಂದಕೊಂದಾ |
ಸ್ಮೃತಿಗೆ ನಿಗಮದ ವಾಕ್ಯ ಮತ್ತಾ |
ಸ್ಮೃತಿಗಳೊಳು ತಾವೊಂದಕೊಂದು ವಿರೋಧವಾಗಿರುತ ||
ಸ್ಮೃತಿಗೆ ಪೌರಾಣಂಗಳಿಗೆ ಮ |
ತ್ತತಿಶಯ ವಿರೋಧಗಳುತೋರ್ಪಾ |
ಸ್ಥಿತಿಯು ಸಹಜವಿದ್ದೈಸೆ ತಾಂ ಸ್ಥೂಲದಲಿ ಪರಿಕಿಸಲು || ೮

ಇಂತು ತೋರ್ಪ ವಿರೋಧ ಭಾವವ |
ನಂತವನು ಪರಿಹರಿಸಿ ಸುಜನ |
ಸ್ವಾಂತ ಶುದ್ಧಿಯಗೈವ ಸೂತ್ರಗಳೆರಡನೆಯ ಭಾಗ ||
ಆಂತುಕೊಂಡವಿರೋಧನಾಮವ |
ಸಂತಸದಿ ವರ್ತಿಪುದು ಕೇಳೈ |
ಶಾಂತರೂಪನೆ ಮಹಿಮೆಗಳನೀಬ್ರಹ್ಮಸೂತ್ರಗಳ || ೯

ಸಾಧನಾಧ್ಯಾಯದಲಿ ವಿವರಣೆ |
ಯೈದಿಹವು ಜೀವಾತ್ಮರೆಂಬರು |
ಭೇದವಿಲ್ಲದೆ ಬೆರೆವ ಸಾಕ್ಷಾತ್ಕಾರಸಾಧನಕೆ |
ಆದಿಯಹ ಸಾಧನವು ನಾಲ್ಕರ |
ಭೇದ ರೂಪ ಸುಲಕ್ಷಣಂಗಳು |
ಮೋದದಿಂದವನೊರೆವೆ ಲಾಲಿಪುದೆಂದನಾ ಸೂತ || ೧೦

ಪರವಿವೇಕವು ಮೋಕ್ಷವಿರಕ್ತಿಯು |
ನೆರೆ ಶಮಾದಿಗುಣಂಗಳುನ್ನತಿ |
ಪರಮಪುಣ್ಯೋದಯದೆ ದೊರೆಯುವ ವರಮುಮುಕ್ಷತೆಯು ||
ಪರಿಕಿಸಲ್ಸಾಧನ ಚತುಷ್ಟಯ |
ದಿರುವಿಕೆಯನಿದ ನೊಲಿದು ವಿವರಿಪ |
ಪರಿಯನೇವಣ್ಣಿಪೆನು ಸೂತ್ರಾಧ್ಯಾಯ ವಿಸ್ತರವ || ೧೧

ವರತುರೀಯಾಧ್ಯಾಯ ವಿವರಿಪು |
ದುರತರದ ಮೋಕ್ಷ ಸ್ವರೂಪವ |
ಪರಮನಿರ್ಗುಣ ಮೇಣು ಸಗುಣ ಬ್ರಹ್ಮತತ್ವಗಳ ||
ಸುರುಚಿರದ ಮೋಕ್ಷಗಳ ಭೇದವ |
ಪರವಪರವೆನಿಪಾತ್ಮ ವಿವರವ |
ನುರುತರದ ಸಾಯುಜ್ಯಮೋಕ್ಷದ ಪರಿಯ ವಿಸ್ತರದೆ ||

ಇದು ಫಲಾಧ್ಯಾಯಾಖ್ಯೆಯುಲಿ ಸಂ |
ಮುದದಿ ರಂಜಿಪುದೊಲಿದು ಮೋಕ್ಷವ |
ಪದುಳದಿಂದೈದಿದಗೆ ಪುನರಾವೃತ್ತಿಯಿಲ್ಲೆಂದು ||
ಬುಧಜನಕೆ ಬೋಧಿಸುತ ವರ್ತಿಪು |
ದಿದನು ವೇದವ್ಯಾಸಮುನಿಪತಿ |
ಮುದದಲರುಹಿದ ಶುಕಗೆ ತನ್ನಯ ವಂಶಪಾಲಕಗೆ || ೧೨

ಪರಿಕಿಸಲ್ಕಧಿಕರಣಮೆಂತೆನ |
ಲೆರಡುನೂರಕೆ ಕೊರತೆಯೆಂಟೀ |
ಪರಿಯ ಶಾರೀರಕಸುಶಾಸ್ತ್ರಕೆ ಕರ್ತನಾವ್ಯಾಸ ||
ವರಯತೀಶ್ವರನಿದಕೆ ಭಾಷ್ಯವ |
ನೆರೆ ರಚಿಸಿ ಲೋಕವನು ಪೊರೆದನು |
ವರಮುನಿಪ ಶೌನಕನೆ ಲಾಲಿಪುದೆಂದನಾ ಸೂತ || ೧೫

ಭಾರತದ ರಣಮುಹಿಯೊಳಂದಾ |
ಧೀರಪಾರ್ಥಂಗೊಲಿದು ಕೃಷ್ಣನು |
ದಾರವೆನಿಪಾ ಬ್ರಹ್ಮವಿದ್ಯೆಯ ಬೋಧೆಗೈದಿರುವ ||
ಭಾರತಾಮೃತ ಸಾರವೆನಿಸುವ |
ಪಾರಗೀತಾರ್ಥಕ್ಕೆ ಭಾಷ್ಯವ |
ಮಾರವೈರಿಯು ರಚಿಸಿ ಸಲಹಿದನಾ ಮುಮುಕ್ಷುಗಳ || ೧೫




ಶ್ರೀ ಶಂಕರರು ಬ್ರಹ್ಮಸೂತ್ರಭಾಷ್ಯವನ್ನು ಬೋಧಿಸುತ್ತಿರುವ ಭಾವವು

ಖ್ಯಾತನೆನಿಪ ವಿಚಿತ್ರವೀರ್ಯನ |
ಜಾತನಾಧೃತರಾಷ್ಟ್ರ ಭೂಪಗೆ |
ಸಾತಿಶಯದಿ ಸನತ್ಸುಜಾತನು ಬೋಧೆಗೈದಿರುವ ||
ನೀತಿಸಮುದಯಕೊಲಿದು ಭಾಷ್ಯವ |
ಭೂತನಾಥನು ರಚಿಸಿ ತತ್ವದ |
ರೀತಿಯನು ಶಿಷ್ಯರಿಗೆ ಬೋಧಿಸಿದನು ಸರಾಗದಲಿ || ೧೬

ಪರಮ ವೇದಾಂತವನು ಬೋಧಿಪ |
ಸುರುಚಿರದ ಕಠ ಕೇನ ಮುಂಡಕ |
ಮೆರೆವ ಮಾಂಡೂಕ್ಯೇಶತೈತ್ತರಿಯೈತರೇಯಗಳು ||
ಪರಮಬೃಹದಾರಣ್ಯ ಮೊದಲಾ |
ದುರತರದ ಸುಬ್ರಹ್ಮವಿದ್ಯೆಗೆ |
ಹರನು ವಿಸ್ತಾರದಿಂದ ಭಾಷ್ಯವ ರಚಿಸಿದನು ಮುದದೆ || ೧೭

ಇಂತು ಪರಮಾದ್ವೈತ ತತ್ವವ |
ಸಂತಸದಿ ಬೋಧಿಸುವ ತೆರದೊಳು |
ಕಂತುರಿಪು ರಚಿಸಿದನು ಜಗದ ಮುಮುಕ್ಷು ಜನಗಳಿಗೆ ||
ಚಿಂತಿತಾರ್ಥವ ನೀವ ಭಾಷ್ಯವ |
ನೆಂತು ವರ್ಣಿಪೆನದನು ನಾನಾ |
ಶಾಂತರೂಪನ ಪರಮಮಹಿಮೆಯನೆಂದನಾ ಸೂತ || ೧೮

ಪಾರವಿಲ್ಲದ ಪರಮವಸ್ತು ಶ |
ರೀರವಿಲ್ಲದೆಯಚರಸಚರಾ |
ಕಾರದಲಿ ತಾನಿರ್ದು ಕೇವಲ ಸಾಕ್ಷಿಮಾತ್ರವೆನೆ ||
ಭೂರಿ ಜಗದಲಿ ಬೆರೆದು ಬೆರೆಯದೆ |
ತೋರುವುದು ತಾನೆಂಬ ಪರಿಯನು |
ತೋರಿ ಬೋಧಿಸುತಿಹುದು ಶಂಕರ ಭಾಷ್ಯವೀಜಗಕೆ || ೧೯

ಒಂದು ನಿಜಪರವಸ್ತು ಸಹಜಾ ।
ನಂದವಸ್ತುವದೊಂದೆ ಜಗದೊಳ ।
ಗೊಂದುತತ್ವವೆ ಬಹುಳ ರೂಪವನಾಂತು ರಂಜಿಪುದು ॥
ಒಂದು ವಸ್ತುವೆ ಸೃಷ್ಟಿರಕ್ಷಣೆ ।
ಬಂಧಿಸುವ ನಿಧನಕ್ಕೆ ಕಾರಣ ।
ವೆಂದು ಬೋಧಿಸುತಿಹುದು ಲೋಕಕೆ ಭಾಷ್ಯ ಯತಿಪತಿಯ ॥ ೩೦

ಪರಮನೇ ಜೀವಾತ್ಮನಾಗಿಹ ।
ನರಿವೊಡೆರಡಕೆ ಭೇದಭಾವವ ।
ನರಿಯದಜ್ಞರು ಪೇಳುತಿಹರಾ ಮಾತದಂತಿರಲಿ ॥
ತರಣಿ ಬಿಂಬವುತೋರೆ ಜಲದೊಳು ।
ಧರಣಿಗಿಬ್ಬರು ರವಿಗಳುಂಟೆಂ ।
ಬರಿವು ಪುಸಿಯೆಂಬುದನು ಶಂಕರ ಭಾಷ್ಯವಾಚಿಪುದು ॥ ೩೧

ಮೂರೆನಿಪ ಗುಣಗಳಲಿ ಬೆರೆಯದೆ ।
ಮೂರೆನಿಪವಸ್ಥೆಯಲಿ ಬಳಲದೆ ।
ಮೂರೆನಿಪ ತನುಗಳಲಿ ತಾನೆರೆ ಸಾಕ್ಷಿಯಾಗಿರುತ ॥
ಮೂರುಲೋಕವ ಬಳಸಿಕೊಂಡಾ ।
ಮೂರು ಕಾಲದೊಳಿರ್ಪ ಬೊಮ್ಮನ ।
ತೋರಿ ಕೊಡುವುದು ಭಾಷ್ಯವಾ ಶಂಕರಯತೀಶ್ವರನ ॥ ೩೨

ವೇದನಾಲ್ಕರ ಸಾರವನು ವರ ।
ಸಾಧನಂಗಳು ನಾಲ್ಕರಿರವನು ।
ಭೇದವಾಗಿಹ ನಾಲ್ಕುಚಿತ್ತಿನ ತಾರತಮ್ಯಗಳ ॥
ಬೋಧಿಸುತ ಪುರುಷಾರ್ಥ ನಾಲ್ಕರ ।
ಲಾದಿಯಂತ್ಯವನಿತ್ತು ಪೊರೆವುದು ।
ಮೋದದಿಂ ಶಂಕರನ ಭಾಷ್ಯವು ಸತತ ಸಜ್ಜನರ ॥ ೩೩

ಐದು ವಿಷಯಂಗಳನು ಭೋಗಿಸ |
ಲೈದುವಿಂದ್ರಿಯಗಣವ ಜಯಿಸು |
ತ್ತೈದು ಮಾಯಾಲಕ್ಷಣಂಗಳನುಳಿದು ಭಾವದಲಿ ||
ಐದು ಕೋಶಂಗಳಲಿ ತನ್ಮಯ |
ವಾದ ವಸ್ತುವನರಿದು ಮೋಕ್ಷ |
ಕ್ಕೈದುವುದನರಿವುದು ಶಂಕರ ಭಾಷ್ಯ ವೀಜಗಕೆ || ೨೪

ಆರುಹಗೆಗಳ ಗೆಲುವ ಮಾರ್ಗವ |
ನಾರುದರ್ಶನದರ್ಥಸಾರವ |
ನಾರೆನಿಸುವೂರ್ಮಿಗಳ ಜಯಿಸುವ ಮಹಿಮೆಯುನ್ನತಿಯ ||
ಆರು ಚಕ್ರಂಗಳನು ಮೀರುತ |
ಭೂರಿ ಮೋಕ್ಷವ ಪಡೆವ ಸಿದ್ಧಿಯ |
ತೋರಿ ಕೊಡುವುದು ಪರಮಹಂಸನ ಭಾಷ್ಯವವೀಧರೆಗೆ | ೨೫

ವರರುಧಿರ ಮೇದಸ್ಸು ಮಾಂಸವು |
ನೆರೆದ ಮಜ್ಜಸ್ನಾಯು ಶುಕ್ಲವು |
ಪರಿಪರಿಯ ಮೂಳೆಗಳು ತಾವೆನಿಪೇಳು ಧಾತುಗಳ ||
ವರನಿಲಯವೆಂದೆನಿಪ ದೇಹದ |
ಬರಿಯದುರ್ಮೋಹವನು ತೊರೆಯುವ |
ಪರಿಯ ಬೋಧಿಸುತಿಹುದು ಶಂಕರ ಭಾಷ್ಯವವನಿಯಲೀ || ೨೬

ಅಷ್ಟಮದಗಳಗೆಲಿದು ಬಲು ಪಾ |
ಶಾಷ್ಟಕುನುರೆ ಹರಿದು ಬಂಧುರ |
ದಷ್ಟಮಾನಸ ಸಿದ್ಧಿಗಳ ತಾಂ ಪಡೆದು ರಂಜಿಸುವ ||
ಅಷ್ಟಮೂರ್ತಿಯನೊಲಿದು ಪೂಜಿಸು |
ತಿಷ್ಟವನು ನೆರೆಪಡೆವ ಸಿದ್ಧಿಯ |
ನಷ್ಟಭೂತಿಗಳೊಡೆಯ ರಚಿಸಿದ ಭಾಷ್ಯ ಬೋಧಿಪುದು || ೨೭

ತವೆ ನವದ್ವಾರಗಳನಾಂತಿರು |
ವವಯವವು ತಾನೆಂಬ ಭಾವವ |
ನವಿರಳದ ಮೋಹಾಂಧಕಾರವ ಕಳೆವ ರೀತಿಯನು ||
ಕವಿವ ನವನವಜನಿತತಾಪವ |
ಭುವನದಲಿ ಪರಿಹರಿಪ ಮಾರ್ಗವ |
ನವವಿರಿಂಚಿಗಳೊಡೆಯ ರಚಿಸಿದ ಭಾಷ್ಯ ಬೋಧಿಪುದು ||

ಗೆಲಿದು ದಶವಿಧದಿಂದ್ರಿಯಂಗಳ |
ನುಲಿವ ದಶವಿಧನಾದರೂಪನ |
ಲಲಿತಪದಪಂಕೇರುಹಂಗಳ ಬೆರೆವ ರೀತಿಯನು ||
ಕಲಿಮಲವ ನೆರೆಕಳೆದು ತಿಳಿವಂ |
ಸಲೆ ಪಡೆವ ಮಾರ್ಗವನು ಬೋಧಿಪು |
ದೊಲಿದು ಶಂಕರರಚಿತಭಾಷ್ಯವು ಪರಮವಿಭವದಲಿ ||

ಜಗದೊಳೇಕಾದಶದ ಸಂಖ್ಯೆಯ |
ವಿಗಡರುದ್ರರ ರೂಪನಾಂತಿಹ |
ನಗಜೆಯರಸನ ವರಪರಾತ್ಪರನೆನಿಪ ಶಂಕರನ ||
ಮೃಗೆ ಮೃಗಾಜಿನಧರನ ಮೇಣಾ |
ಮೃಗಧರನ ಧರಿಸಿರ್ಪ ಪರಶಿವ |
ನೊಗುಮಿಗೆಯ ತತ್ವವನು ಯತಿಕೃತಭಾಷ್ಯ ಬೋಧಿಪುದು || ೩೦

ಇಂತೆಸೆವ ಭಾಷ್ಯವನು ವಿರಚಿಸಿ |
ಕಂತುಹರನೇಕಾಂತ ಭಕ್ತರ |
ಸಂತತಿಗೆ ಕಾರುಣ್ಯದಿಂದದ್ವೈತ ತತ್ವವನು ||
ಸಂತಸದಿ ಬೋಧಿಸುತಲಿರ್ದನ |
ನಂತ ಮಹಿಮನು ಸಕಲ ಸುಜನ |
ಸ್ವಾಂತಶುದ್ಧಿಯಗೈದು ರವಿಸಂಖ್ಯಾಬ್ದ ವಯಸಿನಲಿ || ೩೧

ಕಡಿಕಡಿದು ಗಾಢಾಂಧಕಾರದ |
ಗಡಣವನು ಜಡಜಾಪ್ತ ನಭದೊಳು |
ಬಿಡದೆ ರಂಜಿಸಿ ಪೊಡವಿಗಾನಂದವನು ಕುಡುವಂತೆ ||
ನೃಪರಚಿತವರಸೂತ್ರಭಾಷ್ಯವು |
ಕಡಿಯುತಜ್ಞಾನಾಂಧಕಾರವ |
ಕುಡುತಿಹುದು ಸುಜ್ಞಾನದೀಪ್ತಿಯ ಸಕಲಸಜ್ಜನಕೆ || ೩೨

ಮರೆಯಮಾಡುವ ಮೋಡಗಳ ಪರಿ |
ಹರಿಸಿ ರವಿಮಂಡಲದ ಕಾಂತಿಯ |
ಧರೆಗೆ ತೋರುವ ಪರಮಪಾವನಪವನನಂದದಲಿ ||
ಪರಿಹರಿಸಿ ವಿಷಯಾಂಬುಧರಗಳ |
ಪರತರಬ್ರಹ್ಮಾಖ್ಯತರಣಿಯ |
ನಿರದೆ ತೋರ್ಪುದು ಭಾಷ್ಯಭುವನಪ್ರಾಣವಾಯತಿಯ || ೩೩

ಮಲೆವ ಗಜಸಂಕುಲದ ಕುಂಭ |
ಸ್ಥಲವ ಭೇದಿಸುತತುಲಶೌರ್ಯದೊ |
ಳುಲಿವ ಕಂಠೀರವನ ತೆರದಿಂದಖಿಳಭುವನದಲಿ ||
ಮಲೆವ ಕಾಮಕ್ರೋಧಗಜಸಂ |
ಕುಲವ ನೆರೆಸಂಹರಿಸಿ ಮೆರೆವುದು |
ಕಲಿತಮೋವಿಧ್ವಂಸಯತಿಕೃತಭಾಷ್ಯಪಂಚಮುಖ || ೩೪

ಖರಕಿರಣತಾಪದಲಿ ನೊಂದಿಹ |
ವರಚಕೋರಕೆ ತಂಪನಿತ್ತಾ |
ದರಿಪ ವರಚಂದ್ರಿಕೆಯು ತಾನೆಂಬಂತೆ ಭಾವಿಸಲು ||
ಧರೆಯೊಳಾಧ್ಯಾತ್ಮಕವು ಮೊದಲಾ |
ದುರುತರದತಾಪತ್ರಯಂಗಳ |
ಪರಿಹರಿಸಿ ಶಾಂತತೆಯನೀವುದು ಭಾಷ್ಯಕೌಮುದಿಯು || ೩೫

ಈಪರಿಯ ಭಾಷ್ಯವನು ವಿರಚಿಸು ।
ತಾಪಿನಾಕಿಯು ಸಕಲಲೋಕವು ।
ಹೋಪಕಾರವನೆಸಗಿ ವೈದಿಕಮತವನುದ್ಧರಿಸಿ ॥
ವ್ಯಾಪಿಸಿದಮಹದಂಧಕಾರಕ ।
ಲಾಪವನು ಪರಿಹರಿಸಿ ಭುವನ ।
ವ್ಯಾಪಕನು ಕರುಣದಲಿ ರಕ್ಷಿಸಿದನು ಜಗತ್ರಯವ ॥ ೩೬

ಅತಿಶಯದಭಕ್ತಿಯಲಿ ಶಿಷ್ಯ ।
ಪ್ರತತಿಯನುದಿನ ಸಕಲಸಂಯಮಿ ।
ನುತಪದಾಬ್ಜನ ಯತಿವರೇಣ್ಯನ ಸೇವಿಸುತ್ತಿರಲು ॥
ಶ್ರುತಿವಿದೂರನು ಶಿಷ್ಯವರ್ಗ ।
ಕ್ಕತಿಶಯದಕಾರುಣ್ಯದಿಂದಲೆ ।
ಸತತಬೋಧಿಸುತಿದ್ದನಾವರಸೂತ್ರಭಾಷ್ಯವನು ॥ ೩೭

ಸಕಲಮುನಿಮಧ್ಯದಲಿರಾಜಿಪ ।
ಶುಕಮುನಿಯತೆರನಂತೆ ಶಿಷ್ಯ ।
ಪ್ರಕರಮಧ್ಯದೊಳುರುವಿರಾಜಿಸುತಾಸನಂದನನು ॥
ಅಕುಟಿಲತ್ವದಿ ಗುರುಪದಾಂಬುಜ ।
ನಿಕಟಸೇವಾಸಕ್ತನಾಗುತ ।
ಸಕಲಚೈತನ್ಯಾತ್ಮರೂಪನ ಕರುಣವನುಪಡೆದ ॥ ೩೮

ಗುರುಪದಾಂಬುಜಯುಗ್ಮಸೇವಾ ।
ಪರನಮುಟ್ಟುವಡಳುಕುವನು ಯಮ ।
ಪರಮಗುರುಭಕ್ತನನು ನೋಯಿಸಲನಲನಂಜುವನು ॥
ಹರಿಶರಣಸಿಂದಧಿಕನಹನಾ ।
ಗುರುಶರಣ ಜಗದೊಳಗೆ ಪರಿಕಿಸೆ ।
ಗುರುಶರಣಗುನ್ನತದ ಮೋಕ್ಷವು ಕರತಲಾಮಲಕ ॥ ೩೯

ಭಾವಿಸುವೊಡಜ್ಞಾನದಂಧತೆ |
ತೀವಿಕೊಂಡಕ್ಷಿಯನು ದಯೆಯಿಂ |
ದೋವಲೋಸುಗಪರಮಸುಜ್ಞಾನಾಂಜನವನಿತ್ತು ||
ಭಾವಕರನುರೆಪೊರೆವ ಗುರುವರ |
ಪಾವನಾಂಘ್ರಿಯ ಭಜಿಪಶಿಷ್ಯಂ |
ಗಾವುದರಿದಹುದೀಜಗತ್ತಿನೊಳೆಂದನಾಸೂತ || ೪

ಆರುಜಗದೊಳಖಂಡಗಗನಾ |
ಕಾರದಲಿ ತೋರುವನು ಮೋಣಾ |
ಭೂರಿಸಚರಾಚರದಿ ಬೆರೆದಂತಿರ್ದು ರಂಜಿಪನು ||
ಪಾರವಿಲ್ಲದ ಮಹಿಮನಾತನ |
ತೋರುವಾಗುರುವರನಪಾದಸ |
ರೋರುಹವ ನೆರೆಭಜಿಪ ಶಿಷ್ಯಂಗಾವುದರಿದಹುದು || ೪೧

ಗುರುವಿನಿಂಗಿತವರಿತು ನಡೆವನು |
ಗುರುನಿರೂಪಿಸಿದನಿತನಡೆಸುವ |
ಗುರುವರೇಣ್ಯಂಗೆಸಗುವನು ಶುಶ್ರೂಷೆಯನು ಬಿಡದೆ ||
ಗುರುವರನು ಬೋಧಿಸಿದ ತತ್ವವ |
ಗುರುತರದಭಕ್ತಿಯಲಿಪಠಿಸುವ |
ಗುರುಪದಾಬ್ಜಪರಾಗಮಧುಕರನಾಸನಂದನನು || ೪೨

ವೇದಸಾರವನೆಲ್ಲ ತಾನಿಂ |
ತಾದಿತೇಯವಿರೋಧಿಸಂಹರ |
ಮೋದದಿಂ ತ್ರೈವಾರಪಾಠದೊಳರಿತುಕೊಂಡಿರಲು ||
ವೇದವೇದ್ಯನು ಪರಮಹರ್ಷದೊ |
ಳಾದಿಶಿಷ್ಯನು ಶಿಷ್ಯರೊಳಗೆಂ |
ದಾದಿವಿಜಪೋಷಕನ ಕೊಂಡಾಡಿದ ಸನಂದನನ || ೪೩

ಶಿವನಕರುಣಕಟಾಕ್ಷಸಿಕ್ತೇ ।
ಪವನುಪಡೆದಿಹ ಹರಿಯುಕಂಡಾ ।
ದಿವಿಜಗುರು ಮೊದಲಾದ ಶಿಷ್ಯಪ್ರತತಿ ಚಿತ್ತದಲಿ ॥
ಅವಿರಳದ ಮಾತ್ಸರ್ಯವಾಂತಿರೆ ।
ಹವಣಿಸಿದ ತಾನರಿದು ಚಿತ್ತದಿ ।
ಭವನು ನಸುನಗುತಿರ್ದನೀರ್ಷಾಪರರ ನೆರೆನೋಡಿ ॥ ೪೪

ಒಂದುದಿನ ಶಂಕರನು ಶಿಷ್ಯರ ।
ವೃಂದದೊಡನಿರುತಿರ್ದು ನಿರ್ಜರ ।
ಸಿಂಧುವನ್ನುತ್ತರಿಸುತುತ್ತರಕೂಲಕೈತಂದು ॥
ನಿಂದು ಶಿಷ್ಯರ ಬೇಗ ನೀವ್ಬಹು ।
ದೆಂದು ಕರೆಯಲು ಬಳಿಕ ಸಕಲರು ।
ನಿಂದರಾಕೂಲದಲಿ ನದಿಯನುದಾಂಟಲರಿಯದಲೆ ॥ ೪೫

ಕರೆಯಕೇಳಿದನಾಸನಂದನ ।
ನುರುತರದಭಕ್ತಿಯಲಿ ನೇಮನ ।
ಶಿರದೊಳಾಂತನು ತನ್ನ ಮನದಲಿ ನೆನೆದನಿಂತೆನುತ ॥
ಗುರುಕಟಾಕ್ಷದಿ ಕಷ್ಟತರಭವ ।
ಶರಧಿಯನುದಾಂಟಿದೆನು ತಾನೆನ ।
ಲರಿದೆ ತನಗೀಧುನಿಯದಾಂಟುವುದೆನುತ ನಡೆತಂದ ॥ ೪೬

ನೆಲದೊಳಡಿಯಿಡುವಂತೆ ಗಂಗಾ ।
ಜಲದಮೇಲಡಿಯಿಡುತ ಬರುತಿರೆ ।
ಜಲಜನಾಭಪದಾಬ್ಜಸಂಭವೆಯತುಲಹರ್ಷದಲಿ ॥
ಜಲಜಗಳನಡಿಗಡಿಗೆ ನೀಡಲು ।
ಸುಲಭದಿಂದೈತಂದು ಶಂಕರ ।
ಲಲಿತಪದಪಂಕೇರುಹಂಗಳಿಗೊಲಿದು ನಮಿಸಿದನು ॥ ೪೭



ಶ್ರೀಶಂಕರರು ಸನಂದನನಿಗೆ ಪದ್ಮಪಾದಾಭಿಧಾನವಂ ಕೊಟ್ಟುದು.

ಪದ್ಮಗಳ ಮೆಟ್ಟುತಲಿ ಬಂದಾ ।
ಪದ್ಮನಾಭನ ಕಂಡು ಮುನಿಪ ।
ಹೃದ್ಮಸದ್ಮನು ಬಹುಳಹರ್ಷಪತಳೆದು ಚಿತ್ತದಲಿ ॥
ಪದ್ಮಸಖಸಮತೇಜ ಕೇಳೀ ।
ಪದ್ಮಜಾಂಡದಿ ನಿನಗೆ ಸಲ್ವುದು ।
ಪದ್ಮಪಾದಾಭಿಖ್ಯೆತಾನೆಂದೆನುತ ಕರುಣಿಸಿದ ॥ ೪೮

ತೆರನನಿದ ಕಾಣುತ್ತಬಳಿಕಾ ।
ವರಧಿಷಣ ಮೊದಲಾದ ಶಿಷ್ಯರ ।
ನೆರವಿ ನಾಚಿಕೆಯಿಂದ ತಮ್ಮಯ ಶಿರವಬಾಗುತಲಿ ॥
ಹರನು ಶಂಕರಯತ್ತಿಯು ವರನರ ।
ಹರಿ ಸನಂದನನೆಂಬ ವಿವರವ ।
ನರಿದರಿದು ಮತಿವಿಕಳರಾದೆವೆನುತ್ತ ಮರುಗಿದುದು ॥ ೪೯

ಯತಿಪತಿಯು ನಡೆತಂದು ಶಿಷ್ಯ ।
ಪ್ರತತಿಯನು ಮನ್ನಿಸುತಲವದಿರ ।
ಮತಿಯಮಾತ್ಸರ್ಯವನು ಕಳೆಯುತಲತುಲಹರ್ಷದಲಿ ॥
ಸತತಬೋಧಿಸಿ ಸೂತ್ರಭಾಷ್ಯವ ।
ನತಿಶಯದ ಸುಖದಿಂದಲಿರ್ದನು ।
ಪತಿತಪಾವನನಾಮಶಿವನಾಬದರಿಕಾಶ್ರಮದೆ ॥ ೫೦

ಪಾಶುಪತಮತಖಂಡನೆಂಬುಗ್ರೆ ।
ದಾಶಿವನು ಬೌದ್ಧಾದಿದುರ್ಮತ ।
ನಾಶನವನೆಸಗುತ್ತ ಖಂಡಿಸಿ ಭೇದವಾದಿಯನು ॥
ಕೇಶವಾದಿಸಮಸ್ತಜನವಾ ।
ರಾಶಿನುತಿಸುತ್ತಿರಲು ಶಂಕರ ।
ದೇಶಿಕನು ಬೋಧಿಸುತಲಿರ್ದನು ಶಿಷ್ಯವರ್ಗದಲಿ ॥ ೫೧

ಪರಮಶಂಕರನೊಲಿದು ಬೋಧಿಪ |
ಸುರುಚಿರದ ತತ್ವಾರ್ಥಸಾರದ |
ವರಸುಧೆಯನೀಂಟುತಲೆ ದಣಿಯದೆಮತ್ತೆ ಸವಿಸವಿದು ||
ವರಪರಾನಂದೈಕರಸಪಿದ |
ಸುರಿದು ನಮ್ಮನು ಪಾಲಿಸುತ್ತಿಹ |
ಸುರನುತಶ್ರೀಕಂಠದೇವನೆನುತ್ತ ಪೊಗಳಿದರು ||

ಸಂಧಿ ೧೬ ಕ್ಕೆ ಪದ್ಯ ೬೪೯ ಕ್ಕೆ ಮಂಗಳ.

## ಹದಿನೇಳನೆಯ ಸಂಧಿ.

ಸೂಚನೆ || ವ್ಯಾಸಮುನಿಯೈತಂದು ವರಸ |
ನ್ಯಾಸಿಯನು ಕಂಡಾತ ರಚಿಸಿದ |
ಭಾಸುರಸುಭಾಷ್ಯವನು ಪರಿಕಿಸಿ ವರವಕರುಣಿಸಿದ ||

ಭೃಗುಕುಲಾಂಬುಧಿ ಸೋಮಕೇಳಾ |
ಮೃಗಧರನು ಶಿಷ್ಯಾಳಿಗೊಲವಿಂ |
ನಿಗಮತತ್ವರಹಸ್ಯವಿಷಯಂಗಳನು ಬೋಧಿಸುತ ||
ಸೊಗಸುಮಿಗಿಲ್ಕೈಕಿಲನುತಾಳಿಹ |
ನಗದಬಳಿಯೊಳು ರಂಜಿಸುತ್ತಿಹ |
ಗಗನನದಿಯಾತೀರದೇಶದೊಳಿರ್ದನತಿಮುದದೆ ||

ಒಂದುದಿನವಾ ಬ್ರಹ್ಮಸೂತ್ರವ |
ನಿಂದುಧರ ಶಿಷ್ಯರಿಗೆಬೋಧಿಸ |
ಲಂದುಚಿತ್ತದ ಸಂಶಯಂಗಳನೆಲ್ಲವನುನೀಗಿ ||
ಸಂದಸಂಭ್ರಮದಿಂದ ಶಿಷ್ಯರ |
ವೃಂದಮಿರೆ ವರವೃದ್ಧವಿಪ್ರನ |
ಚಂದದಿಂದೈತಂದನಲ್ಲಿಗೆ ಬಾದರಾಯಣನು ||

ಧರಿಸಿಧೌತಾಂಬರವ ಕೊರಳೊಳು |
ಮೆರೆಯುತಿರೆವರಯಜ್ಞಸೂತ್ರವು |
ಪರಿರಚಿತರುದ್ರಾಕ್ಷ ಮಾಲಾಭರಣನಾಗುತಲಿ ||
ವರವಿಶಾಲದ ಫಾಲದೇಶದಿ |
ಮೆರೆಯೆಭಸ್ಮವು ಬಹುಳತೇಜೋ |
ಭರಿತವಿಪ್ರಾಕಾರದಿಂದೈತಂದ ನೊಲವಿನಲಿ || ೩

ಬಂದು ಶಂಕರಯತಿಯುಸನಿಹದೆ |
ನಿಂದು ನೀನಾರೇನಬೋಧಿಪೆ |
ಯೆಂದುಕೇಳಲು ಶಿಷ್ಯರೀಪರಿನುಡಿದರುತ್ತರವ ||
ಅಂದವಹಸುಬ್ರಹ್ಮಸೂತ್ರಕೆ |
ಸಂದಭಾಷ್ಯವರಚಿಸಿ ನಮ್ಮನು |
ಚಂದದಿಂಬೋಧಿಸುವನೀತನು ನಮ್ಮಗುರುವರನು || ೪

ಎನಲುಕೇಳುತಲಾಗ ಸಂಯಮಿ |
ಜನವರೇಣ್ಯನು ಯತಿಗೆನುಡಿದನು |
ಜನರು ನಿನ್ನನು ಭಾಷ್ಯಕಾರನೆನುತ್ತ ಪೇಳುವರು ||
ಅನುವಿನಿಂ ಹರಿಮುನಿಯುಪೇಳಿಹ |
ವಿನುತಸೂತ್ರಾರ್ಥವನು ಬಲ್ಲೊಡೆ |
ತನಗೆ ವಿವರಿಪುದೊಂದ ನೀನೆಂದೆನುತ ಹರುಷದಲಿ || ೫

ಭೂದಿವಿಜಪೇಳಿದುದ ಕೇಳುತ |
ಲಾದಿಶಂಕರ ನುಡಿದ ವಿನಯದಿ |
ಮೇದಿನಿಯೊಳಾಸೂತ್ರದರ್ಥವ ತಿಳಿದಗುರುಜನಕೆ ||
ಮೋದದಿಂದಾನಮಿಪೆನಲ್ಲದೆ |
ವೇದವಿದನಾನೆಂದು ಗರ್ವಿಸೆ |
ನಾದರದಿ ನೀಕೇಳಿತಿಳಿದುದ ಪೇಳ್ವೆನೆಂದೆನುತ || ೬

ಎನಲದಕೆ ಸನುಮತಿಸಿ ವಿಪ್ರನು |
ವಿನುತ ಸೂತ್ರಾಧ್ಯಾಯದೊಳು ಮೂ |
ರನೆಯ ವಿಷಯವ ಬಲ್ಲಿಯಾದೊಡೆಪೇಳ್ವುದೆಂದೆನಲು ||
ಅನುವಿನಿಂ ಶಂಕರನು ವಿಪ್ರನ |
ಘನತೆಯನು ಕೊಂಡಾಡಿಹರ್ಷವ |
ಮನದಿತಾಳುತ ಪೇಳ್ದನಾಸೂತ್ರಾರ್ಥಸಂಗತಿಯ ||

ಬೀತದೇಹದ ಬಳಿಯೊಳಿರ್ದಾ |
ಭೌತಿಕಾಕ್ಷಗಳೈದು ಲಯಿಸಲು |
ಭೂತಸೂಕ್ಷ್ಮಗಳಿಂದಕೂಡುತ ಜೀವನೈದುವನು ||
ಖ್ಯಾತವಿದುತಾ ತಾಂಡಿನಿಗಮದಿ |
ಗೌತಮನಜೈಮಿನಿಯು ವಾದದೊ |
ಳೀತದರ್ಥವ ಸೂತ್ರಬೋಧಿಸುತಿಹುದು ಜಗವರಿಯೆ ||

ಲಾಲಿಸುತಲದನಾಗ ಬಲುವಾ |
ಚಾಳಿಯಹ ವಿಪ್ರೇಂದ್ರ ಪಂಡಿತ |
ಜಾಲಕತಿವಿಸ್ಮಯವತೋರುತ ನೂರುವಿಧದಿಂದ ||
ಫಾಲನೇತ್ರನನುಡಿಯ ಖಂಡಿಸೆ |
ಲೀಲೆಯಿಂದಲೆ ತೀರ್ಥಕರನು ವಿ
ಶಾಲಮತಿಯಿಂ ಕಡಿದವಿಪ್ರನ ನುಡಿಯಬಹುಮುಖದೆ ||

ಪಂಡಿತೋತ್ತಮರೆನಿಪ ಶಿಷ್ಯರ |
ತಂಡಬೆರಗಿಡೆ ಬಾದರಾಯಣ |
ಖಂಡಶಶಿಧರರಾಗವಾದಿಸುತಿರ್ದರೆಂಟುದಿನ ||
ಪುಂಡರೀಕಾಂಬಕನು ಕಾಣುತ |
ಖಂಡವಿಸ್ಮಯವಾಂತು ಚಿತ್ತದಿ |
ಕಂಡನಾದ್ವಿಜವರ್ಯ ವೇದವ್ಯಾಸನೆಂಬುದನು ||

ವರಪರಾತ್ಪರ ಗುರುವಿಗೀತನು |
ಪರಮಗುರುವೆಂಬುದನು ತವಕದಿ |
ಹರಿಯು ತಿಳಿದುರೆ ಹರುಷವಾಂತನು ತನ್ನ ಚಿತ್ತದಲಿ ||
ಹರಿಮುನಿಯು ಬರವಿದನು ತಾನಿಂ |
ತರಿತಿಹುದ ಗುರುವರಗೆಪೇಳುವ |
ಪರಿಯನರಿದಿಂತೆಂದು ನುಡಿದನು ವಿನಯಪರನಾಗಿ || ೧೧

ಶಂಕರನು ಯತಿಪತಿಯು ದೈತ್ಯಭ |
ಯಂಕರನು ಹರಿಮುನಿಯು ತಾವಿವ |
ರಂಕದಲಿ ವಾಕ್ಕಲಹಗೈಯುತಲಿರಲು ಬಳಿಕೀಗ ||
ಕಿಂಕರರು ನಾವೇನಗೈವುದು |
ಶಂಕಿಸುತ್ತಿದೆ ಚಿತ್ತವೆಂದತಿ |
ಬಿಂಕದುಕ್ತಿಯ ನುಡಿದನಾಗ ಸನಂದನನು ನಗುತ || ೧೨

ಛಾತ್ರವರನೆಂದೆನಿಪ ಪರಶತ |
ಪತ್ರಪಾದನು ನುಡಿದ ಗೂಢವಿ |
ಚಿತ್ರವಾಕ್ಯವ ಕೇಳಿ ಯತಿಪತಿಯತುಲ ಹರ್ಷದಲಿ ||
ಸೂತ್ರಕಾರನ ಪಾದದರ್ಶನ |
ಪಾತ್ರನಹೆನೆಂದೆನುತ ಪರಮಪ |
ವಿತ್ರವಾಕ್ಯಗಳಿಂದ ನುತಿಸಿದ ಬಾದರಾಯಣನ || ೧೩

ವರಜಟಾಕೋಟೀರ ಮಂಡಿತ
ಶಿರನೆನಿಪ ಘನಕಾಂತಿಯಾಂತುರೆ |
ಮೆರೆವ ವರಶುಭ್ರೋಪವೀತವನಾಂತು ರಂಜಿಸುವ ||
ಧರಿಸಿ ಕೃಷ್ಣಾಜಿನವ ಲೋಕದೊ |
ಳುರುತರದ ಕಲಿಮಲವ ಹರಿಸುವ |
ವರಮುನಿಪನೀವ್ಯಾಸನಹುದೆಂದೆನುತ ವಂದಿಸಿದ || ೧೪

ಮುನಿವರನೆ ಭಾವತ್ಕಸೂತ್ರದ ।
ಘನಪದವನಾಶ್ರಯಿಸಿ ರಚಿಸಿಹ ।
ವಿನುತಜೀವಾತ್ಮೈಕ್ಯಭಾವವ ನೊಲಿದು ಬೋಧಿಸುವ ॥
ಘನತರದ ಭಾಷ್ಯವಿದು ನಿನ್ನಯ ।
ಮನಕೆ ಸಮ್ಮತವಹಡೆ ಕರುಣಿಪು ।
ದನುವಿನಿಂ ನಿನ್ನತುಲ ಮೂರ್ತಿಯ ದರ್ಶನವನೆಂದ ॥ ೧೫

ಎಂದು ಬೇಡುತ್ತಿರಲು ಮಿಂಚಿನ ।
ಸಂದಣಿಯು ಹೊಳೆದಂತೆ ಬೆಳಗಿಡ ।
ಲಂದು ರಂಜಿಸೆ ಜಾತರೂಪದಲತೆಯೊಲಾಜಟೆಯು ॥
ಸುಂದರಾಸ್ಯದ ಸಕಲ ವೇದಗ ।
ಳಿಂದ ಕೂಡಿಹ ದಿವ್ಯಮೂರ್ತಿಯು ।
ಚೆಂದದಿಂದಿದಿರಾಗಿ ರಂಜಿಸೆ ಕಂಡನಾಯತಿಪ ॥ ೧೬

ಜ್ಞಾನಮುದ್ರಾಂಕಿತದಿ ಮೆರೆಯುವ !
ನೂನದಕ್ಷಿಣಹಸ್ತದಿಂದ ।
ಜ್ಞಾನನಾಶಕವೆನಿಪ ವಾಮದ ಕರದಿ ಕರಕವನು ॥
ಸಾನುರಾಗದಿ ಪಿಡಿದು ಸಂತತ ।
ಭಾನುವಿನತೆರದಿಂದ ತೋರ್ಪ ಮ ।
ಹಾನುಭಾವನ ದಿವ್ಯಮೂರ್ತಿಯ ಕಂಡನಿದಿರಿನಲಿ ॥ ೧೭

ಶಿರದಿ ಜಟೆ ರುದ್ರಾಕ್ಷಮಾಲೆಯು ।
ಕೊರಳೊಳಗೆ ನೆರೆಪೂಸಿಕೊಂಡಿಹ ।
ಸುರುಚಿರದ ಭಸ್ಮಪ್ರಪೂರಿತ ದಿವ್ಯದೇಹದಲಿ ॥
ಮೆರೆವ ವರಶಾರ್ದೂಲಚರ್ಮವು ।
ವರಕಟಿಯೊಳೆಸೆದಿರಲು ಶಂಕರ ।
ಪರಮಸಾರೂಪ್ಯದಲಿ ತೋರ್ಪ ಮಹಾತ್ಮನನು ಕಂಡ ॥ ೧೮

ನಿಶಿತಧಾರೋಜ್ವಲಿತ ಮಹದಂ |
ಕುಶದಿ ಮದಿಸಿದ ವರಮದೇಭವ |
ವಶವ ಮಾಳ್ಪಂದದಲಹಂಕಾರಾಖ್ಯ ಮದಗಜನ ||
ಲಸದಭೇದಜ್ಞಾನಧಾರಾಂ |
ಕುಶದಿ ವಶಗೈದಿರ್ಪ ಸನ್ನುತ |
ಯಶನ ಮಹಿಮಾರ್ಣವನ ಯತಿಪತಿಕಂಡನಿದಿರಿನಲಿ || ೧೯

ಜಗದಿಪಶುಪಾಲಕನು ರಜ್ಜುವ |
ನಗಣಿತದ ಪಶುಗಳಿಗೆ ತೊಡಿಸುತ |
ಬಿಗಿವ ತೆರದಿಂದಗಣಿತಾಗಮವೆಂಬ ಪಶುಕುಲವ ||
ಸೊಗಸು ಮಿಗಿಲಾಬ್ರಹ್ಮಸೂತ್ರದಿ |
ಬಗೆಯಲದ್ವೈತಾಖ್ಯಶಂಕುವಿ |
ಗೊಗುಮಿಗೆಯ ಸಂಭ್ರಮದಿ ಬಿಗಿದ ಮಹಾತ್ಮನನು ಕಂಡ || ೨೦

ನೋಡಿದನು ಕಣ್ದಣಿಯೆ ಸಂಭ್ರಮ |
ಗೂಡಿ ಶಿಷ್ಯರ ನೆರವಿಯಿಂದೊಡ |
ಗೂಡಿ ಬಂದನು ಮಹಿಮವೇದವ್ಯಾಸನಿದ್ದೆಡೆಗೆ ||
ನೀಡಿದನು ಪದಯುಗಕೆ ಶಿರವನು |
ಜೋಡಿಸುತ ಕರಗಳನು ಮಿಗೆ ಕೊಂ |
ಡಾಡಿದನು ಭಕ್ತಿಯಲಿ ತನ್ನಯ ಗುರುಪರಾತ್ಪರನ || ೨೧

ಮುಖಚತುಷ್ಟಯವಿಲ್ಲದೊಂದೇ |
ಮುಖದ ಕಮಲಜನೆನಿಸಿ ನಾಲುಕು |
ವಿಕಟಭುಜತಾನಿಲ್ಲದೆರಡೇಭುಜದ ಹರಿಯೆನಿಸಿ ||
ಮುಖದ ಮಧ್ಯದ ನೇತ್ರವಿಲ್ಲದ |
ಮುಖವಿರೋಧಿಯುಮೆನಿಸಿ ರಂಜಿಪ |
ನಿಖಿಳವೇದಾಧಾರ ಮೂರ್ತಿಯ ಪದಕೆ ವಂದಿಸುವೆ || ೨೨

ಸಕಲ ನಿಗಮಂಗಳ ರಹಸ್ಯವ |
ಸುಕರಮೆನೆ ಬೋಧಿಸುತ ಜಗದಘ |
ನಿಕರವನು ಪರಿಹರಿಸಿ ಬಹುಸುಶ್ರಾವ್ಯವೆಂದೆನಿಸಿ ||
ಮುಕುತಿ ಮಾರ್ಗವ ತೋರ್ಪ ಭಾರತ |
ಸುಕಥನಾಮೃತಪಿತ್ತು ರಕ್ಷಿಸಿ |
ದಕುಟಿಲಾತ್ಮನೆ ನಿನಗೆ ನಮಿಸುವೆನೀಗ ಭಕ್ತಿಯಲಿ || ೨೩

ವೇದಗಳ ವಿಂಗಡಿಸಲೋಸುಗ |
ಮೇದಿನಿಯೊಳವತರಿಸಿ ವೇದವ |
ನಾದರದಿ ವಿಂಗಡಿಸಿ ವೇದವ್ಯಾಸನೆಂದೆನಿಸಿ ||
ಪಾದಪದ್ಮಪರಾಗಭಕ್ತರ |
ಬಾಧೆಗಳ ಪರಿಹರಿಸಿ ರಕ್ಷಿಸಿ |
ದಾದಿಗುರುವರ ನಿನಗೆ ವಂದಿಪೆನತುಳ ಭಕ್ತಿಯಲಿ || ೨೪

ಗುರುವಶಿಷ್ಠಮುನಿಪ್ರಪೌತ್ರನು |
ಪರಮಶಕ್ತಿಮುನೀಂದ್ರ ಪೌತ್ರನು |
ವರಪರಾಶರಪುತ್ರನೆನ್ನುತ ಸಕಲಜನನಿವಹ ||
ವರಮುನಿಪಶುಕಯೋಗಿತಾತನೆ |
ನಿರತ ನಿನ್ನನು ಪೊಗಳುತಿರ್ಪರು |
ಧರೆಯೊಳಿನ್ನಾರುಂಟು ಮಹಿಮರು ನಿನ್ನ ಹೋಲುವರು || ೨೫

ಜನಿಸಿ ಸದ್ಯೋಗರ್ಭದಿಂದಲೆ |
ಜನಿಸಿದಾಗಲೆ ವರಕಮಂಡಲು |
ವಿನುತದಂಡ ಮಹಾಕ್ಷಮಾಲಾಭರಣಗಳ ಧರಿಸಿ ||
ನೆನೆಯಲೈತಹೆನೆಂದು ಪೇಳುತ |
ಜನನಿ ಋಷಗಂಧಿಯನು ಪೊರೆದಿಹ |
ಘನಮಹಿಮ ನಿನಗಾರು ಸಮರಹರೀಧರಿತ್ರಿಯಲಿ || ೨೬



ಶ್ರೀ ಶಂಕರವಿರಚಿತ ಭಾಷ್ಯವನ್ನು ವೇದವ್ಯಾಸರು ಅವಲೋಕಿಸುತ್ತಿರುವ ಭಾವವು.

ಭರತವಂಶಮಹಾಂಬುನಿಧಿ ತಾ |
ಬರತಿಹುದು ನೀನದನು ದಯದಿಂ |
ಪೊರೆಯಬೇಹುದೆನುತ್ತ ನೇಮಿಸೆ ಜನನಿಯಾಜ್ಞೆಯಲಿ ||
ಪರಮತೇಜಃಪುಂಜದೇಹದ |
ದರುಶನದ ಮಾತ್ರದಲಿ ಪುತ್ರರ |
ಕರುಣಿಸಿದ ಮಹಿಮಾಮಹಾರ್ಣವ ನಿನಗೆ ನಮಿಸುವೆನು || ೨೭

ವಸುಮತೀಭಾರಾಪಹಾರ |
ಕ್ಕೊಸೆದು ಯದುವಂಶದಲಿ ಜನಿಸಿದ |
ಕುಸುಮನಾಭನ ಭಾವನೆನಿಸಿದ ವೀರಧರ್ಮಜಗೆ ||
ಶಶಿಧರನ ಮಂತ್ರೋಪದೇಶವ |
ನೊಸೆದನುಗ್ರಹಿಸುತ್ತ ಪಾರ್ಥಗೆ |
ಪಶುಪತಿಯ ಬಾಣವನು ಕೊಡಿಸಿದೆ ನೀನು ಕರುಣದಲಿ || ೨೮

ಭಾರತಾಹವದೊಳಗೆ ತಮ್ಮ ಶ |
ರೀರವನು ನೂಕಿರ್ದ ಬಹುಜನ |
ವೀರರನು ತಾವ್ನೋಡಬೇಕೆಂದೆನುತ ಕುರುಕುಲದ ||
ನಾರಿಯರು ಕಾಮಿಸಲು ಗಂಗಾ |
ತೀರದೊಳು ಕರೆಯಿಸುತಲವದಿರ |
ತೋರಿ ಪೊರೆದಿಹನಿನಗೆ ಸಮರಾರೀಧರಿತ್ರಿಯಲಿ || ೨೯

ಧರೆಯಜನರಿಗೆ ಸಕಲತತ್ವದ |
ಪರಿಯನರಿಯಲು ಸುಲಭವಾಗುವ |
ತೆರದ ಲಷ್ಟಾದಶಪುರಾಣಂಗಳನು ನೆರೆರಚಿಸಿ ||
ಕರುಣಿಸಿದ ವಿಜ್ಞಾನವಾರಿಧಿ |
ಧರೆಯಜಂಗಮಮೂರ್ತಿ ನಿನ್ನಯ |
ಚರಣಯುಗಳಂಗಳಿಗೆ ವಂದಿಪೆನತುಲಭಕ್ತಿಯಲಿ || ೩೦

ಪತಿಕುಲೋದ್ಧಾರವನು ಗೈದಿಹ |
ಕತನದಿಂದಲಿ ಸಕಲತಾರಾ |
ಪ್ರತತಿಸಂಭ್ರಮದಿಂದ ಸೇವಿಸಲೈದಿದೆಂಬಂತೆ ||
ಸತತ ರಾರಾಜಿಸುವ ಕಂಠದ |
ಲತಿಶಯದ ಮಣಿಮಾಲೆಯೊಪ್ಪುವ |
ಯತಿವರೇಣ್ಯನೆ ನಿನ್ನ ಪದಕಾಂ ಮಣಿವೆ ಭಕ್ತಿಯಲಿ ||

ಜಗವಿದುವೆ ತಾಸತ್ಯವೆಂಬೀ |
ಬಗೆಯ ಹೊರಗಣ ಕಾರುಗತ್ತಲೆ |
ಬಗೆವೊಡಾತ್ಮನು ಬೇರೆ ಜೀವನು ಬೇರೆಯೆಂದೆಂಬ ||
ವಿಗಡದೊಳಗತ್ತಲೆಯ ಹರಿಸುತ |
ಜಗಕೆ ಬೆಳಕನು ತೋರ್ಪ ಭಾರತ |
ಮೃಗಧರನು ಜನಿಸಿದ ಭವನ್ಮಹಿಮಾಂಬುರಾಶಿಯಲಿ ||

ಹರಿಯು ಧರಿಸಿದನೇಳುದಿನ ಕಿರು |
ವೆರಳ ತುದಿಯಲಿ ವರಗಿರೀಶನ |
ಧರಿಸಿರುವೆ ನೀಂ ಸತತ ಚಿತ್ತದೊಳಾಗಿರೀಶನನು ||
ಹರಿಯು ಸಂಹರಿಸಿದನು ನರಕನ |
ಧುರದೊಳಗೆ ಪರಿಹರಿಪೆ ನರಕವ |
ಶರಣರಿಗೆ ಸಂತತವು ನಾರಾಯಣಗೆ ಮಿಗಿಲೆನಿಸಿ ||

ಗೋಸಮೂಹವನಂತವನು ತಾ |
ವಾಸುದೇವನು ವನದಿ ರಕ್ಷಿಸು |
ತೋಸರಿಸದತಿಜಸವ ಪಡೆದನು ಲೋಕಮೂರರಲಿ ||
ಗೋಸಮೂಹವನಂತವನು ನೀ |
ಭಾಸುರದ ವದನದಲಿ ರಕ್ಷಿಸಿ |
ವಾಸುದೇವಗೆ ಸಮನು ನೀನೆಂದೆನಿಪ ಜಸವಡೆದೆ ||

ಆರುತತ್ವಂಪಪದಕೆ ಲಕ್ಷ್ಯನೊ |
ಕಾರಣಾದಿವಿಲಕ್ಷಣತ್ವದೊ |
ಆರನಾ ವೇದಗಳು ಪುರುಷಪುರಾಣನೆಂದೆನುತ ||
ಸಾರಿಪೊಗಳುತಲಿಹವೊ ಸಂತತ |
ಭೂರಿಭಯಭಕ್ತಿಯಲಿ ವಿಗತವಿ |
ಕಾರನಾನಾರಾಯಣನು ನೀನೀಗಭುವನದಲಿ || ೨೫

ವ್ಯಾಸಮುನಿಯೇ ವಿಷ್ಣು ವಿಷ್ಣು |
ವ್ಯಾಸರೂಪನು ಜಗದಿ ವೇದ |
ವ್ಯಾಸಮುನಿಯೇ ಭರಿತಪರಮಬ್ರಹ್ಮನಿಧಿಯಹನು ||
ವ್ಯಾಸಮುನಿ ಲೋಕೈಕಗುರು ತಾಂ |
ವ್ಯಾಸವರವಾಶಿಷ್ಯನಹನಾ |
ವ್ಯಾಸಮುನಿಪಂಗಾನು ನಮಿಸುವೆನಧಿಕಭಕ್ತಿಯಲಿ || ೨೬

ಎಂದು ಬಹುವಿಧದಿಂದನುತಿಸುತ |
ವಂದಿಸುತ ಜೋಡಿಸಿದ ಕರಯುಗ |
ದಿಂದ ದರ್ಭಾಸನವ ತೋರಿಸಿ ಮುಂದೆ ನಿಂದಿರಲು ||
ಸಂದಸಂಭ್ರಮದಿಂದ ಸುರಕುಲ |
ವಂದಿತನು ಕುಳ್ಳಿರುತ ಶಂಕರ |
ಗಂದು ನುಡಿದನು ವಿನಯ ಮಧುರವಚೋವಿಲಾಸದಲಿ || ೨೭

ಯತಿವರನೆ ಲಾಲಿಪುದು ನೀನಿಂ |
ತತಿಶಯದಲೀ ಬ್ರಹ್ಮಸೂತ್ರ |
ಪ್ರತತಿಗುರುಭಾಷ್ಯವನು ರಚಿಸಿರ್ಪೀ ವಿಧಾನವನು ||
ಮತಿಯುತನು ವರಸಿದ್ಧನೊಬ್ಬನು |
ಹಿತದಿ ಪೇಳಲು ಕೇಳಿ ಸಂಭ್ರಮ |
ಯುತನೆನಿಸಿ ನಾಬಂದೆಸಿಲ್ಲಿಗೆ ನಿನ್ನದರ್ಶನಕೆ || ೨೮

ಎಂದ ವೇದವ್ಯಾಸನುಕ್ತಿಯ ।
ನಿಂದುಶೇಖರ ಕೇಳಿಯುತುಲಾ ।
ನಂದತುಂದಿಲನಾಗಿ ಪುಳಕಾಂಬುಗಳು ತಲೆದೋರೆ ॥
ಸಂದಣಿಸೆ ಹರ್ಷಾಶ್ರುಬಳಿಕಾ ।
ಬಂಧುರದ ಭಕ್ತಿಯಲಿ ಚರಣಕೆ ।
ವಂದಿಸುತಲೀ ಪರಿಯಲುಸುರಿದ ವಿನಯಪರನಾಗಿ ॥

ವರಸುಮಂತುವು ಪೈಲಿ ಮೇಣಾ ।
ಪರಮ ವೈಶಂಪಾಯನಾದಿಗ ।
ಳಿರಲು ಶಿಷ್ಯರು ನಿನಗೆ ನಾನಿನ್ನೇಸು ಮಾತ್ರದವ ॥
ಚರಣಭಜಕಕುಟುಂಬನೆಂಬೀ ।
ಬಿರಿದ ಮೆರೆಯಲು ಪರಮಕರುಣಾ ।
ಕರನೆ ಗೋಚರನಾದೆ ದೀನಂಗೆನಗೆ ಪಾಮರಗೆ ॥

ತರಣಿಯುಪಚಾರಕ್ಕೆ ದೀಪವ ।
ನಿರಿಸಿಪೂಜಿಸಿದಂತೆ ನಿನ್ನಯ ।
ಪರಮತತ್ವಾರ್ಥಗಳ ಮೇಣಾನಿಗಮಸಾರವನು ॥
ನಿರತಬೋಧಿಪ ಸೂತ್ರಕೇಗಲು ।
ವಿರಚಿಸಿದೆ ಭಾಷ್ಯವನು ತನ್ನಯ ।
ತರಳತನವನು ಮರೆದು ರಕ್ಷಿಪುದೆನ್ನ ಗುರುವರನೆ ॥

ಭಕ್ತಿಯಿಂದರ್ಪಿಸಿದ ದೀಪವ ।
ಮುಕ್ತಿದಾಯಕ ನೆನಿಸ ರವಿಯಾ ।
ಸಕ್ತಿಯಿಂಕೈಕೊಂಡು ವರಗಳ ನೀಡುವಂದದಲಿ ॥
ಮುಕ್ತಪಾಶನೆ ನೀನುದಯದಿಂ ।
ಭಕ್ತವಿರಚಿತಭಾಷ್ಯವಿದನಾ ।
ಸಕ್ತಿಯಿಂ ಸ್ವೀಕರಿಸಿ ರಕ್ಷಿಪುದೆನುತಲರ್ಪಿಸಿದ ॥

ವರಪರಾತ್ಪರಗುರುವೆ ಲಾಲಿಸು |
ನೆರೆ ವಿಚಾರವಿಹೀನನಾಗಿಹ |
ತರಳಮತಿ ನಾಂ ರಚಿಸಿದೀವರಸೂತ್ರಭಾಷ್ಯವನು ||
ಕರುಣಿ ನೀಂ ಪರಿಕಿಸುತಲಿದರೊಳು |
ದೊರೆವ ದೋಷವ ತಿದ್ದಿ ಸರ್ವವ |
ಸರಿಪಡಿಸಬೇಕೆನುತ ವಿನಯದೆ ಮತ್ತೆ ಬೇಡಿದನು || ೪೩

ಕೇಳಿ ಪುಸ್ತಕಗಳನು ಮುನಿಕುಲ |
ಮೌಳಿಯಂಗೀಕರಿಸಿ ಮೃಗಧರ |
ಮೌಳಿ ರಚಿಸಿಹ ಭಾಷ್ಯವಾದ್ಯಂತವ ವಿಲೋಕಿಸುತ ||
ತಾಳಿದನು ಚಿತ್ತದಲಿ ಹರ್ಷವ |
ಮೌಳಿಯನು ತೂಗುತ್ತ ಸೂತ್ರದ |
ಮೌಳಿಗುರುತರ ರತ್ನಖಚಿತ ಕಿರೀಟವಾಯ್ತೆಂದ || ೪೪

ಸೂತ್ರ ಶಬ್ದಕ್ಕುಕ್ತವಾಗಿಹ |
ಸೂತ್ರದರ್ಥವ ವಿಶದಗೊಳಿಸುವ |
ಸೂತ್ರವಾಕ್ಯಗಳಿಂದಲಾಕ್ಷೇಪವ ನಿರೋಧಿಸುವ ||
ಸೂತ್ರದಿಂ ಸಿದ್ಧಾಂತ ಗೈಯುವ |
ಸೂತ್ರಭಾಷ್ಯವ ಮುದದಿ ನೀಕ್ಷಿಸಿ |
ಸೂತ್ರಕಾರನು ಭಾಷ್ಯಕಾರಗೆ ನುಡಿದನಿಂತೆನುತ || ೪೫

ವರಯತಿಯೆ ನೀನಖಿಳ ಪೂರ್ವೋ |
ತ್ತರದ ಮೀಮಾಂಸೆಗಳ ಮತ್ತಾ |
ಸುರುಚಿರವ್ಯಾಕರಣ ಶಾಸ್ತ್ರಾದಿಗಳ ನರಿತಿರುವೆ ||
ಪರಿಕಿಸಲು ಗೋವಿಂದಪಾದನ |
ಪರಮಶಿಷ್ಯನು ನಿನ್ನ ಭಾಷ್ಯದಿ |
ನೆರೆಸದುಕ್ತಿಗಳಲ್ಲದುಳಿದವವೆಂತು ಬಹವೆಂದ || ೪೬

ಅತಿರಹಸ್ಯಾರ್ಥಗಳ ತಾಳುತ |
ಮಿತವೆನಿಪ ವಾಕ್ಸರಣಿಯಿಂದಲಿ |
ಮಿತದಲಮಿತಾರ್ಥವನು ಬೋಧಿಪ ಸೂತ್ರಕೀಪರಿಯ ||
ಪ್ರಥಿತ ಭಾಷ್ಯವ ರಚಿಸೆ ಯೋಗ್ಯನು |
ಯತಿಪತಿಯೆ ನೀನಲ್ಲದುಳಿದರು |
ಮತಿಯುತರೆ ನೀನೆನ್ನ ಭಾವವನರಿತು ರಚಿಸಿರುವೆ || ೪೭

ಶಂಕರನು ಬಹುದೋಷಯುಕ್ತನು |
ಶಂಕರನೆ ನೀದೋಷ ರಹಿತನು |
ಶಂಕರನು ಧರಿಸಿರುವನೊಂದೇ ಕಲೆಯ ಶಿರದೊಳಗೆ ||
ಶಂಕರನೆ ನೀ ಬಹುಕಲಾನ್ವಿತ |
ಶಂಕರಗೆ ನೀನಧಿಕನಹುದೆಲೆ |
ಶಂಕರನೆ ಕೇಳೆಂದು ನುಡಿದನು ಬಾದರಾಯಣನು || ೪೮

ನೀನು ಪರಮಾದ್ವೈತಮಂಡನ |
ನೀನು ಶುದ್ಧಾದ್ವೈತಪಂಕಜ |
ಭಾನು ನೀನದ್ವೈತವಾರಿಧಿಕುಮುದಬಾಂಧವನು ||
ನೀನಲ್ತೆ ಪರಿಪೂರ್ಣತತ್ವ |
ಜ್ಞಾನಪಂಡಿತ ನಿನ್ನ ಭಾಷ್ಯವಿ |
ಧಾನ ದರ್ಪಣವಾಯ್ತು ಸೂತ್ರಾಧ್ಯಾಯಗಳಿಗೆಂದ ||

ಇಂದುಧರನಂಶಜನೆ ಲಾಲಿಸು |
ಸಂದ ಸೂತ್ರಂಗಳಿಗೆ ಭಾಷ್ಯವ |
ಮುಂದೆ ರಚಿಪರು ಜನರು ಚಿತ್ತಕೆ ತೋರಿದಂದದಲಿ ||
ಮಂದಮತಿಗಳು ಬಲ್ಲರೇ ತ |
ನ್ನೊಂದು ಭಾವವನೆಲೆಯತೀಶ್ವರ |
ಬಂಧುರದ ಸರ್ವಜ್ಞ ನೀನದರಿಂದಲರಿತೆಯಲ್ತೆ || ೫೦

ಎನುತ ಭಾಷ್ಯವ ಪೊಗಳಿ ಬಳಿಕಾ |
ಮುನಿಲಲಾಮನು ನುಡಿದ ಕೇಳಿಲಿ |
ಘನಮಹಿಮ ನೀರಚಿಸು ನಿಗಮಂಗಳಿಗೆ ಭಾಷ್ಯವನು ||
ಅನುವಿನಿಂ ಗ್ರಂಥಗಳನೇಕವ |
ಜನಕೆ ಹಿತಕರವಾಗಿ ವಿರಚಿಸು |
ವಿನಯದಿಂ ಸ್ವೀಕರಿಸು ನೀನೆಂದಿತ್ತ ಪುಸ್ತಕವ || ೫೧

ಇಂದುತರಣಿಗಳಿರ್ಪವರೆಗುಂ |
ಸಂದಭಾಷ್ಯವು ನಿಲಲಿ ಜಗದೊಳ |
ಗೆಂದಿಗುಂ ಸತ್ಕೀರ್ತಿ ಪಡೆಯಲಿ ಕೃಪೆಯಲೀಶ್ವರನ ||
ಮುಂದೆ ದುರ್ಮತವಾದಿಗಳ ಬಹು |
ಮಂದಿಯನು ಜಯಿಸುವುದು ಕೇಳಾ |
ನಿಂದು ತೆರಳುವೆನೆಂದು ನುಡಿದನು ಯತಿಗೆ ಮುನಿಪತಿಯು || ೫೨

ಎನೆ ಪುರಾಂತಕ ನುಡಿದನೀಪರಿ |
ಮುನಿವರನೆ ನಾಮುನ್ನ ರಚಿಸಿಹೆ |
ಘನವೆನಿಪ ವೇದಾಂತಭಾಷ್ಯವನಿದನು ಶಿಷ್ಯರಿಗೆ |
ಅನುವಿನಿಂ ಬೋಧಿಸಿಹೆನಲ್ಲದೆ |
ಹನನ ಗೈದಿಹೆ ಕುಮತಗಳ ನಿ |
ನ್ನೆನಗೆ ಮಾಡುವ ಕಾರ್ಯವೊಂದಿಹುದದನು ಕೇಳೆಂದು || ೫೩

ಸನ್ನುತನೆ ಲಾಲಿಪುದು ದೇಹವು |
ಮುನ್ನ ಶೋಣಿತ ಶುಕ್ಲ ಮಿಶ್ರದ |
ಲುನ್ನತಿಯ ನೈದುತ್ತ ಹೇಯದ ಗರ್ಭ ಕೋಶದಲಿ ||
ಅನ್ನದಿಂ ವರ್ಧಿಸುತ ಮರಣವ |
ನಿನ್ನು ಪಡೆಯುವ ಕತದಲಿರಲಾ |
ನನ್ನಿಕಾರರು ಪೇಳ್ವರಿದ ನತ್ಯಶುಚಿತಾನೆಂದು || ೫೪

ವಾಸನೆಯ ದೆಸೆಯಿಂದ ಜನಿಯಿಸಿ |
ಹೇಸಿಗೆಯ ನೊಳಗೊಂಡು ಬಹು ದು |
ರ್ವಾಸನೆಯ ಮಲಮೂತ್ರದಿಂದಲಿ ತುಂಬಿಕೊಂಡಿರ್ಪ ||
ಲೇಸನೆಳ್ಳನಿತುವನು ಕಾಣದೆ |
ಘಾಸಿಯನು ತಾಳುವ ಶರೀರವಿ |
ದೇಸುದಿನವಿರ್ದಡೆಯು ಶುಚಿಯಹುದಲ್ಲ ಭಾವಿಸಲು || ೫೭

ಮೇಲೆ ಚರ್ಮದ ಹೊದಿಕೆಯಂ ನೆರೆ |
ತಾಳಿ ಚಲುವಂಬೀರುತೊಳಗೆ ವಿ |
ಶಾಲಮಾಂಸಗ್ರಂಥಿ ರುಧಿರಾಂಬುಗಳ ನೊಳಗೊಂಡು ||
ವೇಳೆಯೊಳಗನ್ನವನು ಕೊಡದಿರೆ |
ಕಾಲಗತಿಯನು ಪಡೆವುದಿದನು ವಿ |
ಶಾಲಮತಿಗಳು ಪೇಳ್ವರದರಿಂದಶುಚಿಯೆಂಡೆನುತ || ೫೮

ಆದರಿಸೀ ದೇಹವನು ಗಂಗಾ |
ನದಿಯ ಸನಿಹದೆ ನಿನ್ನ ಸಾನ್ನಿ |
ಧ್ಯದಲಿ ಬಿಡುವೆನು ಬೇಗಲಾಯುಷ್ಯಾಂತ್ಯ ವೊದಗಿಹುದು ||
ಇದಕೆ ನೀನನುಮತಿಯನೀವುದು |
ಸದಮಲನೆ ಕೃಪೆಯಿಂದಲೆಂದೆನೆ |
ಹೃದಯದಲಿ ಶಂಕಿಸುತ ನುಡಿದನು ಬಾದರಾಯಣನು || ೫೯

ನಿಲ್ಲುನಿಲ್ಲೆಲೆ ಯತಿಪ ಜಗದೊಳು |
ಖಿಲ್ಲುರಹದುರ್ವಾದಿ ಜನರಿಹ |
ರೆಲ್ಲರನು ನೀಂಜಯಿಸದಿರ್ದೊಡೆ ಧರ್ಮವುಳಿಯುವುದೆ ||
ಇಲ್ಲದಿದ್ದರೆ ನೀನು ಜಗದೊಳು |
ನಿಲ್ಲಲರಿಯದು ಮೋಕ್ಷಮಾರ್ಗವು |
ಸಲ್ಲಲಿತಮತಿ ಕೇಳ್ವುದೆನ್ನಯ ಮಾತ ನೀಸಿದನೆಂದು || ೬೦

ದೇಹವಿದು ಪರಿಶುದ್ಧ ಮಲ್ಲಿಂ |
ದೂಹಿಸುತ ವರ್ಜಿಸಲು ಬಳಿಕ ವಿ |
ದೇಹನಾದವನೇನನಾರ್ಜಿಸಬಹುದು ಧರ್ಮಗಳ ||
ದೇಹವೇ ಧರ್ಮೈಕಸಾಧನ |
ದೇಹವೇ ಸತ್ಕರ್ಮಸಾಧನ |
ದೇಹದಿಂದಾರ್ಜಿಸದೆ ಧರ್ಮವ ಬಿಡುವುದನುಚಿತವು || ೫೯

ಸುರಮುನಿಗಳೈತಂದು ನಿನ್ನನು |
ಶರಣು ಪೊಗುತಾ ನಿಗಮಮತವನು |
ಪೊರೆಯ ಬೇಹುದೆನುತ್ತ ಬೇಡಲು ರಜತಶೈಲದಲಿ ||
ಕರುಣದಿಂದಕಾಗಿ ಮಾನವ |
ವರಶರೀರವ ಧರಿಸಿ ಬಂದುದ |
ಮರೆಯಬಹುದೇ ಪರಮಕರುಣಾಕರನೆ ನೀನೆಂದ || ೬೦

ನೆರೆದುದಾಯುಷವೆಂದು ಪೇಳ್ದುದ |
ಕೊರೆವೆ ಲಾಲಿಸು ಪರಮ ಕರುಣಾ |
ಕರನೆ ಮಾರ್ಕಂಡೇಯಮುನಿಪಂಗಮಿತದಾಯುಷವ ||
ಕರುಣಿಸಿದದಾತಾರ ನೀನೀ |
ಧರಣಿಯಲಿ ನರರೂಪಿನಿಂದವ |
ತರಿಸಿರುವೆಯದರಿಂದ ನಿನಗಾನೀವೆನಾಯುಷವ || ೬೧

ಅವಧಿಯೆಂಟೇ ವರುಷವೆಂದಿರೆ |
ಸವೆಯಲದು ನೀನಾಗನುತ್ತಾದ |
ಕವಧಿಯನು ಪಡೆಯಲ್ಕೆ ಹದಿನಾರಾದುದಾಯುಷ್ಯ ||
ಸವೆದು ಬಂದಿತ್ತದುವೆ ಕೇಳೈ |
ಶಿವನ ಕೃಪೆಯಿಂ ಮತ್ತೆ ಷೋಡಶ |
ದವಧಿ ದೊರೆಯಲಿ ನಿನಗೆನುತ್ತಾಲೆ ವರವ ಕರುಣಿಸಿದ || ೬೨

ಭೇದವಾದಿಗಳನ್ನು ಜಯಿಸುತ |
ಬೋಧಿಸುತಲದ್ವೈತ ತತ್ವವ |
ಮೇದಿನಿಯೊಳುಳ್ಳಖಿಳ ದುರ್ಮತಗಳನು ಖಂಡಿಸುತ ||
ಮೋದದಿಂ ಪದಿನಾರು ವತ್ಸರ |
ಮೇದಿನಿಯೊಳಿರುತಿರ್ದು ಸೊಗದಿಂ |
ದೈದುವುದು ಕೈಲಾಸಮಂದಿರಕೆಂದನಾ ಮುನಿಪ ||

ಎನಲದಕೆ ತಲೆವಾಗಿ ಶಂಕರ |
ವಿನಯದಿಂದಲೆ ತನ್ನ ಭಾಷ್ಯಕೆ |
ಘನತೆ ಬಂದುದು ನಿನ್ನ ಸೂತ್ರೋನ್ನತದ ಮಹಿಮೆಯಲಿ ||
ವಿನುತ ಸುಮಸಂಸರ್ಗದಿಂದಲೆ |
ಜನಿಯಿಸದೆ ನಾರಿಂಗೆಸುಸ್ಥಳ |
ವೆನುತ ಪೇಳಿದು ಕರವ ಜೋಡಿಸಿ ನುಡಿದನಿಂತೆಂದು ||

ಮುನಿವರೇಣ್ಯನೆ ಕೇಳು ನೀನೆಂ |
ದನಿತು ಕಾರ್ಯವನೆಸಗಿ ನೆರೆಸ |
ಜ್ಜನ ಸಮೂಹಕೆ ಬೋಧಿಸುವೆನದ್ವೈತ ತತ್ವವನು ||
ವಿನುತ ಸೂತ್ರಾರ್ಥಗಳ ದೆಸೆಯಿಂ |
ದನುವಿನಲಿ ದುರ್ಮತವ ಖಂಡಿಸು |
ತನಘವಹ ವರನಿಗಮಮಾರ್ಗವ ರಕ್ಷಿಸುವೆನೆಂದ ||

ಎಲೆ ಮುನಿಯೆ ಲೋಕಗಳನೇಕವ |
ನೊಲಿದುಪಾಲಿಪ ಮಹಿಮ ನೀನೀ |
ಸ್ಥಳಕೆ ಬಿಜಯಂಗೈದು ಭಾಷ್ಯವ ನೊಲಿದು ರಕ್ಷಿಸಿದೆ ||
ಕಲಿಮಲಧ್ವಂಸಕವೆನಿಪ್ಪೀ |
ಲಲಿತ ಪದ ಸಂದರ್ಶನೋತ್ಸವ |
ಸುಲಭದಿಂದೊರಕಿದುದು ಧನ್ಯನೆನುತ್ತ ನಮಿಸಿದನು ||

ಶಿರವಪಿಡಿದೆತ್ತಿದನು ಕರುಣಾ |
ಕರನು ಬಗಿಯುಪ್ಪಿದನು ಸಂತತ |
ಸುರಿವ ನಯನಾಶ್ರುಗಳು ಸಂಗಮವಾಗೆ ಪುಳಕದಲಿ ||
ವರಯತಿಯು ಬೀಳ್ಕೊಂಡನಲ್ಲಿಂ |
ವರಪರಾಶರತನುಜ ಮನದಲಿ |
ಸುರನುತ ಶ್ರೀಕಂಠದೇವನ ನೆನೆದು ಭಕ್ತಿಯಲೀ || ೬೭

ಸಂಧಿ ೧೭ ಕ್ಕೆ ಪದ್ಯ ೭೦೬ ಕ್ಕೆ ಮಂಗಳ.

# ಹದಿನೆಂಟನೆಯ ಸಂಧಿ.

ಸೂಚನೆ|| ಹರಿಮುನಿಯ ಬೀಳ್ಕೊಂಡು ಶಂಕರ |
ಸುರಗುರುಜನಾಶ್ರಮದೆ ತಾರಕ |
ಪರಮ ಮಂತ್ರವ ಕರುಣಿಸಿದನಾ ಭಟ್ಟಪಾದನಿಗೆ ||

ಕೇಳಿರೈ ಮುನಿಗಳಿರ ಪರಮಪಿ |
ಶಾಲಚರಿತನು ಬಾದರಾಯಣ |
ಲೀಲೆಯಿಂ ವ್ಯೆಗೆರೆದ ನಂತರ್ಧಾನದಲಿ ಬಳಿಕ ||
ಬಾಲಶಶಿಧರನಾಗ ಪರಮ ಕೃ
ಪಾಳುವಗಲಿದನೆನುತ ಖೇದದೊ |
ಳಾಳಿದನು ಬಹುವಿಧದಿ ಮುನಿಪನ ಕೃಪೆಯ ನೆನೆನೆನೆದು || ೧

ಧೈರ್ಯವನು ನೆರೆಬಲಿದು ಮುಂದಣ |
ಕಾರ್ಯಭಾಗವ ನರಿದು ಬಳಿಕಾ |
ಚಾರ್ಯವೇದವ್ಯಾಸಮುನಿಪನ ಪದಯುಗವನೆನೆದು ||
ಆರ್ಯವೋಪಮತೇಜ ಯತಿಕುಲ |
ವರ್ಯ ಶಂಕರನಾಗವಿಜಯದ |
ಕಾರ್ಯವನು ಕೈಗೊಂಡು ಗಮನೋದ್ಯೋಗಪರನಾದ || ೨

ವರಕುಮಾರಿಲ ಭಟ್ಟಸಿಂದಲೆ |
ಪರಮ ಭಾಷ್ಯಕೆ ವಾರ್ತ್ತಿಕವ ನೆರೆ |
ವಿರಚಿಸಲು ಬೇಕೆನುತ ಮನದಲಿ ನೆನೆದು ಯತಿಪತಿಯು ||
ಶರಧಿಸಪ್ತೋದಕವ ನೀಂಟುತೆ |
ದುರುಳ ರಕ್ಕಸಹನನ ಗೈದಾ |
ಪರಮ ಕುಂಭಜನಿರ್ಪ ಟೆಂಕಣ ದಿಕ್ಕಿಗೈದಿದನು ||

ಲೋಕಸಮ್ಮತವಲ್ಲವೆನಿಸುವ |
ಕಾಕುಮತಗಳ ನೂರೆಸಿ ಶಿಷ್ಯರ |
ನೇಕ ಜನರಿಂ ಕೂಡಿ ಪಯಣದ ಮೇಲೆ ಪಯಣದಲಿ ||
ಲೋಕದೊಳು ಸತ್ಕರ್ಮವೇ ಮೋ |
ಕ್ಷೈಕ ಸಾಧನವೆಂದು ವಾದಿಸು |
ವಾ ಕುಮಾರಿಲನನ್ನು ಬಯಸುತ ಬಂದ ನೊಲವಿನಲಿ ||

ಸುರಗುರುವಿನಾತ್ಮಜನೆನಿಪ್ಪಾ |
ವರಭರದ್ವಾಜಾಖ್ಯ ಮುನಿಪನ |
ಸುರುಚಿರಾಶ್ರಮದೆಡೆಯ ಸಾರುತ ಶಿಷ್ಯಜನವೆರೆಸಿ ||
ತರಣಿಜಾತೆಯು ಭರದಿ ಬಂದಾ |
ಸುರಧುನಿಗೆ ಸಂಭ್ರಮದಿ ಸೇರುವ |
ವರಸುಸಂಗಮ ತೀರದೇಶದೆನಿಂದ ನೊಲವಿನಲಿ ||

ನರರು ತನ್ನಲಿ ಬಂದು ಮೀಯುಲು |
ಹರಿಹರರ ಸಾರೂಪ್ಯಮಪ್ಪೊಡೆ |
ನೆರೆಸಿತಾಸಿತವೆಂಬ ವರ್ಣಗಳೆರಡು ಬೇಹುದಲೆ ||
ಪರಿಕಿಸಲ್ಕಾಂ ಶುಭ್ರವಾಂತಿಹೆ|
ಬೆರೆಯಬೇಹುದು ಕಪ್ಪನೆಂದಾ /
ವರಯಮುನೆಯೊಡಗೂಡಿ ಗಂಗಾಧುನಿ ವಿರಾಜಿಸಿತು. ||

ದೊರೆತ ಹೊಸನೇಹದಲಿ ಚಿತ್ತದ |
ಸರಳತೆಯು ಸಾಲದಿರೆ ಹಿಂದಕೆ |
ಸರಿಸರಿದು ಸಂಕೋಚದಿಂ ಮುಂಬರಿವ ರೀತಿಯಲಿ ||
ಸುರನದಿಯು ರಭಸದಲಿ ತನ್ನನು |
ಸರಕುಮಾಡದೆ ದೊಬ್ಬುತಿರುತಿರೆ |
ಹರಿಯುತಿಹಳಾ ಯಮುನೆ ಲಜ್ಜಿಸಿ ಮಂದಗಮನದಲಿ || ೭

ಹರಿಪದದಿ ಜನಿಸಿದೆನು ಮೇಣೀ |
ಹರಿತನುಜೆಯಂ ಕೂಡಿಕೊಂಡಿಹೆ |
ಹರಿಸುವೆನು ಪಾಪಗಳ ತನ್ನೊಳು ಮಿಂದ ಜನಗಳಿಗೆ ||
ಹರಿಯ ಸಾರೂಪ್ಯವನು ಕೊಡುವೆನು |
ಹರಿದು ಬಂದಡೆ ಬಳಿಗೆನುತ್ತಲೆ |
ಹರಿಯುತಿಹಳಾ ಗಂಗೆ ಧಿಷಣಕುಮಾರನಾಶ್ರಮದೆ || ೮

ಉಮೆಯು ಮತ್ಸ್ಯಹಜಾತೆ ಮತ್ತಾ |
ರಮೆಯು ಮತ್ಪ್ರಿಯಜಾತೆ ಬೊಮ್ಮನ |
ರಮಣಿ ತನ್ನೊಳಗಿಹಳು ಜನರರಿವಂತೆಯದರಿಂದ ||
ಕಮಲನಾಭನು ಕಮಲಜಾತನು |
ಕಮಲಬಾಣಾರಾತಿ ತನ್ನನು |
ಮಮತೆಯಿಂದಾದರಿಪರೆಂದೇ ಮೊರೆವಳಾಗಂಗೆ || ೯

ಧವಳತೆಯನೈದುವುದ ಕಲಿಯಲು |
ಭುವನಪಾವನೆಯೆನಿಪ ಗಂಗಾ |
ಭುವನದಾಶ್ರಯವೇ ಸುಸಾಧನವೆಂದು ಹಂಸೆಗಳು ||
ತವೆಚರಿಸುತಿರುತಿರ್ದುವಾಗಳು |
ಭುವನದೊಳು ಸತ್ಸಂಪ್ರದಾಯದ |
ವಿವರವನು ಗುರುಜನರ ದಿವ್ಯಾಶ್ರಯದೊಳರಿವಂತೆ || ೧೦

ಇಂತು ರಂಜಿಸುವಾತ್ರಿವೇಣಿಯು |
ಕಂತುಹರನೀಕ್ಷಿಸುತ ಕಲಿತ |
ಸ್ವಾಂತಹರುಷನು ಕಟಿಗೆ ಪಾಟಲವಸ್ತ್ರವನು ಬಿಗಿದು ||
ಚಿಂತಿಸುತಲಘಮರ್ಷಮಂತ್ರವ |
ನಂತರಿಕ್ಷಾಪಗೆಯೊಳಿಳಿದಾ |
ಭ್ರಾಂತಿರಹಿತನು ಮಿಾಯುತಾಚರಿಸಿದನವಶ್ಯಕವ || ೧೧

ಒಂದು ನಿಜವೆರಡಲ್ಲವೆಂಬುದ |
ನಂದು ಸಪ್ರಾಮಾಣ್ಯವಾಗಿಯೆ |
ಸಿಂದುಸಾರುವನಂತಲೆತ್ತುತ ವೇಣುದಂಡವನು ||
ಚಂದದಿಂದವಗಾಹನಂಗೈ |
ದಂದು ತನ್ನಯ ತಾಯನೆನೆಯುತ |
ಲಿಂದುಶೇಖರ ಬಳಿಕಲಾಚರಿಸಿದನವಶ್ಯಕವ || ೧೨

ಬಳಿಕಲಾಯತಿವರ್ಯ ಶಿಷ್ಯರ |
ಬಳಗದಿಂದೊಡಗೂಡಿ ತಂಪನು |
ತಳೆದ ತರುಚಯದಿಂದಲೊಪ್ಪುವ ಕೂಲದಲಿ ನಿಂದು ||
ಬಳಲಿಕೆಯ ಪರಿಹರಿಸಿ ಕರುಣಾ |
ಜಲಧಿಯೆನಿಪಾ ದೇವಧುನಿಯನು |
ಕಲಿತಮೋಧ್ವಿಧ್ವಂಸತಟಿನಿಯ ಪೊಗಳುತಿಂತೆಂದ || ೧೩

ಎಲೆಜನನಿ ಶಿವ ನಿನ್ನಜಟೆಯೊಳು |
ಸಿಲಿಸಿದನು ತಾನೆಂಬಕೋಪದಿ |
ಹಲಬರನು ಶಿವನಂತೆಮಾಡುವೆ ನಿನ್ನ ಶರಣರನು ||
ಸಲೆನಿಧಾನಿಸೆ ಮುಂದೆ ಗಿರಿಶರು |
ಹಲಬರಾಗಲಿಕವರ ಜಟೆಯೊಳು |
ನಿಲಲುಬೇಕೆಂಬುದನು ಮರೆತೆಯದೇಕೆನೀನೆಂದ || ೧೪

ಸುರತಟಿನಿ ನೀನಖಿಳಶರಣರ |
ಹರನಸಾರೂಪ್ಯವನು ಕರುಣಿಸಿ |
ಪೊರೆವೆಯದರಿಂದವರಿಗಾಭರಣಾರ್ಥವಾಗಿರಲು ||
ಅರಿತಡೆಯು ನೀನಶುಚಿಯೆಂಬುದ |
ನರರುಬಿಡುವಸ್ಥಿಯನು ನಿನ್ನಲಿ |
ಧರಿಸಿಪೊರೆಯುವೆ ನಿನ್ನ ಕೃಪೆಸಾಮಾನ್ಯವಲ್ಲೆಂದ || ೧೫

ಹರಶಿರೋಮಂಡನೆಯೆ ನಿನ್ನಯ |
ಪರಮಪಾವನಜಲತುಷಾರವ |
ನರರುಸೋಂಕಿದಮಾತ್ರದಿಂದಲೆ ತೊರೆದು ಕಲಿಮಲವ ||
ಸುರಪುರವ ಸೇರುತ್ತಲಲ್ಲಿಯ |
ಸುರಸತಿಯರಂಕಪ್ರದೇಶದೆ |
ಪರಿಹೃತಶ್ರಮರಾಗಿ ಪಡೆವರು ಸುಖಪರಂಪರೆಯ || ೧೬

ಭುವನವಿದಭೇದಿಸುತ ನೀನಾ |
ಶಿವಜಟಾವಲ್ಲಿಯನು ಪೆರ್ಚಿಸು |
ತವನಿಗಿಳಿದೈತಂದು ಹೇಮಾಚಲದಶಿಖರಗಳ ||
ಅವಗಡಿಸಿ ಚದುರಿಸುತ ಬಂದೀ |
ಭುವನನಿಧಿಯನು ಸೇರಿ ರಂಜಿಪ |
ಹವಣಬಣ್ಣಿಸಲಳವೆ ಪಾಲಿಪುದೆನ್ನ ಕರುಣದಲಿ || ೧೭

ಜಲವನೀಂಟುವ ಕರಿಯ ಕುಂಭ |
ಸ್ಥಲದಲುಲಿಯುವ ವರಶಿಲೀಮುಖ |
ಬಳಗದಿಂದಲೆ ಕೃಷ್ಣ ಮುಳುಗುವ ಸಿದ್ಧತರುಣಿಯರ ||
ಚಲಿತಕುಚಕರ್ದಮದೆ ಕುಂಕುಮ |
ಕಲೆತು ವಿಪ್ರರು ಪೂಜಿಸುತ್ತಿಹ |
ಲಲಿತಸುಮದಿಂ ಶುಭ್ರವಾಂತಿಹ ಗಂಗೆ ಕರುಣಿಪುದು || ೧೮

ವಿಧಿಕಮಂಡಲುದಲ್ಲಿ ತುಂಬಿ |
ದುರ್ಗದಧಿಶಯನನ ಪರಮಪಾವನ |
ಪದನಖದ ತುದಿಯಿಂದಲಾವಿರ್ಭವಿಸಿ ಮುದವೆರೆಸಿ ||
ಮದನವೈರಿಯ ವರಕಪರ್ದದಿ |
ಪದುಳದಿಂದಾಭರಣವಾಗಿಹ |
ಸದಯೆ ಜಾಹ್ನವಿ ನೀನು ರಕ್ಷಿಪುದೆನ್ನನನವರತ || ೧೯

ವರಧರಿತ್ರೀಧರದೆ ಸಲಿಯುವ |
ತರಿಸಿ ನಿಜಜಲದೊಳಗೆ ಮಿಂದಾ |
ನರರ ನೆರೆಯುದ್ಧರಿಸಿ ಜಲಧಿಯಬೆರೆಸಿ ಭವಭಯವ ||
ಹರಿಸಿ ಕಾಶೀಪ್ರಾಂತ್ಯದೊಳು ಸಂ |
ಚರಿಸಿ ಲೋಕವಪೊರೆವ ಜಲಧಿಪ |
ನರಸಿ ಪಾಲಿಪುದೆನ್ನ ಭಾಗೀರಥಿಯೆ ದಯವೆರೆಸಿ || ೨೦

ಎಲೆ ಜಗಜ್ಜನಯಿತ್ರಿ ನಿನ್ನೀ |
ಯಲಘುಪಾವನಜಲವನೀಂಟಿದ |
ಬಲುಮೆಯಿಂ ನರಪಡೆವನಾಪೀತಾಂಬರನ ಪದವ ||
ಜಲದೊಳಾಳುತ ಮೃತಿಯನೈದಲು |
ಸಲೆಮುಖಾಳಿಯನೆಸಗೆ ದೊರೆಯುವ |
ಫಲಕೆ ನೂರ್ಮಡಿಯಪ್ಪ ಪುಣ್ಯವು ನರಗೆ ದೊರಕುವುದು || ೨೧

ಪರಮಪಾವನೆ ನಿನ್ನ ತೀರದೆ |
ವರಜಲಾಶನಮಾತ್ರದಿಂ ನಾ |
ನಿರುತ ತೃಷ್ಣೆಯಗೆಲಿದು ನಾರಾಯಣನ ಪದಯುಗವ ||
ಪರಮಭಕ್ತಿಯೊಳೊಲಿದು ಪೂಜಿಪ |
ತೆರನ ಕರುಣಿಸು ದೇವಿ ಜಾಹ್ನವಿ |
ಪರಮಮಂಗಳತರತರಂಗೆಯೆ ಗಂಗೆ ನೀನೊಲಿದು || ೨೨

ವರದೆ ಜಾಹ್ನವಿ ನಿನ್ನ ತೀರದೊ |
ಳಿರುವ ಜನರಿಗೆ ಮರಣಕಾಲದಿ |
ದೊರೆವುದೈಸಲೆ ಹರಿಯ ಚರಣಸ್ಮರಣೆ ಸುಲಭದಲಿ ||
ಕರವಜೋಡಿಸಿ ನಿನ್ನ ಚರಣದೊ |
ಳೆರಗಿ ಬೇಡುವೆನೆನಗೆ ಕರುಣಿಸು |
ಹರಿಹರಾದ್ವೈತಾಖ್ಯಮತಿಯನು ದಿವ್ಯಶುಭತತಿಯ || ೨೩

ಈ ಪರಿಯೊಳಾ ಸಂಯಮಿಯು ದೇ |
ವಾಪಗೆಯನುತಿಸುತ್ತ ತತ್ವದ |
ರೂಪವನು ಶಿಷ್ಯಾಳಿಗೊಲವಿಂ ಬೋಧಿಸುತ್ತಿರಲು ||
ಆ ಪರಮಪಾವನರು ಬೋಧೆಯ |
ನಾಪನಿತ ಭಾವಿಸುತಲಿರುತಿರೆ |
ತಾಪಸೋತ್ತಮ ಕೇಳು ಹರೆದುದು ವಾರ್ತೆಯಾಶ್ರಮದೆ || ೨೪

ವೇದವೇ ಪ್ರಾಮಾಣ್ಯವೆಂಬುದ |
ಸಾಧಿಸುತ ಪರ್ವತದ ತುದಿಯಿಂ |
ಮೇದಿನಿಗೆ ದುಮ್ಮಿಕ್ಕಿ ದೇಹಕೆ ಬಾಧೆಯಿಲ್ಲದೆಲೆ ||
ಭೂದಿವಿಜಕರ್ಮವನು ಪೆರ್ಚಿಸು |
ತಾದಿವಿಜಸಂತತಿಗೆ ಹವಿಗಳ |
ಮೋದದಿಂ ಕೊಡಿಸಿದ ಮಹಾತ್ಮನು ಭಟ್ಟಪಾದಮುನಿ || ೨೫

ಸಕಲನಿಗಮಾಗಮದ ಸಾರವ |
ಸುಕರಮನೆ ತಾಂ ತಿಳಿದು ಲೋಕ |
ಪ್ರಕಟಕೀರ್ತಿಯ ತಳೆದ ಮಹದಾಸ್ತಿಕಶಿರೋಮಣಿಯು ||
ಅಕಟ ತನ್ನಯ ಗುರುವ ವಾದದಿ |
ಯುಕುತಿಯಿಂ ಖಂಡಿಸಿದ ದೋಷಕೆ |
ವಿಕಟಧೈರ್ಯದಲಿತ್ತ ನಿಜ ದೇಹವ ತುಷಾನಲಗೆ || ೨೬

ಪರಮನಾಸ್ತಿಕರೆನಿಪ ಬೌದ್ಧರ |
ನೆರವಿಯನು ನಾವೂವಶೇಷದ |
ಲೊರಸಿ ಸುಬ್ರಾಹ್ಮ್ಯವನು ಪಾಲಿಸಿ ವೇದಕರ್ಮಗಳ ||
ಪೊರೆದವರದಾತಾರನೀಗಲು |
ತೊರೆವನಕಟಕಟೆಂಬವಾರ್ತಾ |
ಭರವುತುಂಬಿದುದಾಗ ಭಾರದ್ವಾಜನಾಶ್ರಮದೆ || ೩೭

ಕೇಳಿತದ್ವಾರ್ತೆಯನು ಯತಿಕುಲ |
ಮೌಳಿ ಕಡುಬೇಗದಲಿ ಶಿಷ್ಯರ |
ಮೇಳದಿಂದೈತಂದನಾ ಷಾಣ್ಮಾತುರನ ಬಳಿಗೆ ||
ಮೌಳಿಮೇಲಿರಲುಳಿದದೇಹವ |
ಹೂಳಿ ತುಷೆಯಲಿ ಹವ್ಯವಾಹನ |
ಮೇಳವಿಸಿಕೊಂಡಿರಲು ಕಂಡನು ಭಟ್ಟಪಾದನನು || ೩೮

ದಹನ ತುಷೆಯೊಳು ಪೆರ್ಚಿ ದೇಹವ |
ದಹಿಸುತಿರೆ ಲೆಕ್ಕಿಸದೆ ಧೈರ್ಯವ |
ವಹಿಸಿಕೊಂಡಿರಲಾಪ್ರಭಾಕರಮುಖ್ಯಶಿಷ್ಯಜನ ||
ಸಹಿಸಲಾರದೆ ಬಹುನಿರೋಧವ |
ನಹಹ ಗತಿಯೇನೆನುತಲಿರಲಾ |
ಮಹಿಮಭಟ್ಟನಬಳಿಗೆ ಬಂದನು ಬಾಲಶಶಿಮೌಳಿ || ೩೯

ಆಮಹಾನಲನಿಂದ ಹೊರಡುವ |
ಧೂಮವಾವರಿಸಿರ್ಪ ಮುಖ ಜಲ |
ಧೂಮಬಿಡದಾವರಿಸಿಕೊಂಡಿರೆ ಕೊಳನಮಧ್ಯದಲಿ ||
ತಾಮರಸ ತೋರ್ಪಂತೆ ರಂಜಿಸ |
ಲಾಮಹಿಮವರಭಟ್ಟಪಾದನು |
ವಾಮದೇವನ ಬರವ ಕಂಡನಪಾಂಗದೃಷ್ಟಿಯಲಿ || ೪೦

ಶ್ರುತಿಮುಖದಲಾವನಮಹಾತ್ಮೆಯ |
ನತಿಶಯದಿ ತಾಂ ತಿಳಿದು ಹರ್ಷೋ |
ನ್ನತಿಯುತಾಳುತಲಾವಮಹಿಮನ ದರ್ಶನೋತ್ಸವವ ||
ಹಿತದಿ ಬಯಸುತಲಿದ್ದನಾ ಪಶು |
ಪತಿಯ ಕಾಣುತ ಭಟ್ಟಪಾದನು |
ಯತಿಯ ಪೂಜಿಸೆ ತನ್ನ ಶಿಷ್ಯರಿಗಾಗ ನಿಯಮಿಸಿದ || ೩೧

ಗುರುವರನ ನೇಮದಲಿ ಶಿಷ್ಯರ |
ನೆರವಿ ಭಿಕ್ಷೆಯನಿತ್ತು ಪೂಜಿಸ |
ಲುರುದಯಾನ್ವಿತನೆನಿಪಶಂಕರಯತಿಯು ಬಳಿಕದನು ||
ನೆರೆಪರಿಗ್ರಹಿಸುತ್ತ ಸಂಭ್ರಮ |
ವೆರೆಸಿ ತಾನಾಬ್ರಹ್ಮಸೂತ್ರಕೆ |
ವಿರಚಿಸಿದ ಭಾಷ್ಯವನು ಪರಿಕಿಸಲಿತ್ತನಾದ್ವಿಜಗೆ || ೩೨

ಭುವನದೊಳು ಕವಿರಚಿತಕಾವ್ಯ |
ಪ್ರವರತಾಂ ನಿರ್ದುಷ್ಟವಾಗಿಯೆ |
ತವೆ ವಿರಾಜಿಸುತಿರುವುದಾದರು ಶಿಷ್ಟಜನರದನು ||
ವಿವರಗೊಳಿಸಲು ಕೀರ್ತಿಸಂಭವಿ |
ಸುವುದು ಕಾವ್ಯಕ್ಕೆನುತ ಪಶುಪತಿ |
ಯವಿರಳದ ಕೃಪೆಯಿಂದ ಕೊಟ್ಟನು ಮುನಿಗೆ ಪುಸ್ತಕವ || ೩೩

ಕೊಂಡನಾಭಾಷ್ಯವನು ಶಾಸ್ತ್ರೋ |
ದ್ದಂಡಪಂಡಿತಭಟ್ಟಪಾದನ |
ಖಂಡಸಂತೋಷವನು ತಾಳ್ದನು ತನ್ನ ಚಿತ್ತದಲಿ ||
ದಂಡಕಾಷಾಯಗಳ ತಾಳಿಹ |
ಖಂಡಪರಶುವಿಗೆರಗಿ ಮನದೊಳು |
ಚಂಡಮತಿನೆರೆತಿಳಿದನಾಭಾಷ್ಯಾರ್ಥಸಂಗತಿಯ || ೩೪

ವರಯುತಿಯೆ ಲಾಲಿಪುದು ನಾನೀ ।
ಮರಣದೀಕ್ಷೆಯನೀಗಲಂಗೀ ।
ಕರಿಸಿರುವೆನದರಿಂದ ನಿನ್ನೀ ಭಾಷ್ಯವಾರ್ತಿಕವ ॥
ವಂನಿಬಂಧನೆಗಳನು ವಿರಚಿಪ ।
ಪರಮಸುಕೃತಕೆ ದೂರನಾದೆನು ।
ಧರಣಿಯೊಳು ದೈವಾಜ್ಞೆಯಪ್ರತಿಹತವಲೇ ಯೆಂದ ॥ ೩೫

ಅದು ನಿಲಲಿ ಪ್ರಾಚೀನಜನ್ಮದಿ ।
ಪದಪಿನಿಂ ನಾಂಗೈದ ಪುಣ್ಯವಿ ।
ದೊದವಿಸಿತು ನಿನ್ನತುಲಪಾವನ ಚರಣದರ್ಶನದ ॥
ವಿದಿತಸೌಭಾಗ್ಯವನು ಕೇಳ್ವೈ ।
ಸದಮಲನೆ ನಾಂಧನ್ಯನಾದೆನು ।
ಮುದದಿಲಾಲಿಪುದೆನ್ನ ವಿಜ್ಞಾಪನೆಯನಿದನೆಂದ ॥ ೩೬

ಕಾಲವೇಜನಿಯಿಪುದು ಮನುಜನ ।
ಕಾಲವಿಷ್ಟಾರ್ಥವನು ಕುಡುವುದು ।
ಕಾಲದಿಂದಲಿ ನರನು ಪಡೆವನು ವಿಪುಲದುಃಖಗಳ ॥
ಕಾಲವೇ ದುಃಖವನು ಹರಿಪುದು ।
ಕಾಲವನು ಜಯಿಸುವೊಡೆ ಜಗದೊಳು ।
ಕಾಲಕಾಲಂಗಾಗದೆಂದನು ವಿಪ್ರನಸುನಗುತ ॥ ೩೭

ನಿನ್ನಚರಿತಾಮೃತವ ಲಾಲಿಸಿ ।
ಮುನ್ನವೇ ದರ್ಶನವ ಕಾಮಿಸಿ ।
ಸನ್ನುತನೆ ನಾನಿರಲು ದೃಷ್ಟಿಪಥಕ್ಕೆ ನೀನೀಗ ॥
ನನ್ನಿಯಿಂ ಗೋಚರಿಸಿದೈ ಸಂ ।
ಪನ್ನಯತಿವರ ಮನುಜನಿಚ್ಛಿಸ ।
ಲುನ್ನತೇಷ್ಟಾರ್ಥಗಳು ಲಭಿಪುದೆ ಕಾಲವೊದವದಿರೆ ॥ ೩೮

ವಿರಚಿಸಿದೆ ನಾಂ ಶ್ರುತಿಗೆ ಬಹುವಿಧ |
ವರನಿಬಂಧನೆಗಳನು ಮತ್ತೀ |
ಧರೆಯೊಳೆನ್ನಿಂ ಕರ್ಮಮಾರ್ಗವು ನಿರ್ಣಯಿತವಾಯ್ತು ||
ನೆರೆ ನಿರಾಕರಿಸಿದೆನು ತಾರ್ಕಿಕ |
ರುರುತರದ ಯುಕ್ತಿಗಳ ಸುಲಭದಿ |
ಪರಿಹರಿಸಲಸಮರ್ಥನಾಗಿಹೆ ನಾನು ಕಾಲವನು || ೩೯

ಎಂದು ಭಟ್ಟಾಚಾರ್ಯ ಪೇಳ |
ಲ್ಕಿಂದುಧರನಾಲಿಸುತ ಬಳಿಕಿಂ |
ತೆಂದನಾತನ ಕುರಿತು ಕೇಳೈ ದ್ವಿಜಕುಲೋತ್ತಮನೆ ||
ಸಂಧಿಸಿತು ನಿನಗೇಕೆ ಬಹುನಿ |
ರ್ಬಂಧಕರಮೆನಿಪೀ ತುಷಾಗ್ನಿಯ |
ಬಂಧನವು ಪೇಳೇಕೆ ಪರಿಹರಮಲ್ಲ ನಿನಗೆನುತ || ೪೦

ಆದೊಡಾಲಿಸು ಯತಿವರೇಣ್ಯನೆ |
ಮೇದಿನಿಯೊಳಾಂ ದ್ವಿವಿಧಪಾಪದ |
ಹಾದಿಯಲಿ ಚರಿಸಿದೆನು ಸಂಚಿತಕರ್ಮಫಲದಿಂದ ||
ವೇದವೇ ಪ್ರಾಮಾಣ್ಯವೆಂಬುದ |
ವಾದಿಸುತ ನಾಸ್ತಿಕತಥಾಗತ |
ವಾದಿಗಳ ಭೇದಿಸುತಲಿರ್ದೆನು ಗುರುಕಟಾಕ್ಷದಲಿ || ೪೧

ವೇದವೈರಿಗಳಾದ ಸೌಗತ |
ವಾದಿಗಳು ಧರೆಯೊಳಗೆ ನಾಸ್ತಿಕ |
ವಾದದಿಂದಲೆ ಜನರ ಬೋಧಿಸಿ ವೇದಕರ್ಮಗಳ ||
ಹಾದಿಯನು ನೆರೆಕೆಡಿಸಿ ಪರಿಕಿಸೆ |
ವೇದ ಪೂರ್ವಾಪರವಿರೋಧದಿ !
ಬಾಧಕವು ತಾನೆಂದು ಚರಿಸುತಲಿರ್ದರನವರತ || ೪೨

ಧರೆಯೊಳೀಪರಿ ಬೋಧೆಗೈಯುತ ।
ನೆರವಿಯಿಂದೊಡಗೂಡಿ ರಾಜ್ಯದ ।
ದೊರೆಯನಾಶ್ರಯಿಸುತ್ತಲಾತನ ಕರುಣಕೀಡಾಗಿ ॥
ಧರೆಯಿದೆಮ್ಮದು ದೊರೆಯು ನಮ್ಮವ ।
ನುರುತರದ ಸೌಗತಸುಧರ್ಮವೆ ।
ಪರಮನಿರ್ಣಯವೆಂದು ಗರ್ವಿಸುತಿರ್ದ್ದರಡಿಗಡಿಗೆ ॥

ಇಂತು ನಿಗಮಾಗಮಗೆಳಡಗಿ ಸ ।
ಮಂತಭದ್ರನ ಮತದಬೋಧೆ ದು ।
ರಂತವಾಗಿಯೆ ಪೆರ್ಚಿ ನಾಸ್ತಿಕವಾದಜಲಧಿಯಲಿ ॥
ಸಂತತವು ಜಗವುಳುಗೆ ಬೌದ್ಧರ ।
ಸಂತತಿಚ್ಛೇದನಕೆ ಮಾರ್ಗವ ।
ದೆಂತು ದೊರೆಯುವುದೆನುತ ಚಿಂತಿಸುತಿರ್ದೆನಾನೆಂದ ।

ನಿಗಮಮಾರ್ಗವ ಖಂಡಿಸುತ್ತಿಹ ।
ಸುಗತನುಯಾಯಿಗಳ ಜಯಿಸಲು ।
ಬಗೆದು ನಾನವರೊಡನೆವಾದಿಸಿ ಜಯವ ಕಾಣದಲೆ ॥
ಮಿಗೆ ಮರುಗಿ ಮನದೊಳಗೆ ಬಳಿಕಾ ।
ಸುಗತಮತಧರ್ಮವನು ತಿಳಿದೊಡೆ ।
ಮಿಗೆ ಜಯಿಸಬಹುದೆನುತಲಾಲೋಚಿಸಿದೆ ಚಿತ್ತದಲಿ ॥

ಮನದೊಳೀಪರಿತಿಳಿದು ನಾನಂ ।
ದನುವಿನಿಂ ರೂಪವನು ವಂಚಿಸಿ ।
ವಿನಯದಿಂ ಸಾರಿದೆನು ಬೌದ್ಧರ ಗುರುವನೊಬ್ಬನನು ॥
ಅನುದಿನವು ನಾನವನ ಸೇವಿಸಿ ।
ಘನತರದ ಮಾಯಾವಿವಾದವ ।
ನನಿತುವನು ನೆರೆಕಲಿಯುತಿರ್ದೆನು ಯತಿಪಕೇಳೆಂದ ॥

ಇರುತಿರಲು ಬಳಿಕೊಂದು ದಿನವಾ |
ಗುರುವು ಪರವೇದೋಕ್ತಮಾರ್ಗವ |
ನರವರಿಸದತ್ಯಂತ ದೂಷಣೆಗೈಯಲದಕೇಳಿ ||
ಮರುಗುತಿರೆ ಚಿತ್ತದಲಿ ಕಣ್ಣಿಂ |
ದುರುಳೆ ದುಃಖಾಶ್ರುಗಳು ಕಾಣುತ |
ಲರಿದನಾತನು ವಿಪ್ರತಾನಹುದೆಂದುಚಿತ್ತದಲಿ || ೪೭

ಇವ ವಿಪಕ್ಷದಿಬಂದ ಮೋಸದೊ |
ಳಿವನನೆಂತಾದೊಡೆಯು ಕೊಲ್ಲದೊ |
ಡಿವನ ದೆಸೆಯಿಂ ಬೌದ್ಧಮತಕಪದೆಸೆಯು ಬಹುದೆಂದು ||
ಅವದಿರಾಲೋಚಿಸುತ ತನ್ನನು |
ನೆವದಿ ಗೋಪುರದಗ್ರಕೇರಿಸಿ |
ಬುವಿಗೆ ದೊಬ್ಬಿದರೇನ ಪೇಳುವೆನವರ ನಿರ್ದಯವ || ೪೮

ಉರುಳುರುಳಿ ಬೀಳುತ್ತಭಯದೊಳು |
ಪರನಿಗಮವೇ ಗತಿಯೆನುತ್ತಲೆ |
ಧರೆಗೆ ಬಿದ್ದೆನು ತೂಲರಾಶಿಯಮೇಲೆ ಬಿದ್ದಂತೆ ||
ಪರನಿಗಮ ಕೈಗಾಯ್ದುದೆನ್ನನು |
ಮರಳುತಲ್ಲಿಂ ಬಳಿಕ ಬಂದೆನು |
ದೊರೆಸುಧನ್ವನಬಳಿಗೆ ಬೌದ್ಧರಜಯಿಸಲಾನೆಂದ || ೪೯

ಬಂದಡೆನನ್ನನುಕಂಡು ನೃಪತಿಪು |
ರಂದರನು ಸಂಭ್ರಮವತಾಳುತ |
ಲಂದು ಸನ್ಮಾನಿಸಲು ಸೌಗತರೊಡನೆ ವಾಕ್ಕಲಹ ||
ಸಂಧಿಸಿತು ನಾಂ ವೇದಪರಶುಗ |
ಳಿಂದ ತರಿದೆನು ಬಹುಳಶಾಖಾ |
ವೃಂದದಿಂ ಕೂಡಿರ್ಪ ಸೌಗತಮತಮಹೀರುಹವ || ೫೦

ನರಪತಿಯುರೂಪವನು ತಾಳಿದ |
ಸುರಪನದಕಾಣುತ್ತ ನುಡಿದನು |
ಬರಿಯವಾಗ್ವೈಖರಿಯು ಜಯವಿದನೆಂತು ನಂಬುವೆನು ||
ವರಸಿಗೆನುವುತ ಸತ್ಯವೆನ್ನುತ |
ಗಿರಿಯತುದಿಯಲಿ ನಿಂದು ಸಾರಿದು |
ಧರೆಗೆ ನಿರಪಾಯದಲಿ ದುಮ್ಮಿಡಲದನು ನಂಬುವೆನು || ೫೧

ಎನಲದನು ಕೇಳುತ್ತಲೆನ್ನಯ |
ಮನದಿ ಧೈರ್ಯದ ತಳೆದು ನಿಗಮವ |
ನೆನೆದು ಗಿರಿತುದಿಗೇರಿ ಬಾಹುದ್ವಯವನೆತ್ತುತಲಿ |
ವಿನುತವೇದವು ಸತ್ಯವಾದೊಡೆ |
ನನಗಪಾಯವದಾಗದಿರಲೆಂ |
ದೆನುತ ಸಾರಿದು ಧರೆಗೆ ಬಿದ್ದೆನು ಯತಿಪಕೇಳೆಂದ || ೫೨

ವೇದವೇ ರಕ್ಷಿಸಿದುದೆನ್ನನು |
ಮೋದದಿಂದ್ಯೈತಂದೆ ನೃಪನೆಡೆ |
ಗಾದರಿಸಿದನು ತನ್ನನಾನೃಪಕುಲಶಿರೋಮಣಿಯು ||
ವೇದದಲಿ ಸಂದೇಹಪಟ್ಟೆನು |
ಸಾಧಿಸಿದೆ ನಾನೊಂದು ಪಾಪವ |
ವೇದವಿದಕೇಳೆಂದು ನುಡಿದನು ಭಟ್ಟಪಾದಮುನಿ || ೫೩

ದೊರೆಯು ತನ್ನನು ಮನ್ನಿಸುತ್ತಿರ |
ಲುರಿಮುಸಗಿ ಜಠರದಲಿ ಸೌಗತ |
ನೆರವಿ ಮಣಿಮಂತ್ರಾದಿ ದಿವ್ಯೌಷಧದಬಲದಿಂದ ||
ಗಿರಿಯತುದಿಯಿಂ ಬಿದ್ದುಬಂದೊಡೆ |
ಧರೆಗೆ ವೇದವು ಪೂಜ್ಯತಮವೆಂ |
ಬರಿವು ತಾನೆಂತೆನುತ ನುಡಿದುದು ರಾಜನಿದಿರಿನಲಿ || ೫೪




ಭಟ್ಟಪಾದರು ತುಷಾಗ್ನಿಯಲ್ಲಿರುವಾಗ್ಯೆ ಶ್ರೀಶಂಕರರು ದರ್ಶನವಂ ಕೊಟ್ಟುದು.

ಕೇಳಿ ಕಿಡಿಕಿಡಿಮಸಗಿ ನೃಪಕುಲ |
ಮೌಳಿ ಬೌದ್ಧರಕರೆದು ನುಡಿದನು |
ನಾಳೆ ತನ್ನಯ ಪ್ರಶ್ನೆಗುತ್ತರಪೀಯದಿದ್ದವರ |
ಕಾಲಪುರಿಗೈದಿಸುವೆ ಪೋಗಿರಿ |
ನಾಳೆಬನ್ನಿರೆನುತ್ತ ಸರ್ವರ |
ಬೀಳುಕೊಟ್ಟನು ಮರುದಿವಸವೆಲ್ಲರನು ಕರೆಸಿದನು || ೩೫

ಆರುಮರಿಯದತೆರದಿ ಘಟದೊಳು |
ಘೋರಸರ್ಪನನಿಟ್ಟು ಮುಚ್ಚಿಸಿ |
ಧಾರಿಣೀಪತಿಕೇಳ್ದ ಘಟದೊಳಗಿರುವುದೇನೆನುತ ||
ಭೂರಮಣ ಕೇಳ್ಸರ್ಪಮಿಹುದೆಂ |
ದಾರಿಪುಗಳರುಹಲ್ಕೆ ಬಳಿಕಾಂ |
ಮಾರಪಿತನಿಹನೆಂದುಪೇಳ್ದನು ಯತಿಪಕೇಳೆಂದ || ೩೬

ಪೇಳಿ ನಾನೀಪರಿಯೊಳಾಗಲಿ |
ತೋಳ ಘಟದೊಳಗಿಟ್ಟು ತೆಗೆದನು |
ನೀಲಮೇಘಶ್ಯಾಮವಿಗ್ರಹವೊಂದನದರಿಂದ ||
ತಾಳಿದನು ವಿಸ್ಮಯವ ನೆರೆ ಭೂ |
ಪಾಲನಾ ಶ್ರೀಹರಿಗೆವಂದಿಸಿ |
ಪೇಳಿದನು ಕೋಪಾನಲಂಗಾಸೌಗತರಪಣಿಯ || ೩೭

ಕೊಲಿಸಿದನು ಬಹುವಿಧದಯಂತ್ರೋ |
ಪಲದಲಾ ಸೌಗತರನನಿಬರ |
ಕೆಲರು ಭಯದಿಂದೋಡಿಪೋದರು ಹಿಮಗಿರಿಯದಾಂಟಿ ||
ಹಲಬರಿಗೆ ಕೊಲೆಯಾಯ್ತು ನಾಸ್ತಿಕ |
ರುಲುಹುನಿಂದುದು ವೇದಕರ್ಮದ |
ನೆಲೆ ಸುವಿಸ್ತರವಾಯ್ತು ಮಂಗಳವಾಯ್ತು ಜಗಕೆಂದ || ೩೮

ಒಂದುವರ್ಣವನರುಹಿದವ ಗುರು |
ವೆಂದು ಹಿರಿಯರು ಪೇಳುತಿರಲತಿ |
ಬಂಧುರದಿ ಸೌಗತರ ಶಾಸ್ತ್ರವನೆನಗೆ ಬೋಧಿಸಿದ ||
ಸಂದಗುರುವಿಗೆ ಲೋಕವರಿಯಲು |
ಮಂದಮತಿ ನಾಂ ದ್ರೋಹಗೈದೆನಿ |
ದೊಂದುಪಾಪವು ಘಟನೆಯಾಯ್ತೆನಗೆಂದನಾಮುನಿಪ ||

ಎರಡುವಿಧಪಾಪಗಳನೆಸಗುತ |
ಲೆರಡುಲೋಕಂಗಳಲಿ ದೊರೆಯುವ |
ಪರಮಸುಖಸದ್ಗತಿಗೆ ಬಾಹಿರನಾದೆನದರಿಂದ ||
ಧರೆಗೆ ಭಾರಕನಾದ ತನಗೀ |
ವರತುಷಾನಲನಿಂದ ದೇಹವ |
ನುರುಹಿಕೊಂಬುದೆ ಪರಮಪ್ರಾಯಶ್ಚಿತ್ತವಿಧಿಯೆಂದ ||

ಭಟ್ಟಪಾದನ ನುಡಿಯನಾಲಿಸು |
ತಟ್ಟಹಾಸದಿನಗುತ ಕಾಲನ |
ಮೆಟ್ಟಿದವನಿಂತೆಂದ ಕೇಳ್ದ್ವಿಜಕುಲೋತ್ತಮನೆ ||
ಅಟ್ಟಿಕೊಲ್ಲಲು ನಾಸ್ತಿಕರ ನೀಂ |
ಮುಟ್ಟಬಲ್ಲುದೆ ಪಾಪ ನಿನ್ನನು |
ಸುಟ್ಟುಕೊಳ್ಳಲದೇಕೆ ಕೇಳುವುದೆನ್ನಮಾತುಗಳ ||

ನಿಗಮವೇ ಪ್ರಾಮಾಣ್ಯವೆನ್ನುತ |
ನಗೆದತುದಿಯಿಂಧರೆಗೆ ದುಮುಕುತ |
ಲಗಣಿತದಕೀರ್ತಿಯನು ತಾಳಿದೆ ನೀನುಲೋಕದಲಿ ||
ನಿಗಮಮತವನು ಪೊರೆಯಲೋಸುಗ |
ನಗವಿರೋಧಿಯಮುಖದಿ ಕೊಲಿಸಿದೆ |
ಸುಗತನನುಯಾಯಿಗಳ ಪುಣ್ಯವಪಡೆದೆಯದರಿಂದ ||

## ಹದಿನೆಂಟನೆಯ ಸಂಧಿ

ನಿನಗಿದುವೆತೆರನಲ್ಲ ಕೈಳ್ಳೆ |
ವಿನುತಗುಣನಿಧಿ ಸೂತ್ರಭಾಷ್ಯ |
ಕ್ಕನುವಿನಿಂ ವಾರ್ತ್ತಿಕವ ವಿರಚಿಸೆ ನೀಂ ಸಮರ್ಥನಲೆ ||
ಅನಲಬಾಧೆಗೆ ಶಿಲುಕಿ ನಲುಗುವ |
ತನುವಿನಾಯಾಸವನು ತನ್ನೀ |
ವಿನುತಕರಕೋದಕದಿನಳಿಸುವೆನೇಳು ನೀನೆಂದ ೬೩

ಎಂದ ಶಂಕರನುಕ್ತಿಗಳ ನಾ |
ಸ್ಕಂದಕೇಳುತಲಮಿತಸಂಭ್ರಮ |
ದಿಂದ ನುಡಿದನು ಭೂತಪಂಚಕಗಳನು ನಿರ್ಮಿಸುವ ||
ಹೊಂದಿಸುವ ನಿನಗೀತುಷಾಗ್ನಿಯ |
ನಂದಿಸುವ ಸಾಮರ್ಥ್ಯವರಿದೇ |
ನಿಂದುಧರ ಲಾಲಿವುದು ತನ್ನೀಬಿನ್ನಪವನೆಂದ || ೬೪

ಶುದ್ಧನಾನಾದಡೆಯು ಲೋಕವಿ |
ರುದ್ಧಕರ್ಮವನೆಸಗಿದುದರಿಂ |
ಬದ್ಧನಾಗಿಹೆನ್ನೈಸೆ ಪ್ರಾಯಶ್ಚಿತ್ತಕರ್ಮದಲಿ ||
ಎದ್ದುಬಂದೊಡೆ ವೇದಕರ್ಮದ |
ಸಿದ್ಧಿತನಗೆಂತಹುದು ಕೇಳ್ಳೆ |
ಬುದ್ಧಿವಂತನೆ ತನಗಿದುವೆ ಸುವ್ರತವು ಧಿಟವೆಂದ || ೬

ಸಾರತರದದ್ವೈತತತ್ವವಿ |
ಚಾರವನು ನೆರೆ ಹೆರಹಲೋಸುಗ |
ಸಾರುವುದು ದಯೆಯಿಂದ ಮಂಡನಮಿಶ್ರಪಂಡಿತನ ||
ಭೂರಿ ಭಯಭಕ್ತಿಯಲಿ ಕರ್ಮವ |
ನಾರ ನೆರೆ ವಿರಚಿಸುತಲಿರ್ಪನು |
ಶಾರದೆಯು ಮಂಡನಗೆ ಸತಿಯಾಗಿಹಳು ಕೇಳೆಂದ || ೬

ಆತನೆನ್ನಯಶಿಷ್ಯನಹ ಹೋ |
ಗಾತನನು ನೆರೆಜಯಿಸು ಕೇಳೆ |
ನ್ನಾತನೇ ವಿರಚಿಪನು ಭಾಷ್ಯಕೆ ದಿವ್ಯವಾರ್ತ್ತಿಕವ ||
ಪ್ರೀತಿಯಿಂ ನೀನೆನಗೆ ತಾರಕ |
ಪೂತಮಂತ್ರವನೀಗಲರುಹೆಲೆ |
ಭೂತನಾಥನೆ ಪರಮಕರುಣಾಕರನೆ ಯತಿವರನೆ ||

ಎನಲು ಕೇಳುತಲಾಗಶಂಕರ |
ನನುವಿನಿಂದಾಭಟ್ಟಪಾದಗೆ |
ವಿನುತತಾರಕಮಂತ್ರದುಪದೇಶವನು ಕರುಣಿಸಲು ||
ಮನದೊಳಾಂತನು ಶಾಂತಿಯನು ಯತಿ |
ಗನುನಯದೊಳಭಿನಮಿಸಿ ಸಾರ್ದನು |
ಘನತರದ ಸಾಯುಜ್ಯಪದವನು ಭಟ್ಟಪಾದಮುನಿ ||

ಇಂತುಕರುಣಿಸಿ ಭಟ್ಟಪಾದಂ |
ಗಂತವಿಲ್ಲದ ಮೋಕ್ಷಪದವಿಯ |
ಕಂತುರಿಪುವಿರುತಿರಲು ಭಾರದ್ವಾಜನಾಶ್ರಮದೆ ||
ಚಿಂತಿತಾರ್ಥವನಾಂತು ಶಿಷ್ಯರ |
ಸಂತತಿಯು ಸೇವಿಸುತಲಿರ್ದುದು |
ಸಂತತವು ಬಹುವಿಧದಲಾ ಶ್ರೀಕಂಠದೇವನನು ||

ಸಂಧಿ ೧೮ ಕ್ಕೆ ಪದ್ಯ ೭೭೫ ಕ್ಕೆ ಮಂಗಳ.

ಇತಿ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ ಶ್ರೀಮಚ್ಛಂಕರಾಚಾರ್ಯ
ಪಾದಪದ್ಮಾರಾಧಕ ಶ್ರೀ ಶೃಂಗೇರಿಜಗದ್ಗುರು ಶ್ರೀ ಚಂದ್ರಶೇಖರಭಾರತೀ
ಸ್ವಾಮಿ ಗುರುಚರಣಾರವಿಂದ ಭೃಂಗ ಪೌರಾಣಿಕ ಸಾಲಿಗ್ರಾಮ
ಶ್ರೀಕಂಠಶಾಸ್ತ್ರಿ ವಿರಚಿತ ಕರ್ನಾಟಕ ಶಂಕರವಿಜಯ ಪದ್ಯಕಾವ್ಯದೊಳ್
ಪೂರ್ವಾರ್ಧಭಾಗಂ ಮಂಗಳಂ.
ಶ್ರೀ ಸದ್ಗುರುಚರಣಾರವಿಂದಾರ್ಪಣಮಸ್ತು.



ಶುಭಮಸ್ತು.

ಶ್ರೀ ಪಾರ್ವತೀಸಮೇತ ಶ್ರೀ ಶ್ರೀಕಂಠೇಶ್ವರ ಸ್ವಾಮಿನೇನಮಃ

ಕರ್ಣಾಟಕ

# ಶಂಕರವಿಜಯ

## ಉತ್ತರಾರ್ಧ

ಪದ್ಯಕಾವ್ಯ

## ಹತ್ತೊಂಭತ್ತನೆಯ ಸಂಧಿ.

ಸೂಚನೆ ॥ ಪೇಳಿದನು ಶೌನಕಗೆ ಲೋಕವ।
ಪಾಲಿಸಲು ಪರಮೇಷ್ಠಿ ಮಾನವ।
ಲೀಲೆಯಿಂಜನಿಯಿಸಿದ ಕಥೆಯನು ಸೂತನೊಲವಿನಲಿ॥

ಕೇಳು ಶೌನಕ ಕರ್ಮಕಾಂಡವ।
ಪಾಲಿಸಿದವರ ಭಟ್ಟಪಾದನು।
ಲೀಲೆಯಿಂದೈದಿದನು ಶಿವಸಾಯುಜ್ಯಪದವಿಯನು॥
ಬಾಲಶಶಿಧರನಾಗೆ ಶಿಷ್ಯರ।
ಜಾಲದಿಂದೊಡಗೂಡುತಲ್ಲಿಂ।
ಮೇಲೆ ಪಯಣವನೆಸಗಿ ಬರುತಿರ್ದನು ಸರಾಗದಲಿ॥ ೧

ಕಮಲ ಸಂಭವನೀಗ ನಿಗಮವ।
ಮಮತೆಯಿಂ ರಕ್ಷಿಸಲು ಜಗದೊಳ್।
ಗಮಲ ಬಾಡಬಕುಲದೆ ಮಂಡನಮಿಶ್ರನಾಮದಲಿ॥
ಸುಮತೆಯಿಂ ಜನಿಸಿರ್ದನವನಿಂ।
ವಿಮಲಭಾಷ್ಯಕೆ ವಾರ್ತಿಕವ ತಾಂ।
ಕ್ರಮದಿನೆಗಳಿಪನೆನುತ ಶಂಕರಯತಿಯು ನಡೆತಂದ॥ ೨

ಎಂದ ಸೂತೋಕ್ತಿಯನು ಲಾಲಿಸು |
ತಂದು ಶೌನಕನುಡಿದ ನೊಲವಿಂ |
ತಂದೆ ಪೇಳ್ವೈ ಕಮಲಸಂಭವ ನೀಧರಿತ್ರಿಯಲಿ ||
ಬಂದು ಭಾರತಿಯೊಡನೆ ಮುದದಿಂ |
ಬಂಧುರದ ಗಾರ್ಹಸ್ಥ್ಯಧರ್ಮಾದಿ |
ನಿಂದ ಪರಿಯನು ತಮಗೆ ವಿಸ್ತರದಿಂದಲೆಂದೆನುತ ||

ಎನಲು ಕೇಳ್ದಾಸೂತ ಹರ್ಷವ |
ಮನದಿ ತಾಳುತ ಕೇಳು ಭೃಗುಕುಲ |
ವನಧಿಚಂದ್ರನೆ ಸುಗುಣಸಾಂದ್ರನೆ ಕರ್ಮಕಾಂಡವನು ||
ವನಜಭವನುದ್ಧರಿಸಲೋಸುಗ |
ವಿನುತನಾಹಿಮುಮಿತ್ರಭಟ್ಟಗೆ |
ಜನಿಸಿದನು ಸುತನಾಗಿ ಧರಣಿಯೊಳೆಂದು ಪೇಳಿದನು || ೪

ಸುತನನಾಹಿಮುಮಿತ್ರ ಬಂಧು |
ಪ್ರತತಿಯುತ್ಸಾಹಿಸಲು ಕರೆದನು |
ಹಿತದಿ ಮಂಡನಮಿಶ್ರನೆಂಬಾನಾಮಧೇಯದಲಿ ||
ಅತಿಶಯದ ಮಮತೆಯಲಿ ಜನನಿಯು |
ಸುತನ ಕರೆದಳು ವಿಶ್ವರೂಪಾಂ |
ಕಿತದೊಳೀಪರಿ ನಾಮವೆರಡಾಯ್ತು ಜಗೆ ಕೇಳೆಂದ || ೫

ವರವಿರಿಂಚಿಯು ಮನುಜಶಿಶುವಿನ |
ತೆರದೊಳಾಡುತ ಬಾಲಲೀಲೆಯ |
ನಿರದೆ ತೋರುತ ತಂದೆತಾಯ್ಗಳಿಗತುಲಹರ್ಷವನು ||
ವಿರಚಿಸುತ ಬೆಳೆಯುತ್ತಲಿರ್ದನು |
ಸುರಚಿರದ ಮಾಹಿಷ್ಮತೀಪುರ |
ವರದೊಳಗೆ ಕೇಳೆಂದು ನುಡಿದನು ಸೂತಶೌನಕಗೆ || ೬

ಜಡಜಪೀಠದೊಳಿದ್ದು ನಾಲುಕು |
ಕಡೆಗೆ ಮುಖಗಳ ಧರಿಸುತೊಂದೇ |
ಯೆಡೆಯೊಳಿರೆ ಜಡತನವು ತನಗಾವರಿಸಿಕೊಂಡಿರಲು ||
ಜಡಜ ಪೀಠವನುಳಿಯುತೊಂದೇ |
ಕಡೆಗೆ ಮುಖವನು ಧರಿಸಿ ಬಾಲ್ಯದ |
ಕಡಗರದೊಳಿರ್ಪಂತೆ ವಿಧಿರಂಜಿಸಿದ ಜನಮನಕೆ || ೭

ಪೊರೆಯಲೋಸುಗ ಕರ್ಮಕಾಂಡವ |
ಸುರಕುಲಕೆ ನೆರೆ ಹಿರಿಯನಾದವ |
ಧರಣಿಯಲಿ ಜನಿಯಿಸುತ ಹಿಮಮಿತ್ರಾರ್ಯನಾಮಕನ ||
ವರಗೃಹದಿ ತಾಂ ಕಿರಿಯ ನೆನಿಸಿದ |
ನೊರೆವುದೇಂ ಪರಕಾರ್ಯನಿಷ್ಠರು |
ಸರಕುಗೈವರೆ ತಮ್ಮ ನಷ್ಟವನೆಂದನಾ ಸೂತ || ೮

ಜನವು ತನ್ನ ಜಗತ್ಪಿತಾಮಹ |
ನೆನುತಲೊರೆವಾ ಕತದಿ ವರವಾ |
ಗ್ವನಿತೆ ತನ್ನನು ವೃದ್ಧನೆನ್ನುತ ನಾಚಿಸುವಳೆನುತ ||
ತನಗೆ ತಾನೇ ಜನಿಸಿದಾತನು |
ವಿನಯದಿಂ ಹಿಮಮಿತ್ರಭಟ್ಟಗೆ |
ತನುಜನಾದನು ಯೌವನನವತಾಂಕ್ರಮದೊಳಾರ್ಜಿಸಲು || ೯

ಈ ತೆರದಿ ಪರಮೇಷ್ಠಿಬಾಲ್ಯದ |
ಕೌತುಕದಿ ಮೆರೆಯುತಿರೆ ಬಳಿಕಲ |
ತೀತವಾಗಲು ವರುಷವೆರಡಾತಂದೆ ಹರ್ಷದಲಿ ||
ಸಾತಿಶಯದಿಂ ಚೌಲಕರ್ಮವ |
ನೋತು ವಿರಚಿಸಿ ಸಕಲ ಬಂಧು |
ವ್ರಾತವನು ಸಂತುಷ್ಟಿಗೊಳಿಸಿದ ದಾನ ಮಾನದಲಿ || ೧೦

ವೇದಪುರುಷಂಗೊಲಿದು ವಿದ್ಯೆಯ |
ನೋದಿಸಲು ಪಿತನಾಗ ಕಲೆಗಳ |
ಮೋದದಿಂ ನೆರೆ ಕಲಿತು ವರಶಬ್ದಾದಿಶಾಸ್ತ್ರಗಳ ||
ಓದಿಸುವ ಗುರುಗಳಿಗೆ ಪರಮಾ |
ಹ್ಲಾದಮಾಗುವ ತೆರದೆ ಕಲಿತನ |
ನಾದಿ ಸಿದ್ಧಂಗರಿದೆ ಲೌಕಿಕವಿದ್ಯೆ ಭಾವಿಸಲು ||

ಜನನಿಯನು ಜನಕನನು ತಾನತಿ |
ವಿನಯದಿಂ ಸೇವಿಸುತ ವಿದ್ಯೆಯ |
ನನಿತುವನು ನೆರೆ ಕಲಿತು ಸಕಾಲಭಿಜ್ಞನೆಂದೆನಿಸಿ ||
ವನಜಸಂಭವನಿರಲು ಬಳಿಕಾ |
ಯ್ತನುವಿನಿಂ ಸಪ್ತಾಬ್ದವದನಾ |
ಜನಕನರಿದುಪನಯನಕರ್ಮವನೆಸಗಲನುಗೈದ ||

ಜ್ಯೋತಿಷಜ್ಞರ ಕರೆಸಿ ಬಹು ಸಂ |
ಪ್ರೀತಿಯಲಿ ಮನ್ನಿಸುತ ಸಾರಸ |
ಜಾತಗುಪನಯನವನು ವಿರಚಿಸೆ ವರಮುಹೂರ್ತವನು ||
ನೀತವಿದ ನಿರ್ಧರಿಸಿ ಬಂಧು |
ವ್ರಾತವನು ಬರಿಸಿದನು ಸಂತೋ |
ಷಾತಿಶಯದಿಂದೆಸಗಿದನು ಪುಣ್ಯಾಹವಾಚನೆಯ ||

ದೇವಪಿತೃ ಭೂಸುರರ ನೆರೆ ಸಂ |
ಭಾವಿಸುತ ಭಕ್ತಿಯಲಿ ವರಭೂ |
ದೇವರಾಜ್ಞೆಯಪಡೆದು ಸುಮುಹೂರ್ತದಲಿ ಭೂಸುರನು ||
ಕೋವಿದರುನಲಿವಂತೆ ವರಮಂ |
ತ್ರಾವಳಿಯ ಪೇಳಿಸುತಲಿತ್ತನು |
ದೇವದೇವಾಂಗಾಗಲಾ ಬ್ರಹ್ಮೋಪದೇಶವನು ||

ಶ್ರುತಿವಿಹಿತ ಕರ್ಮಗಳನೆಲ್ಲವ |
ನತಿಶಯದಿನೆಸಗುತ್ತ ಬಾಂಧವ |
ವಿತತಿಗತಿಹಿತವೆಸಗಿ ಹಿಮುಮಿತ್ರಾಖ್ಯ ಭೂಸುರನು ||
ಸತತ ವೇದಾದ್ಯಯನಗೈಯಲು |
ಸುತಗೆ ನೇಮಿಸಿ ಬೀಳುಕೊಟ್ಟನು |
ಕ್ಷಿತದೊಳಾಗಲು ಭಟ್ಟಪಾದಾಚಾರ್ಯನಿದ್ದೆಡೆಗೆ || ೧೫

ಜನಕನಾಜ್ಞೆಯನಾಂತು ಜನನಿಗೆ |
ವಿನಯದಿಂದಭಿನಮಿಸಿ ಬಾಂಡವ |
ಜನದನುಜ್ಞೆಯಪಡೆದು ವರರಾಜೀವಸಂಭವನು ||
ವಿನುತ ಗುರುಕುಲವಾಸಗೈಯಲು |
ಮನದ ಹರ್ಷದೊಳಂದು ಬಂದನು |
ಘನಮಹಿಮೆಯನು ತಾಳ್ದ ಸುಬ್ರಹ್ಮಣ್ಯನಾಶ್ರಮಕೆ || ೧೬

ಬಂದು ವಟುವಾ ಭಟ್ಟಪಾದಗೆ |
ವಂದಿಸುತ ಭಕ್ತಿಯಲಿ ಕರಗಳ |
ನೊಂದುಗೂಡಿಸಿ ಗುರುವರೇಣ್ಯನೆ ತನ್ನ ಬಿನ್ನಪವ ||
ಸಂದಸಂಪ್ರೀತಿಯಲಿ ಲಾಲಿಸಿ |
ತಂದೆ ವೇದಾಧ್ಯಯನವನು ನೀ |
ನಂದದಿಂ ಕರುಣಿಸುತಲೆನ್ನನು ರಕ್ಷಿಸುವುದೆಂದ || ೧೭

ಕೇಳುತಾ ಕ್ರೌಂಚಾರಿ ಹರ್ಷವ |
ತಾಳಿದನು ಚಿತ್ತದಿ ವಿರಂಚಿಯ |
ಲೀಲೆಯಿದು ನಿಜವೆಂದು ಭಾವಿಸಿ ಬಳಿಕ ನಸುನಗುತ ||
ಬಾಲಶಶಿಧರನಾಜ್ಞೆಯಿದೆಲಾ |
ಪಾಲಿಸಲು ಬೇಕೈಸೆ ನಿಗಮವ,
ಪೇಳುವೆನು ಜೈಮಿನಿಯ ಸೂತ್ರವನೀಗಲಿವಗೆಂದ || ೧೮

ಎನುತಗುಹನಿಶ್ಚೈಸಿ ತನ್ನಯ |
ಸನಿಹ ಕೈತಂದಾ ವಿಧಾತನ |
ವಿನಯದಿಂ ಕರೆಯುತ್ತ ವೇದಾಧ್ಯಯನವನುಗೈಸಿ ||
ಅನಘನಿಗೆ ವೇದಾರ್ಥವೆಲ್ಲವ |
ನನುವಿನಿಂ ಬೋಧಿಸುತಲಾತಗೆ |
ದಿನದಿನಕೆ ಕರ್ಮದಲಿ ಸುಶ್ರದ್ಧೆಯನು ಕರುಣಿಸಿದ ||

ಶ್ರುತಿವಿಹಿತ ಮಾರ್ಗದಲಿ ನಡೆದಾ |
ಕ್ರತುಗಳನು ವಿರಚಿಸುತ ದೇವ |
ಪ್ರತತಿ ಸಂತುಷ್ಟಿಯನು ನೆರೆ ನಿಷ್ಕಾಮದಲಿಮಾಡಿ ||
ಅತಿಥಿಗಳ ಪೂಜಿಸುತ ಸಂತತ |
ಸುತ ಗೃಹಸ್ಥಾಶ್ರಮದ ಧರ್ಮದ |
ಲತಿಶಯದ ಸದ್ಗತಿಯಪಡೆಯುವ ವಿಧವ ಬೋಧಿಸಿದ || ೨೧

ಕರ್ಮವೇ ಜಗದುದಯ ಕಾರಣ |
ಕರ್ಮವೇ ಪೊರೆಯುವುದು ಜಗವನು |
ಕರ್ಮದಿಂದಲೆ ಲೋಕವಿದುತಾನಿಧನವೈದುವುದು ||
ಕರ್ಮವೇ ಮೋಕ್ಷೈಕಸಾಧನ |
ಕರ್ಮವನು ಬಿಡಲಾಗದದರಿಂ |
ಕರ್ಮವೇ ಸುಬ್ರಹ್ಮವೆಂಬುದನೊಲಿದು ಬೋಧಿಸಿದ || ೨೨

ವರಗೃಹಸ್ಥಾಶ್ರಮವ ಕೈಕೊಂ |
ಡಿರುತ ಲಧ್ಯಾಪನವುತರ್ಪಣ |
ನೆರೆ ಸುಹೋಮವು ಬಲಿಸಮರ್ಪಣವತಿಥಿಪೂಜೆಗಳ ||
ನಿರತವೆಸಗುತ ಯಜ್ಞಕರ್ಮದಿ |
ಸುರರ ಸಂತುಷ್ಟಿಯನುಗೈವುದು |
ಪರಮ ಮೋಕ್ಷಕೆ ತಕ್ಕಸಾಧನವೆಂದು ಕರುಣಿಸಿದ || ೨೩



ಮಂಡನಮಿಶ್ರರು ಗುರುಕುಲವಾಸದಿಂದ ಮನೆಗೆ ಬಂದುದು.

ಪದುಮಜಾತಗೆ ಪೂರ್ವಮೀಮಾಂ |
ಸದ ವಿಚಾರ ಸಮಸ್ತವನು ತಾಂ |
ವಿದಿತಮೆನೆ ಬೋಧಿಸುತಲರುಹಿದ ಕರ್ಮಕಾಂಡವನು ||
ಪದುಳದಿಂದುದ್ಧರಿಸುಗಾರ್ಹ |
ಸ್ಥ್ಯದಲಿ ಚರಿಸುತಲಿರು ಸದಾಶಿವ |
ಮುದದಿ ಕೃಪೆಮಾಡುವನು ನೀ ನಡೆಯೆನುತಲಾ ಭಟ್ಟ | ೨೭

ಎನೆ ಹಸಾದವೆನುತ್ತ ವಂದಿಸಿ |
ವನಜಸಂಭವನಾ ಸತೀರ್ಥರ |
ನನಿಬರನು ಬೀಳ್ಕೊಂಡು ಲಬ್ಧಾನುಜ್ಞನಲ್ಲಿಂದ ||
ವಿನಯದಿಂ ಪೊರಮಟ್ಟು ತನ್ನಯ |
ಜನಕ ಜನನೀ ಮುಖ್ಯಬಾಂಧವ |
ಜನವ ನೆನೆಯುತ ಬಂದನಾ ಮಾಹಿಷ್ಮತೀಪುರಕೆ || ೨೮

ಇತ್ತಲಾ ಹಿಮಮಿತ್ರಭಟ್ಟನು |
ಚಿತ್ತದಲಿ ಪುತ್ರನನು ನೆನೆಯುತ |
ಮತ್ತಕಾಶಿನಿಯೊಡನೆ ಖೇದಂಬಡುತಲಿರುತಿರಲು ||
ಚಿತ್ತದುತ್ಸಾಹ ವಡಗುವಂತ |
ತ್ಯುತ್ತಮದ ಶಕುನಂಗಳಾಗಲು |
ಕೃತ್ತಿವಾಸನ ನೆನೆದು ಪುತ್ರಾಗಮವ ಬಯಸಿದನು || ೨೯

ಬಂದನಾಸಮಯದಲಿ ಸುರಕುಲ |
ವಂದಿತಾಂಘ್ರಿ ಸರೋಜಯುಗ್ಮನು |
ತಂದೆತಾಯ್ಗಳಿಗೆರಗಿನಿಂದನು ಕರವಜೋಡಿಸುತ ||
ಕಂದನಾಗಮನವನು ಕಾಣುತ |
ಲಂದು ಹರ್ಷಾಶ್ರುಗಳು ಹೊನಲಿಡೆ |
ಚೆಂದದಿಂ ಬಿಗಿಯಪ್ಪುತೋಲಾಡಿದರು ಸಂಭ್ರಮಿಸಿ || ೩೦

ಕೂಡೆ ಮೈದಡವಿದರು ಮಿಗೆ ಮುಂ |
ಡಾಡಿದರು ಸಂಭ್ರಮದಿ ಕೈಗಳ |
ನೀಡಿ ಮಗನನು ಶಳೆಯುತಂಕದಮೇಲೆ ಕುಳ್ಳಿರಿಸಿ ||
ನೋಡಿದರು ಕಣ್ದಣಿಯೆ ಪುನರಪಿ |
ಗಾಢ ಸಂತೋಷಾಂಬುನಿಧಿಯಲಿ |
ಮೂಡಿ ಮುಳುಗುತ್ತಿರ್ದರಾದಂಪತಿಗಳೊಲವಿನಲಿ ||

ಮಗನೆ ಗುರುಪದವನಜಯುಗ್ಮವ |
ನೊಗುಮಿಗೆಯ ಭಕ್ತಿಯಲಿ ಸೇವಿಸಿ |
ನಿಗಮನಿಗಮಾರ್ಥಗಳ ಗುರುಮುಖದಿಂದ ನೀನರಿತೈ ||
ಜಗದೊಳುತ್ತಮವೆನಿಪ ಮಾರ್ಗವು |
ಬಗೆಗೆ ಬಂದುದೆ ನಿನಗೆನುತ್ತಲೆ |
ಮಿಗೆ ಸುಸಂಪ್ರೀತಿಯಲಿ ಕೇಳ್ದರು ಜನಕ ಜನನಿಯರು ||

ಎನಲು ಕೇಳುತ ವಿಶ್ವರೂಪನು |
ವಿನಯದಿಂತಲೆವಾಗಿ ತವಪದ |
ವನರುಹದಕೃಪೆಯಿಂದ ಸಾರ್ದೆನು ಕರ್ಮಕಾಂಡವನು ||
ಅನುವಿನಿಂಪಾಲಿಸುತ ಸೌಗತ |
ರನು ವಿಭಾಡಿಸಿಗೆಲಿದ ಸಜ್ಜನ |
ವಿನುತ ಭಟ್ಟಾಚಾರ್ಯ ಸಾನ್ನಿಧ್ಯವನು ತಾನೆಂದು ||

ಆತಥಾಗತವೈರಿ ಬಹು ಸಂ |
ಪ್ರೀತಿಯಲಿ ನಿಗಮಾರ್ಥಸಾರವ |
ಸಾತಿಶಯದಿಂ ತನಗೆ ಬೋಧಿಸಲರಿದೆ ನಾನದನು ||
ಭೂತಲದಿ ಗಾರ್ಹಸ್ಥ್ಯಧರ್ಮದ |
ರೀತಿಯಲಿ ವರ್ತಿಪುದು ಮನುಜಗೆ |
ನೀತಿಯೆಂಬುದನಾತಸಲೆ ಕರುಣಿಸಿದನೆನಗೆಂದ || ೩೦

ಎನೆ ಸಮಾವೃತ್ತನ ನಿರೀಕ್ಷಿಸಿ |
ಜನಕನತಿ ಸಂತುಷ್ಟನಾದನು |
ಜನನಿ ಸಂಭ್ರಮಿಸಿದಳು ಬಾಂಧವರೆಲ್ಲ ಹರ್ಷಿಸಲು ||
ತನಯನಿವನುದಯಿಸಲು ವಂಶಕೆ |
ಘನಯಶಸ್ಕರವಾಯ್ತೆನುತ ಸ |
ಜ್ಜನಸಮಿತಿ ಕೊಂಡಾಡುತಿರ್ದುದು ನೆರಪಿ ನೆರವಿಯಲಿ || ೩೧

ಇಂತು ಬಾಂಧವರೆಲ್ಲರಿಗೆ ತವೆ |
ಸಂತಸವ ಬೀರುತ್ತ ಶಿಷ್ಯರ |
ಸಂತತಿಯೊಳಾಮ್ನಾಯಪಾಠವನೊಲಿದು ಬೋಧಿಸುತ ||
ಸ್ವಾಂತದಲಿ ಸಂತತವು ಗಿರಿಜಾ |
ಕಾಂತನಂಘ್ರಿದ್ವಯವ ಭಜಿಸುತ |
ನಂತನುಹಿಮವಿರಂಚಿಯೆಸೆದನು ಮಾನುಷಾಂಗದಲಿ || ೩೨

ಈ ಪರಿಯೊಳಿರುತಿರಲು ಕೇಳ್ಳೈ |
ತಾಪಸೋತ್ತಮ ಸತ್ಯಲೋಕದೊ |
ಳಾಪಿತಾಮಹಸಭೆಯೊಳೊಂದಾಯ್ತೇನ ಪೇಳುವೆನು ||
ಸಾಪರಾಧಿನಿಯಾಗಿ ಸರಸತಿ |
ಶಾಪವಾಂತಳು ಧರಣಿಯಲಿ ನರ |
ರೂಪನೊಂದುವುದೆಂಬ ತೆರದೊಳಗೆಂದನಾಸೂತ || ೩೩

ಒಂದುದಿನ ದೂರ್ವಾಸ ಯತಿಯಾ |
ನಂದದಿಂ ಪರಮೇಷ್ಠಿಸಭೆಯೊಳು |
ನಿಂದು ವೇದಾಧ್ಯಯನಗೈಯ್ಯುತ್ತಿರಲು ನಿಷ್ಠೆಯಲಿ ||
ಒಂದು ಕಡೆಯೋಳ್ ಸ್ವರವಿಲೋಪವ |
ನೊಂದಿರಲ್ಕದ ಕೇಳಿ ಹಾಸ್ಯದೊ | .
ಳಿಂದುಮುಖಿವಾಗ್ದೇವಿ ನಕ್ಕಳು ಯತಿಯನೀಕ್ಷಿಸುತ || ೩೪

ಕಂಡನದ ದೂರ್ವಾಸಮುನಿಪತಿ ।
ಕೆಂಡವಾದವು ಕಣ್ಗಳಾಗೆ ಕ ।
ಮಂಡುಲೋದಕ ಕುದಿದುದಾ ಕೋಪಾಗ್ನಿ ಕಿಡಿಯಿಡಲು ॥
ಹಿಂಡುವೆನು ನಿಮಿಷದಲಿ ಬೊಮ್ಮನ ।
ಹೆಂಡತಿಯ ಗರ್ವವನೆನುತ್ತು ।
ದ್ದಂಡ ಶಾಪವನಿತ್ತ ನರಲೋಕದಲಿ ಜನಿಯಿಸುವ ॥

ದೃಹಿಣಸತಿ ತಾನೆಂಬ ಗರ್ವವ ।
ವಹಿಸಿ ನೆರೆ ಸರ್ವಜ್ಞಳೆನ್ನುತ ।
ಮಹಿಮನೀತನ ತಿಳಿಯದಾದೆನು ರುದ್ರನಹುದೆಂದು ॥
ಬಹುಜನರಮಧ್ಯದಲಿ ಮಹಿಮನ ।
ನಹಹ ಹಾಸ್ಯವಗೈದ ತನಗಿದು ।
ವಿಹಿತವೆಂದಾವಾಣಿ ತನ್ನೊಳು ತಾನೆ ಸಲೆತಿಳಿದು ॥

ತಾಪಸೋತ್ತಮಗೆರಗಿ ಕೋಪಕ ।
ಲಾಪವನು ತಗ್ಗಿಸುತ ದಯದೆ ವಿ ।
ಶಾಪವನು ನಿರವಿಸಲು ಬೇಹುದೆನುತ್ತ ಬೇಡುತಿರೆ ॥
ಆ ಪಿನಾಕಿಯು ಯತಿವರೇಣ್ಯನ ।
ರೂಪವಾಂತುದ ಕಂಡ ಬಳಿಕೀ ।
ಶಾಪ ಪರಿಹರವೆನುತ ವಾಣಿಗೆ ಮುನಿಪ ಕರುಣಿಸಿದ ॥

ಈ ವಿಧ ವಿಶಾಪವನು ಕರುಣಿಸು ।
ತಾ ವಿರಂಚಿಯು ಬೀಳುಕೊಂಡಾ ।
ದೇವವಂದಿತ ಯತಿವರೇಣ್ಯನು ಸರಿದನಾಶ್ರಮಕೆ ॥
ಆ ವಿಧಾತನು ಕರ್ಮಕಾಂಡವ ।
ನೋವಲೋಸುಗ ಧರೆಯಲಿರೆ ವಾ ।
ಗ್ದೇವಿಯಾತನ ಸೇರೆ ಜನಿಯಿಸಿದಳು ಧರಿತ್ರಿಯಲಿ ॥

ಉರುತರದ ಶೋಣಾಖ್ಯತಟಿನೀ ।
ಪರಿಸರದ ವಿಪ್ರಾಗ್ರಹಾರದೊ ।
ಳಿರುವ ಭೂಸುರ ವಿಷ್ಣುಮಿತ್ರಾಚಾರ್ಯನೆಂಬಂಗೆ ॥
ವರತನುಜೆ ತಾನಾಗಿ ಸರಸತಿ ।
ಧರಣಿಯಲಿ ಜನಿಯಿಸುತ ಪಡೆದಳು ।
ವರಸರಸ್ವತಿಯೆಂಬ ನಾಮವನೆಂದನಾ ಮುನಿಪ ॥ ೩೯

ಜನಿಸಿ ಶೈಶವದಲ್ಲಿ ಜನನೀ ।
ಜನಕರಿಗೆ ಸಮ್ಮುದವತೋರುತ ।
ದಿನದಿನಕ್ಕಭಿವೃದ್ಧಿಯಾಂತಳು ಬಾಲಶಶಿಯಂತೆ ॥
ಅನುವಿನಿಂ ಶಿಶುತನವನೂಕುತ ।
ವಿನುತ ಬಾಲ್ಯವನೊಂದಿ ತನ್ನಯ ।
ಜನಕನಿಂದಂ ಸಕಲ ವಿದ್ಯೆಯನೋದಿದಳು ವಾಣೀ ॥ ೪೦

ಸಕಲ ವೇದಪುರಾಣ ಕಾವ್ಯ ।
ಪ್ರಕರಸುವ್ಯಾಕರಣ ತರ್ಕವು ।
ಸುಕರವಹ ವೇದಾಂತನಿರುಪನು ಗಣಿತಶಾಸ್ತ್ರಗಳು ॥
ಸುಕವಿತೆಯು ವರಗಾನವಿದ್ಯಾ ।
ಪ್ರಕರವೆಲ್ಲವು ವಾಣಿಯೊಡನಾ ।
ಸಕುತಿಯಲಿ ಬಂದಂತೆ ಶೋಭಿಸುತಿರ್ದವಾಕೆಯಲಿ ॥ ೪೧

ವಿನಯಗುಣ ಸೌಶೀಲ್ಯಬಾಂಧವ ।
ಜನಗಳಲಿ ಸಂಪ್ರೀತಿ ಜನನೀ ।
ಜನಕರಾಜ್ಞೆಯ ಮೀರದಿಹ ಶುಭಕರದ ಬಹು ನೀತಿ ।
ಘನತರದ ಸೌಂದರ್ಯ ವಿದ್ಯೆಯು ।
ಸನುಮತದಿ ಸೇರಿರಲು ವಿಪ್ರನ ।
ತನುಜೆ ಶೋಭಿಸುತಿರ್ದಳನುದಿನ ಜನವು ಬೆರಗಾಗೆ ॥ ೪೨

ಈ ತೆರದಿ ಭಾರತಿಯು ಸುಜನ |
ಪ್ರೀತಿಕರವಹ ನೀತಿಯಿಂ ವಿ |
ಖ್ಯಾತೆಯಾಗಿರುತಿರ್ದು ಶಂಕರನಾಜ್ಞೆಯಂ ಪಡೆದು ||
ಭೂತಳದೊಳಬ್ಜಜನು ಬಾಡಬ |
ಜಾತನಾಗಿಹ ಹದನ ನರಿಯು |
ತ್ತಾತನನು ತಾಸೇರಲಿಚ್ಛೈಸಿದಳು ಮನದೊಳಗೆ ||

ಇತ್ತಲೀಪರಿಯಿರಲು ಮುನಿಕೇ |
ಳಿತ್ತ ಮಂಡನಮಿಶ್ರನಾಸತಿ |
ಯುತ್ತಮದಗುಣರೂಪಸೌಶೀಲ್ಯಾದಿಗಳ ಕೇಳಿ ||
ಚಿತ್ತದೊಳಗಾಕೆಯನು ಬಯಸುತ |
ತೆತ್ತು ವಿರಹಕೆ ಮನವ ಕಡುಮರು |
ಗುತ್ತಲಿರ್ದನು ಸತತ ನಿದ್ರಾಹಾರಗಳನುಳಿದು ||

ಎಂತು ದೊರೆಯುವಳೆನಗೆ ಸದ್ಗುಣ |
ವಂತೆ ಬಳಿಕಾರೆನ್ನ ಮನಸಿನ |
ಚಿಂತೆಯನು ಬಿಡಿಸುವರು ಲಜ್ಜೆಯನುಳಿದು ತಾನಿದನು ||
ಎಂತು ಪೇಳಲಿ ಪೇಳದಿರ್ದೊಡ |
ದೆಂತುಸೈಸುವುದೆಂದು ಬೊಮ್ಮನಿ |
ರಂತರವು ಮರುಗುತ್ತಲಿರ್ದನು ತನ್ನ ಮನದೊಳಗೆ ||

ಅಲಘುಮತಿಯಾಹಾರ ನಿದ್ರೆಯ |
ನುಳಿದು ಮಂಡನಮಿಶ್ರನನುದಿನ |
ಬಳಲಿ ತನುಕೃಶವಾಗುತಿರಲದ ಕಾಣುತಾ ಬಳಿಕ ||
ಸಲುಗುತಾತನ ಜನನಿ ಹೃದಯದೊ |
ಳಲಗು ನಟ್ಟಂತಾಗೆ ಚಿತ್ತದ |
ನೆಲೆಯನರಿಯಲು ಮಗನ ಮಾತಾಡಿಸಿದಳಿಂತೆಂದು || ೪

ಏನು ಪೇಳೆಲಿ ಮಗನೆ ಚಿತ್ತ |
ಗ್ಲಾನಿಯೇತಕೆ ನಿನ್ನ ಮನದೊಳ |
ಗೇನ ಬಯಸಿಹೆ ತನುವಿದೇತಕೆ ಬಳಲಿದಂತಿಹುದು ||
ಸಾನುರಾಗದಿ ಪೇಳು ನಿನ್ನಯ |
ಮಾನಸದ ಚಿಂತೆಯನು ತನ್ನೊಡ |
ಗೇನನುಳುಹದೆಯನುತ ಕೇಳ್ದಳು ಕರುಣದಲಿ ಮಗನ || ೪೭

ವನಜಭವ ಕೇಳುತ್ತಲಜ್ಜಿಸಿ |
ವಿನಯದಿಂತಲೆವಾಗಿ ಕೇಳೌ |
ಜನನಿ ವರಶೋಣಾಖ್ಯನದತೀರದಲಿ ವಾಸಿಸುವ ||
ವಿನುತ ಭೂಸುರ ವಿಷ್ಣುಮಿತ್ರನ |
ತನುಜೆ ಶಾರದೆಯೆಂಬ ಕನ್ಯೆಯು |
ಮನವನಿದ ತಾ ಸೂರೆಗೊಂಡಿಹಳಿನ್ನು ಕೇಳೆಂದ || ೪೮

ಸೇರಿಸಿದೊಡಾಕೆಯನು ತನ್ನ ಶ |
ರೀರದೊಳಗಸುನಿಲ್ಲುವದಲ್ಲದೆ |
ಮೀರಿದೊಡೆ ನಿಲಲರಿಯದದರಿಂ ಕೇಳು ಜನಯಿತ್ರಿ ||
ನಾರಿಯನು ಸೇರಿಸುತಲೆನ್ನ ವಿ |
ಕಾರಿಯೆನ್ನದೆ ಪೊರೆವುದೆನುತವೆ |
ವಾರಿಜೋದ್ಭವನೆರಗಿ ನುಡಿದನು ದೈನ್ಯಭಾವದಲಿ || ೪೯

ಕೇಳಿ ಕಂಬನಿದುಂಬಿ ಪರಮುದ |
ಯಾಳು ಸಂತೈಸಿದಳು ಮಗನನು |
ಪೇಳಿದಳು ಪತಿಯೊಡನೆ ಮಗನ ಮನೋಭಿವಾಂಛಿತವ ||
ಕೇಳಿ ಸಂತಸದಿಂದ ಬಾಡಬ |
ಮೌಳಿ ತನ್ನಯಮಗನು ಬಯಸಿಹ |
ಬಾಲೆಯಾರೆಂದೆನುತಲಾಲೋಚಿಸಿದ ಚಿತ್ತದಲಿ || ೫೦

ಮನದೊಳರಿದನು ವಿಷ್ಣುಮಿತ್ರನ |
ತನುಜೆ ಗುಣವತಿ ರೂಪವತಿ ಮೇ |
ಣ್ವಿನಯವತಿ ಶೀಲವತಿ ವಿದ್ಯಾವತಿಯು ತಾನೆಂದು ||
ಜನಜನಿತವಾಗಿಹುದು ತನ್ನಯ |
ತನುಜಗವಳೇ ಪತ್ನಿಯಹಳೆಂ |
ದೆನುತ ಕಾರ್ಯೋಚಿತನ ಕೈಗೊಂಡನು ಮುನಿಪ್ರವರ ||

ಕರೆದು ವಿಪ್ರೋತ್ತಮರನಿಬ್ಬರ |
ನೊರೆದು ಕನ್ಯಾಘಟನ ಕಾರ್ಯದ |
ಪರಿಸರಕೆ ಕಳುಹಿದನು ಬಳಿಗಾ ವಿಷ್ಣುಮಿತ್ರಕನ ||
ಕರುಣಿಸೈ ಪರಮಾತ್ಮಪುತ್ರಂ |
ಗಿರದೆ ಸರಸತಿಯೊಲವನೆಂದಾ |
ಸುರನುತ ಶ್ರೀಕಂಠದೇವನ ಬೇಡಿದನು ವಿಪ್ರ ||

ಸಂಧಿ ೧೯ಕ್ಕೆ ಪದ್ಯ ೮೨೭ಕ್ಕೆ ಮಂಗಳ.

---

## ಇಪ್ಪತ್ತನೆಯ ಸಂಧಿ.

ಸೂಚನೆ|| ಉಭಯಭಾರತಿಯೊಲವನಾಂತನು |
ವಿಭವದಿಂ ಕೈಪಿಡಿದು ಲೋಕ |
ಪ್ರಭುವಿರಂಚಿಯು ಪರಮಗಾರ್ಹಸ್ಥ್ಯದಲಿ ವರ್ತಿಸಿದ ||

ಕೇಳು ಮುನಿ ಹಿಮಮಿತ್ರಭಟ್ಟನ |
ಬೀಳುಕೊಂಡಾದ್ವಿಜರು ಪಯಣದ |
ಮೇಲೆ ಪಯಣವನೆಸಗಿ ಬರುತಿರ್ದರು ಸರಾಗದಲಿ ||
ಮೌಳಿ ನಾಲ್ಕರದೇವನಿಗೆ ವರ |
ಬಾಲಕಿಯ ಸೇರಿಸುವ ಕಾರ್ಯವಿ |
ಲೋಲ ಮಾನಸರಾಗಿ ಶೋಣಾಭಿಖ್ಯನದತಟಕೆ ||



ಉಭಯಸರಸ್ವತೀ ಮತ್ತು ಆಕೆಯ ತಾಯಿತಂದೆಯವರು.

ಒಂದು ದಿನವಾವಿಷ್ಣುಮಿತ್ರನು |

ಒಂದು ದಿನವಾವಿಷ್ಣುಮಿತ್ರನು |
ನಂದನೆಯೊಳಿಂತೆಂದ ಪೇಳೌ |
ಮಂದಗಾಮಿನಿ ನೀನದಾರಂ ವರಿಪೆಯೆಂಬುದನು ||
ಚಂದದಿಂದುಸಿರಿದರೆ ಮದುವೆಯು |
ನಂದದಿಂದೆಸಗುವೆನೆನಲು ಪೂ |
ರ್ಣೇಂದುಮುಖಿ ಲಜ್ಜಿಸುತ ನುಡಿದಳು ಪಿತಗೆ ವಿನಯದಲಿ || ೨

ತಾತ ಕೇಳ್ಮಾಹಿಷ್ಮತೀ ವಿ |
ಖ್ಯಾತನಗರ ನಿವಾಸಿಯೆನಿಸಿದ |
ನೀತಿಪರ ಹಿಮಮಿತ್ರಭಟ್ಟಾಚಾರ್ಯಭೂಸುರನ ||
ಜಾತನನುಪಮಪಂಡಿತಾಗ್ರಣಿ |
ಪೂತಚರಿತನು ವಿಶ್ವರೂಪಕ |
ನಾತನನು ಚಿತ್ತದಲಿ ವರಿಸಿದೆನೆಂದಳಾ ವಾಣೀ || ೩

ಸುತೆಯ ವಚನಾಮೃತವನಾಲಿಸಿ |
ಮತಿಯುತನು ಮೋದವನು ತಳೆಯುತ |
ಲತಿಶಯದಮಮತೆಯಲಿ ಮಗಳನು ಪೊಗಳುತಿರಲಾಗ ||
ಶತಧೃತಿಗೆ ಕನ್ಯೆಯನು ಘಟಿಸುವ |
ಕತದಿನಲ್ಲಿಗೆ ಬಂದರಿಬ್ಬರು |
ವಿತತತೇಜಃಪುಂಜಭೂಸುರವರ್ಣಸಂಭವರು || ೪

ವರಸುವರ್ಣ ವಿಭೂಷಣಂಗಳ |
ಧರಿಸಿ ಮಂಜುಳವೇಣುದಂಡವು |
ಮೆರೆಯೆ ಕರದಲಿ ವಸನವಿಲಸಿತರಾಗಿ ಶೀಘ್ರದಲಿ ||
ಬರುತಿರಲು ಕಂಡಾಗ ವಿಪ್ರನು |
ಭರದೊಳಿದಿರೆದ್ದೆರಗಿದನು ಸ |
ತ್ಕರಿಸಿ ಪೂಜಿಸುತಿರ್ದನಾವಿಪ್ರರನು ಭಕ್ತಿಯಲಿ || ೫

ಬಳಿಕ ಕುಶಲವಕೇಳ್ದು ತನ್ನಯ |
ಬಳಿಗೆ ಬಂದಿಹ ಕಜ್ಜವೇನದ |
ನಲಸದುಸಿರುವುದೆನಲು ಸಂತಸವಾಂತು ತದ್ವಿಜರು ||
ತೊಳತೊಳಗೆದಂತಾಂಶುಚಂದ್ರಿಕೆ |
ಬಲಿದ ಕಾರ್ಯಾತುರರು ನುಡಿದರು |
ಲಲನೆಯಯ್ಯಂಗೆಂದು ಬಂದಿಹಕಾರ್ಯ ಸಂಗತಿಯ ||

ಧಾರಿಣೀಸುರ ಕೇಳು ವರಕಾ |
ಶ್ಮೀರದೇಶದೊಳತುಳ ಸಂಪ |
ನ್ನಾರಿಗಾಶ್ರಯವಾದ ಮಾಹಿಷ್ಮತಿಯ ನಗರದಲಿ ||
ಸೂರಿವರ ಹಿಮಮಿತ್ರನಾಮದ |
ಧಾರಿಣೀಸುರನಿಹನು ಪಡೆದು ಕು |
ಮಾರನೊಬ್ಬನ ವಿಶ್ವರೂಪಾಭಿಖ್ಯಪಂಡಿತನ ||

ಶ್ರುತಿವಿದನು ನಿಗಮಾರ್ಥವಿದನಾ |
ಶ್ರುತಿವಿಹಿತ ಸತ್ಕರ್ಮನಿಷ್ಠನು |
ವಿತಥದೂರನು ತದ್ವಿಜೋತ್ತಮಸೂನು ಗುಣಯುತನು ||
ಶ್ರುತಿವಿರುದ್ಧವೆನಿಪ್ಪ ಸೌಗತ |
ತತಿಯಗೆಲ್ದಾ ಭಟ್ಟಪಾದಂ |
ಗತಿಶಯದ ಸಚ್ಛಿಷ್ಯನಾಗಿಹನೆಂದರಾಬುಧರು ||

ಇಂತೆಸೆವ ತನುಜಂಗೆ ಮದುವೆಯ |
ಸಂತಸದೊಳೆಸಗಲ್ಕೆ ನಿನ್ನ ನಿ |
ಶಾಂತದೊಳಗನುರೂಪ ಕನ್ಯಾರತ್ನವಿಹುದೆಂದು ||
ಸ್ವಾಂತದಲಿ ನೆರೆತಿಳಿದು ಬಹು ಮತಿ |
ವಂತನಾ ಹಿಮಮಿತ್ರಭಟ್ಟನು |
ಚಿಂತಿತಾರ್ಥವನೊಂದೆ ಕಳುಹಿದನೆಮ್ಮ ನಿನ್ನೆಡೆಗೆ ||

ನಿನ್ನತನುಭವೆ ವಿಶ್ವರೂಪಸ |
ನನ್ನಿಯಿಂ ಕೈಪಿಡಿದಳಾದೊಡೆ |
ಚಿನ್ನರನ್ನಗಳೊಡೆವೆರಸುತಾಭರಣಮಪ್ಪಂತೆ ||
ಚನ್ನಹುದು ದಾಂಪತ್ಯವದರಿಂ |
ದಿನ್ನು ಸಂಶಯವೇಕೆ ನುಡಿನುಡಿ |
ನಿನ್ನ ಸಮ್ಮತದುತ್ತರವನೆಮಗೆಂದರಾದ್ವಿಜರು || ೧೦

ಅದನು ಕೇಳುತ ವಿಷ್ಣುಮಿತ್ರಂ |
ಗುದಯಿಸಲು ಸಂತೋಷ ಬಳಿಕಾ |
ಬುಧರಿಗೊರೆದನು ತನಗೆ ಹಿಮಮಿತ್ರಾರ್ಯನೊಡನೀಗ ||
ಪದುಳದಿಂ ಸಂಬಂಧಗೈವುದು |
ಹೃದಯಸಮ್ಮತಕಾರ್ಯಮಹುದೆಂ |
ಬುದಕೆ ಸಂಶಯವಿಲ್ಲ ಲಾಲಿಪುದೊಲಿದು ನೀವೆಂದು || ೧೧

ವನಿತೆಯನುಮತಿವಡೆದು ಕನ್ಯಾ |
ವಿನುತದಾನವ ಮಾಡಬೇಹುದು |
ಜನಕನಂತಲ್ಲದೊಡೆ ಮುಂದಾದೈವವಶದಿಂದ ||
ತನುಜೆ ಸುಖದುಃಖಂಗಳನು ತಾ |
ನನುಭವಿಪ ವೇಳೆಯಲಿ ದುಃಖಕೆ |
ಕನಲಿ ಪುರುಷರ ದೂರುವರು ಲೋಕಪ್ರಸಿದ್ಧವಿದು || ೧೨

ಇದುವೆ ನನ್ನಭಿಮತವು ನನ್ನಯ |
ಸುದತಿಯನು ಕೇಳುತ್ತಲಾಕೆಯ |
ಹೃದಯಭಾವವನರಿದು ಪೇಳುವೆನುತ್ತರವನಿಮಗೆ ||
ಹದುಳವಿಹುದೆಂದೆನುತ ಕುಳ್ಳಿರಿ |
ಸಿದನು ವಿಪ್ರರ ವಿಷ್ಣುಮಿತ್ರನು |
ಸದನವನು ಹೊಕ್ಕೊಡನೆ ನುಡಿದನು ತನ್ನ ಸತಿಯೊಡನೆ || ೧೩

ಕೇಳುವನಿತಾಮಣಿಯೆ ನಿನ್ನಯ |
ಬಾಲೆಯನು ಕಾಶ್ಮೀರದೊಳಗೆ ವಿ |
ಶಾಲಕೀರ್ತಿಯನಾಂತ ಮಂಡನಮಿಶ್ರಪಂಡಿತಗೆ ||
ಲೀಲೆಯಿಂದುದ್ವಾಹಗೈಯಲು |
ಕೇಳೆ ಬಂದಿಹರೀಗ ವಿಪ್ರರು |
ಪೇಳು ನಿನ್ನಭಿಮತವ ಸಂಕೋಚಿಸಿದಲೆನಗೆಂದ ||

ಎನಲು ಕೇಳುತಲಾಗ ವಿಪ್ರನ |
ವನಿತೆ ನುಡಿದಳು ಜೀವಿತೇಶಗೆ |
ವಿನುತ ಕಾಶ್ಮೀರಾಖ್ಯದೇಶವದಿಲ್ಲಿಗತಿದೂರ ||
ಎನಗೆ ಗೋಚರವಿಲ್ಲವಾತನ |
ಘನತೆ ಶೀಲವಯೋಕುಲಾದಿಗ |
ಳೆನಲು ನಾನಿನ್ನೆಂತು ಪೇಳುವುದೆನ್ನ ಮನದನುವ || ೧೦

ವರನ ಕುಲಶೀಲವನು ವಿದ್ಯಾ |
ಪರಿಣತೆಯ ಸೌಂದರ್ಯವಿತ್ತವ |
ವರಯಶವನಾತನ ಸನಾಥತೆಯನು ವಿಚಾರಿಸುತ ||
ಪರಿಕಿಸದೆ ಮಿಕ್ಕವುಗಳೇನನು |
ವರಗೆ ಕನ್ಯಾದಾನ ಮಾಡೆಂ |
ದೊರೆಯುತಿಹವಾಸಕಲ ವೈದಿಕ ಲೌಕಿಕೋಕ್ತಿಗಳು || ೧೧

ದೂರದೇಶಸ್ಥನಿಗೆ ಮೇಣತಿ |
ಶೂರನಿಗೆ ವಿದ್ಯಾವಿಹೀನಗೆ |
ಸಾರತರಮೋಕ್ಷವನು ಬಯಸುತಲಿಹಗೆ ನಿರ್ಧನಗೆ ||
ನೀರೆಯನು ಕೊಡಲಾಗದೆಂದೇ |
ಸಾರುತಿಹರಾಬುಧರು ನಾವಿದ |
ಮೀರಲೆಂತಹುದೆನುತ ನುಡಿದಳು ಪತಿಗೆ ಸತಿಯೊಲಿದು || ೧೨

ಲಲನೆಯಾಡಿದ ನುಡಿಯ ಕೇಳುತ |
ಲಲಘುಮತಿ ನಸುನಗೆಯುತಾಳುತ |
ಲಲಿ ಪತಿವ್ರತೆಕೇಳು ಲೌಕಿಕಧನದೊಳೇನಹುದು ||
ಗಳಿಸಿದತಿವಿದ್ಯೆಯಲಿ ಸರ್ವವ |
ಗಳಿಸಬಹುದಿದು ಸತ್ಯ ವಿದ್ಯೆಯು |
ಕಲಿಯದಿರ್ದನು ನರನರೂಪಿನೊಳೆಸೆವ ಪಶುವೆಂದ || ೧೮

ವಿದ್ಯೆ ಪುರುಷಾರ್ಥೈಕಸಾಧನ |
ವಿದ್ಯೆ ಸಜ್ಜನನಿಕರಭೂಷಣ |
ವಿದ್ಯೆಯೀವುದು ಪೂಜ್ಯತೆಯ ಬುಧನಿವಹಮಧ್ಯದಲಿ ||
ವಿದ್ಯೆಯಿಂತೇಜಸ್ಸು ದೊರೆವುದು |
ವಿದ್ಯೆಯಿಂಸತ್ಕೀರ್ತಿ ಲಭಿಪುದು |
ವಿದ್ಯೆಯೇ ಸೌಶೀಲ್ಯಕಾರಣ ರಮಣಿಕೇಳೆಂದ || ೧೯

ಇರಲು ವಿತ್ತವು ಚೋರರದನಪ |
ಹರಿಸುವರು ನೋಣಲ್ಲದಿರ್ದೊಡೆ |
ನರಪತಿಯು ತದ್ಧನವ ಸೆಳೆವನು ನೋಡಿ ಸಮಯವನು ||
ಧರಣಿಯಲಿ ಬಚ್ಚಿಡಲು ಧನ ತಾಂ |
ಪರರ ಕೈವಶವಹುದು ಕೇಳೆಲೆ |
ತರುಣಿ ವಿದ್ಯಾಧನವು ಸಲಹುವುದಲ್ತೆ ಮನುಜನನು || ೨೦

ತರುಣಿ ಕೇಳದರಿಂದ ವಿದ್ಯಾ |
ಪರಿಣತೆಯು ನೆರೆನೋಡಿ ಕನ್ಯಾ |
ಪರಿಣಯವನೆಸಗಿದೊಡೆ ತದ್ದಂಪತಿಗಳನವರತ ||
ಪರಮಸೌಖ್ಯವ ಪಡೆವರದರಿಂ |
ಪರಿಕಿಸಲು ಕನ್ಯಾಪಿತೃತ್ವವು |
ನೆರೆಸುಸೌಖ್ಯಪ್ರದವು ತಾನೆನಿಸುವುದು ಜಗದೊಳಗೆ || ೨೧

ಇಂತುಗೈಯದೆ ಬರಿಯವಿತ್ತಾ |
ಭ್ರಾಂತಿಯಲಿ ನಿಜಸುತೆಯು ವಿದ್ಯಾ |
ವಂತನಲ್ಲದ ನುಡೆಯುಗಿತ್ತೊಡೆ ಕೆಲವು ಕಾಲದಲಿ ||
ಮಂಥರವು ಬರಿದಾಗಲಾಗಲು |
ಚಿಂತಿಸುತ ಮಗಳಿರಲು ಕಂಡು ದು |
ರಂತದುಃಖದಿ ಮುಳುಗಬೇಹುದು ತಾಯಿತಂದೆಗಳು ||

ಪರಿಕಿಸುವೊಡಾ ವಿಶ್ವರೂಪನು |
ಭರಿತವಿದ್ಯನ ಭಟ್ಟಪಾದನ |
ಪರಮಶಿಷ್ಯನು ಸಕಲಶಾಸ್ತ್ರ ಶ್ರುತಿವಿಶಾರದನು ||
ವರಿಸಿಹನು ತಾನೆಮ್ಮಕುವರಿಯ |
ವರಿಸಿಹಳು ತನುಜಾತೆಯಾತನ |
ನೊರೆವುದೇನಾತನಿಗೆ ತನುಜೆಯ ನೀವುದತಿವಿಹಿತ || ೨೩

ಎಂದು ಸತಿಯನೊಡಂಬಡಿಸಿ ನಿಜ |
ನಂದನೆಯ ಬಳಿಗೈದಿ ತ್ರನುಭವೆ |
ಗೆಂದ ನೆಲೆಸುತೆ ವಿಶ್ವರೂಪಾಚಾರ್ಯಪಂಡಿತಗೆ ||
ಅಂದವಾಗಿಹ ಸತಿಯು ನೀನಹೆ |
ಯೆಂದು ಭಾವಿಸಿ ಬಂಧುಗೆಳು ನಲ |
ವಿಂದ ಕೇಳಲ್ಕೆಂದುಬಂದಿಹರೆಮ್ಮ ಮಂದಿರಕೆ | ೨೪

ನಿನ್ನ ಮನಕದು ವಿಹಿತವಾದೊಡೆ |
ಸನ್ನುತಾಂಗಿಯೆ ಪರಿಣಯೋತ್ಸವ |
ವನ್ನು ರಚಿಪೆನು ಪೇಳು ನಿನ್ನ ಮನೋಗತವನೆನಲು ||
ತನ್ನ ತಂದೆಯನುಡಿಗೆ ಗುಣಸಂ |
ಪನ್ನೆಯವನತಮುಖದಿ ನೆಲವನು |
ತನ್ನ ಕಾಲುಂಗುಟದಿ ಕೆರೆಯುತನಿಂದಳಿದಿರಿನಲಿ || ೨೫

ಸುತೆಯ ಮನದಿಂಗಿತವನಾ ದಂ |
ಪತಿಗಳರಿತರು ಬಹುಳ ಸಂಭ್ರಮ |
ಯುತರೆನಿಸಿ ಮಂದಿರಕೆ ಬಂದಾವಿಪ್ರರೀರ್ವರನು ||
ಅತಿಶಯದಲುಪಚರಿಸಿ ತನ್ಮಯ |
ಸುತೆಯನೀವೆವು ವಿಶ್ವರೂಪಂ |
ಗತಿಶಯದೊಳೆಂದೆನುತ ನುಡಿದರು ವಿಪ್ರವರ್ಯರಿಗೆ || ೨೬

ಹರುಷದಿಂದಾದ್ವಿಜರು ತಮ್ಮಯ |
ಪುರಕೆ ಬಂದರು ಶೀಘ್ರಗತಿಯಲಿ |
ಧರಣಿಯಮರರ್ ಕಂಡರಾ ಹಿಮಮಿತ್ರಭಟ್ಟನನು ||
ಪರಿಣಯದ ಕಾರ್ಯವನು ಸಂಭ್ರಮ |
ವೆರಸಿ ನುಡಿದರು ವಿಶ್ವರೂಪನು |
ಪರಮಸಂತೋಷಾಂಬುನಿಧಿಯೊಳು ಮುಳುಗುವಂದದಲಿ || ೨೭

ಬಳಿಕಲಿತ್ತಲು ವಿಷ್ಣುಮಿತ್ರನು |
ಜಲಜಪೀಠನ ಸತಿಯ ಪರಿಣಯ |
ಕೊಲಿದು ಸಪ್ತಮಶುದ್ಧಿಯಿಂದಲೆ ಸಲೆ ವಿರಾಜಿಸುವ ||
ಅಲಘುತರಲಗ್ನವನು ನಿಯಮಿಸಿ |
ಕಳುಹಿದನು ವರವಿಪ್ರನೊಬ್ಬನ |
ಸುಲಭದಿಂದೈತಂದನವಮಾಹೀಷ್ಮತೀಪುರಕೆ || ೨೮

ಬಂದನಾ ಹಿಮಮಿತ್ರಭಟ್ಟನ |
ಮಂದಿರಕೆ ಬಳಿಕಾತನೀತಗೆ |
ವಂದಿಸುತಲರ್ಘ್ಯಾದಿ ಸತ್ಕಾರಗಳನೆರೆರಚಿಸಿ ||
ಬಂದುದೇನೆಂದೆನುತ ಬೆಸಗೊಳೆ |
ಬಂಧುರಪ್ರೀತಿಯಲಿ ಕನ್ಯೆಯ |
ತಂದೆ ಕಳುಹಿದ ಹದನತಿಳುಹಿದನಾಗಲಾದ್ವಿಜನು || ೨೯

ಕೇಳಿದನು ಸಂತೋಷಜಲಧಿಯೊ |
ಳಾಳಿದನು ಹಿಮಮಿತ್ರ ಬಾಂಧವ |
ಜಾಲದಿಂದೊಡಗೂಡಿ ಮಂಡನಮಿಶ್ರ ಸಹಿತಾಗ ||
ಮೇಲೆನಿಪ ಮಂಗಳಸುವಸ್ತ್ರವ |
ಮೇಳವಿಸಿ ತೆರಳಿದನು ಪರಮ ವಿ |
ಶಾಲ ವಿಭವದೊಳೈದಿದನು ಬೀಯಗನ ಬಳಿಗಾಗಿ ||

ಬರವಕೇಳುತ ವಿಷ್ಣುಮಿತ್ರನು |
ಪರಮಸಂಭ್ರಮದಿಂದ ತನ್ನಯ |
ಪರಿಜನಗಳೊಡಗೂಡಿ ಬಂದಿದಿರ್ಗೊಂಡು ಬೀಯಗನ ||
ಪರಿಪರಿಯವಿಧದಿಂದ ನೆರೆ ಸ |
ತ್ಕರಿಸಿದನು ಹಿಮಮಿತ್ರಭಟ್ಟನ |
ವರಸಹಿತ ಕರೆದೊಯ್ದನಾಗಲು ವಾದ್ಯರವಮೆಸೆಯೆ ||

ಬಳಿಕ ನಿಜಗೃಹಕ್ಕೈದಿ ತನ್ನಯ |
ಲಲನೆ ಸಹ ಬಾಂಧವರ ಬಹುವಿಧ |
ಗಳಲಿ ಸತ್ಕರಿಸುತ್ತ ಹಿಮಮಿತ್ರನಿಗೆ ಕೈಮುಗಿದು ||
ಪಲವುಜನ್ಮಾಂತರದ ಪುಣ್ಯದ |
ಲಲಘುಮಹಿಮಗೆ ನಿನ್ನತನಯಂ |
ಗೊಲಿದು ಕನ್ಯಾದಾನಮಾಳ್ಪುದು ಲಭಿಸಿತೆನಗೆಂದ ||

ಎನಲಿಕಾಹಿಮಮಿತ್ರಭಟ್ಟನು |
ವಿನಯದಿಂ ಬೀಯಗನ ನೋಡುತ |
ವನಜಭವನಿಚ್ಛೆಯಲಿ ದೊರೆತುದು ನಿನ್ನಬಾಂಧವ್ಯ ||
ಎನಿತುಧನ್ಯನೊ ತಾನು ಭುವನದೊ |
ಳನಘ ಕೇಳ್ಸತ್ಕುಲದಿಜನಿಸಿದ |
ವನಿತೆದೊರೆತಳು ತನ್ನ ತನಯನಿಗೆಂದನತಿಮುದದಿ ||




ಉಭಯಸರಸ್ವತೀ ಮಂಡನಮಿತ್ರ ವಿವಾಹಮಹೋತ್ಸವವು.

ಇಂತುಭಯಬಾಂಧವರು ಹರ್ಷ |
ಸ್ವಾಂತರಾಗುತ ದಿನವಕಳೆದರು |
ಚಿಂತಿತಾರ್ಥಪ್ರದೆಯೆನಿಪವಾಗ್ದೇವಿಗಜನೊಡನೆ ||
ಸಂತಸದೊಳನುರಾಗ ಪೆರ್ಚುವ |
ದಿಂತೆನುತತೋರ್ಪಂತೆ ಪೂರ್ವದಿ |
ಗಂತದಲಿತೋರಿದುದು ಸಂಧ್ಯಾರುಣವು ತಳತಳನೆ || ೩೪

ದಿನಪನುದಯದೊಳೆದ್ದು ವಿಪ್ರನು |
ವಿನುತಪುಣ್ಯಾಹಾದಿ ಕರ್ಮವ |
ನನುವಿನಿಂದೆಸಗುತ್ತ ಬಳಿಕಾ ವಿಶ್ವರೂಪನಿಗೆ ||
ವಿನಯಮಿಗೆ ಮಧುಪರ್ಕಪೂಜೆಯ |
ನನಿತುವನುವಿಸ್ತರಿಸಿ ತನ್ನಯ |
ತನುಜೆಯನು ಕರೆತಂದು ಧಾರೆಯನೆರದನೊಲವಿನಲಿ || ೩೫

ಉಭಯಭಾರತಿಯಾಗ ತನ್ನಯ |
ವಿಭುವಿನುರುಪಾರ್ಶ್ವವನು ಸಾರ್ದಳು |
ಶುಭದಗೀತೆಯನೈದೆಯರು ಪಾಡಿದರುನಲವಿನಲಿ ||
ವಿಭವವಿಮ್ಮಡಿಸಲ್ಕೆ ಸದ್ವಿಜ |
ಸಭೆಯನಾರಾಧಿಸುತ ಬಳಿಕಾ |
ಶುಭಪರಂಪರೆಗಳನು ಕನ್ಯಾಪಿತನು ನೆಗಳಿದನು || ೩೬

ತದುಪರಿಯೊಳಾ ವಿಶ್ವರೂಪನು |
ಪದುಳದಿಂದಲೆ ಸಪ್ತಪದಿಯೆಂ |
ಬುದಿತ ಕರ್ಮವ ಸುಪ್ರಧಾನಾಭಿಖ್ಯ ಹೋಮವನು ||
ಸುದತಿಯಿಂದೊಡಗೂಡಿ ವಿರಚಿಸು |
ತದಿತಿಪುತ್ರರ ತುಷ್ಟಿಪಡಿಸಿದ |
ನುದಿತತೋಷದಲಾ ಪ್ರವೇಶಾಭಿಖ್ಯಹೋಮದಲಿ || ೩೭

ಬಳಿಕ ಬಂಧುವ್ರಜಕೆ ಭಕ್ಷ್ಯಾ |
ವಳಿಸುಭೋಜ್ಯಗಳಿಂದಲೌತಣ |
ಗಳನು ವಿರಚಿಸಿ ದಿವ್ಯವಸ್ತ್ರಾಭರಣಗಳನಿತ್ತು ||
ನಲವಿನಿಂ ಸಂತುಷ್ಟಿಪಡಿಸಿದ |
ನಲಘುಮತಿ ಭಾರತಿಯಪಿತನಂ |
ದೊಲಿದು ದಂಪತಿಗಳನು ಹರಸಿದರಾಗಭೂಸುರರು ||

ಈ ತೆರದೊಳುದ್ವಾಹದುತ್ಸವ |
ಸಾತಿಶಯವೆನೆ ನಾಲ್ಕು ದಿವಸ ವಿ |
ಧಾತನಿಗೆ ನೆರೆಬೆಳೆಯುತ್ತಲಿರಲೈದನೆಯ ದಿವಸದಲಿ ||
ಪೂತವಹ ವರನಾಕಬಲಿಯ ಮ |
ಹಾತಿಶಯದಿಂದೆಸಗೆ ಬಂಧು |
ವ್ರಾತ ತೆರಳಿದುದಾಗ ದಂಪತಿಗಳನು ನೆರೆಹರಿಸಿ ||

ಲಲನೆಯೊಡನಾ ವಿಷ್ಣುಮಿತ್ರನು |
ಗೆಳಲನೈತಂದಂದು ಕಂಡನು |
ಸಲುಗೆಯಲಿ ಹಿಮಮಿತ್ರಭಟ್ಟನ ಕೈಗಳನಮುಗಿದು ||
ಕೆಲವುದಿನ ಮಿಲ್ಲಿರ್ದುಣತಮ್ಮನು |
ಸಲೆಸುಸಂಭ್ರಮಗೊಳಿಸಿ ಸೊಸೆಸಹ
ಬಳಿಕ ತೆರಳುವುದೆಂದು ಬಿನ್ನೈಸಿದನು ವಿನಯದಲಿ ||

ಬಂಧುನುಡಿದುದು ಕೇಳುತತಿಮುದ |
ದಿಂದಲಾ ಹಿಮಮಿತ್ರನುಡಿದನು |
ನಂದನನ ನಿಲ್ಲಿರಿಸಿಕೊಂಡಿರು ಕೆಲವುದಿನಬಳಿಕ ||
ಇಂದುಮುಖಿಯೊಡನವನ ಕಳುಹುವ |
ದೆಂದು ಸೂಚಿಸಿ ತನ್ನಬಾಂಧವ |
ವೃಂದದಿಂದೊಡಗೂಡಿ ತೆರಳಿದನಾಗ ನಿಜಪುರಕೆ ||

ಇತ್ತಲೀಕಮಲಜನು ತನ್ನಯ |
ಮತ್ತಕಾಶಿನಿಯೊಡನೆ ಸುಖಸಂ |
ಪತ್ತನನುಭವಿಸುತ್ತ ಗಾರ್ಹಸ್ಥ್ಯದಲಿ ವರ್ತಿಸುತ ||
ಚಿತ್ತಜಾರಿಯನೊಲಿದು ಪೂಜಿಸು |
ತತ್ತೆಮಾವಂದಿರಿಗೆ ಹರ್ಷವ |
ನಿತ್ತು ಬಾಂಧವಜನವ ಮೆಚ್ಚಿಸುತಿರ್ದನತಿಹಿತದೆ || ೪೨

ಕಮಲಜಾತನು ಬಳಿಕ ತನ್ನಯ |
ರಮಣಿಯಿಂದೊಡಗೂಡಿ ಮಾವನಿ |
ಗಮಿತಸಂತೋಷವನು ವಿರಚಿಸುತಿರ್ದುಕೆಲವುದಿನ ||
ಗಮಿಸುವೆನು ನಿಜಗೃಹಕೆ ನೇಮವ |
ಮಮತೆಯಿಂ ಕರುಣಿಪುದು ತನ್ನಯ |
ರಮಣಿಯನು ಕಳುಹುವುದೆನುತ್ತಲೆ ಮಾವನಿಗೆ ನುಡಿದ || ೪೩

ಇಂತೆನಲು ಕೇಳುತ್ತಮನದಲಿ |
ಚಿಂತೆಯನು ತಾಳಿದನು ತನ್ನಯ |
ಕಾಂತೆಯೊಡನುಸಿರಿದನು ನಿಜಜಾಮಾತನಾಡಿದುದ ||
ಭ್ರಾಂತಿಯೇತಕೆ ಮಗಳಪಯಣಕೆ |
ಸಂತಸದೊಳನುಗೊಳಿಸು ವಸ್ತುವ |
ನೆಂತೆನುತ ಸತಿಗೊರೆದು ವರಜಾಮಾತಗಿಂತೆಂದ || ೪೪

ಏಕಪುತ್ರಿಯು ನಮಗೆ ಶಾರದೆ |
ಯೀಕೆಯನು ಸುತಭಾವದಿಂದಲೆ |
ಸಾಕಿದೆವು ತಾನಿವಳು ಕೇವಲಹಸುಳೆಯಂತಿಹಳು ||
ಲೋಕವರ್ತನವೇನನರಿಯಳು |
ಸೌಕುಮಾರ್ಯದಿ ಕೂಡಿಕೊಂಡಿಹ |
ಳೀಕೆಯನು ನೀಪೊರೆವುದತಿಕಾರುಣ್ಯಭಾವದಲಿ || ೪೫

ಮೃದುಮಧುರವಾಕ್ಸರಣಿಯಿಂದಲಿ |
ಸದನಕಾರ್ಯವನೆಲ್ಲವನು ತಾ |
ಮುದದಿ ಮಾಳ್ಪಳು ಸ್ವೈರಿಸಳು ಕನಲಿಕೆಯಮಾತುಗಳ ||
ಸದಯನಾಗುತಲಿವಳ ಪೊರೆಯುವ |
ಹದನ ನೀನೇಬಲ್ಲೆ ಕೇಳೆಂ |
ದುದುರಿಸಿದನವನಿಯಲಿ ಭೂಸುರನಶ್ರುಬಿಂದುಗಳ || ೪೬

ಭೂತಲದಿ ಸತಿಯರಿಗೆ ಕಾರ್ಯದ |
ರೀತಿಯನುಭವವಹಡೆ ಬಾಲ್ಯವ |
ತೀತವಾಗಲುಬೇಹುದೆಂಬುದು ಹಿರಿಯರುಕ್ತಿಯಲಿ ||
ಈತಲೋದರಿಯನ್ನು ನೆರೆಸಂ |
ಪ್ರೀತಿಯಲಿ ರಕ್ಷಿಸಲು ನಿನ್ನಯ |
ಮಾತೆಗೆರುಹಲು ಬೇಕು ಸುತೆಗವಳೈಸೆವರಜನನೀ ||

ಸುಂದರಾಂಗನೆಕೇಳು ಪೂರ್ವದ |
ಲೊಂದುದಿನ ವರಯೋಗಿಯೊಬ್ಬನು |
ಸಂದಸಾಮುದ್ರಿಕವ ಬಲ್ಲವನಿವಳಹಸ್ತವನು ||
ಚಂದದಿಂದಲೆ ನೋಡುತೀಕೆಯು |
ಹೊಂದಿಹುದು ಸರ್ವಜ್ಞಲಕ್ಷಣ |
ವೆಂದು ಸೂಚಿಸಿ ಬಳಿಕಲಾಯೋಗೀಶನಿಂತೆಂದ || ೪೮

ಮುಂದೆ ಪಂಡಿತರಿಬ್ಬರಿಗೆ ಮುದ |
ದಿಂದ ಶಾಸ್ತ್ರಾರ್ಥದ ವಿವಾದವು |
ಸಂಧಿಪುದು ಬಳಿಕೀಕೆ ಮಾಧ್ಯಸ್ಥವನುವಹಿಸುತಲೆ ||
ಚಂದದಿಂ ನಿರ್ಣಯವಗೈಯುತ |
ಸಂದಯಶವನು ಪಡೆದು ರಾಜಿಪ |
ಳೆಂದು ಪೇಳುತದೃಶ್ಯನಾದನು ಯೋಗಿವರನೆಂದ | ೪೯

ಎನುತಲೀಪರಿ ವಿಷ್ಣುಮಿತ್ರನು |
ವಿನಯದಿಂದಳಿಯಂಗೆ ತಿಳುಹುತ |
ತನುಜೆಯನು ಕರೆದೆಂದನೆಲೆಸುತೆ ಸಕಲಶಾಸ್ತ್ರಗಳ ||
ಅನುವಿನಿಂ ನೀನರಿವೆಯಾದರು |
ಜನಕನುರುಕರ್ತವ್ಯಕೋಸುಗ |
ನಿನಗೆ ಪೇಳುವಮಾತಲಾಲಿಪುದೆಂದು ಕರುಣದಲಿ || ೫೦

ಇಲ್ಲಿ ಪರ್ಯಂತರವು ಕೇಳು |
ತ್ಫುಲ್ಲಲೋಚನೆ ಬಾಲ್ಯದಾಟವು |
ಸಲ್ಲುತಿರ್ದುದು ನಿನಗೆ ನೀವರಗೃಹಿಣಿಯಾಗಿರುವೆ ||
ಸಲ್ಲದದು ನಿನಗಿನ್ನು ಪತಿಗೃಹ |
ದಲ್ಲಿ ಗೃಹಕೃತ್ಯಗಳನೀನೊಲಿ |
ದೆಲ್ಲವನು ಮುನ್ನೆಸಗಬೇಹುದು ಚತುರೆಯೆಂದೆನಿಸಿ || ೫೧

ಸತಿಯರಿಗೆ ಬಾಲ್ಯದಲಿ ಮಾತಾ |
ಪಿತರು ಸಂರಕ್ಷಕರು ಸದ್ಗುಣ |
ವತಿಯೆ ಕೇಳ್ವೈವಾಹ ಸಮನಂತರದೊಳವದಿರಿಗೆ ||
ಪತಿಯೆ ಸಂರಕ್ಷಣೆಗೆ ಕರ್ತನು |
ಪತಿಯ ಸೇವಿಸಲಿಹಪರಂಗಳ |
ಗತಿಯಹುದು ಸತಿಯರಿಗೆ ನಿರ್ಣಯವೆಂದನಾಪಿತನು || ೫೨

ಪತಿಯು ನಿದ್ರೆಯ ತಿಳಿವಮುನ್ನವೆ |
ಸತಿಯರೇಳಲಿಬೇಕು ಮತ್ತಾ |
ಪತಿಯು ಮಜ್ಜನಗೈವಮುನ್ನವೆಮೀಯಬೇಹುದಲೆ ||
ಪತಿಗೆ ಭೋಜನವಾದ ಬಳಿಕಾ |
ಸತಿಯು ಭುಂಜಿಸಬೇಕು ತನ್ನಯ |
ಪತಿಯು ಪವಡಿಸೆ ಬಳಿಕ ಪವಡಿಸಬೇಕು ಕೇಳೆಂದ || ೫೩

ಪತಿಯು ತಂದೀಯುವ ಸುವಸ್ತುವ |
ಹಿತದಿ ನೀಸ್ವೀಕರಿಸಬೇಹುದು |
ಪತಿಗೆ ರುಚಿಕರವಾಗಿ ವಿರಚಿಸಬೇಹುದಡಿಗೆಯನು ||
ಪತಿಯ ಮನದಿಂಗಿತವನರಿದತಿ |
ಹಿತದಿ ಕಾರ್ಯವನೆಸಗಬೇಹುದು |
ಸುತೆಯರಿಂತಿರೆ ಪಡೆದ ಮಾತಾಪಿತರು ಧನ್ಯರಲೆ || ೫೪

ಅತ್ತೆಮಾವಂದಿರನು ಭಾವನ |
ನುತ್ತಮದಭಕ್ತಿಯಲಿ ಗೌರವಿ |
ಸುತ್ತ ಮೈದುನರಿರಲು ಕರುಣದಿ ಪೊರೆಯಬೇಕವರ ||
ಅತ್ತಿಗೆಯನಾದಿನಿಯ ನೀನ |
ತ್ಯುತ್ತಮಪ್ರೀತಿಯಲಿ ನೋಡುತ |
ಮತ್ತೆ ಕೀರ್ತಿಯತಹುದು ತಮಗೆಲೆ ಮಗಳೆ ಕೇಳೆಂದ || ೫೫

ಕೋಪಗೊಂಡಿರೆ ಪತಿಯು ನೀನತಿ |
ಕೋಪದಿಂದುತ್ತರವನೀಯದೆ |
ಕೋಪವಂ ಸಂತೈಸಬೇಹುದು ಮೌನದಿಂದಿರುತ ||
ಕೋಪವನು ಸತಿಗೈಯೆ ಬಲುಸಂ |
ತಾಪ ತಪ್ಪದು ಪತಿಗೆಕೋಪಿಸೆ |
ಪಾಪವಡಸುವುದೆಂದು ಪೇಳ್ದನು ವಿಪ್ರನಾಸುತೆಗೆ || ೫೬

ಪತಿಯು ಪರದೇಶಕ್ಕೆ ಗೆಮಿಸಿರೆ |
ಸತಿಗಲಂಕಾರಗಳು ಸಲ್ಲವು |
ಹಿತದಿ ಹಿರಿಯರ ಸೇವಿಸುತ್ತಿರಬೇಹುದನವರತ ||
ಪತಿಯ ಪುನರಾಗಮನವನು ನೀ |
ಹಿತದಿ ಕರುಣಿಪುದೆನುತ ಗೌರಿಯ |
ಸತತ ಸಂಪ್ರಾರ್ಥಿಸುತಲಿರುವುದು ಮಗಳೆ ಕೇಳೆಂದ || ೫೭




ಉಭಯಸರಸ್ವತೀದೇವಿಯು ಪಿತೃಮಂದಿರದಿಂದ ಪತಿಯೊಡನೆ ಪ್ರಯಾಣಮಾಡಿದುದು.

ಇನಯನ್ನೈತರೆ ಮನೆಗೆ ನೀನತಿ |
ವಿನಯದಿಂದಾತನನು ನುಡಿಸುತ |
ಲನುವಿನಿಂ ಪಾದಗಳ ತೊಳೆಯುತಲಿತ್ತು ಪೀಠವನು ||
ಇನಿದೆನೆನಿಸುವಾಹಾರವಸ್ತುವ |
ತಿನಲಿಕಾತಂಗಿತ್ತು ಬಳಿಕವ |
ನನುಮತಿಯನನುಸರಿಸಿಮಾಳ್ಪುದು ಸಕಲಕಾರ್ಯಗಳ || ೫೮

ಪರಮಪಾತಿವ್ರತ್ಯದಿಂದಲೆ |
ಸುರುಚಿರದ ಕೀರ್ತಿಯನು ಪಡೆದಿಹ |
ವರವಸಿಷ್ಠನ ಸತಿಯ ಮೋಣ್ಸಾವಿತ್ರಿಯಂದದಲಿ ||
ವರತನುಜೆ ಕೀರ್ತಿಯನು ಪಡೆಯಂ |
ದುರುತರಪ್ರೀತಿಯಲಿ ಜನಕನು |
ಮರುಕದಿಂ ಹರಸಿದನು ಮುನಿಕೇಳೆಂದನಾಸೂತ || ೫೯

ಇಂತು ಬುದ್ಧಿಯಪೇಳಿ ಮಗಳಿಗ |
ನಂತವಸ್ತುವನಿತ್ತು ಮನದೊಳು |
ಚಿಂತಿಸುತಲಳಿಯನನು ಸುಮುಹೂರ್ತದಲಿ ಬೀಳ್ಕೊಡಲು ||
ಕಾಂತೆಯಿಂದೊಡಗೂಡಿ ಮಾವಗೆ |
ಸಂತಸದೊಳಭಿನಮಿಸುತತ್ತೆಗ |
ನಂತಮಹಿಮನು ವಿಶ್ವರೂಪನು ಬಂದ ನಿಜಪುರಕೆ || ೬೦

ಬರುತ ಮಾರ್ಗದೊಳುಳ್ಳ ನಾನಾ |
ಪರಿಯ ನಗರ ಗ್ರಾಮವಾಸಿಗ |
ಳಿರವ ಬಹುವಿಧ ಪುಣ್ಯನದಿಗಳ ಪರಮವಿಸ್ತರವ ||
ತರುಲತಾದಿ ವಿಶೇಷವಸ್ತುವ |
ತರುಣಿಗೆತಿ ಸಂಪ್ರೀತಿಯಿಂ ತಾ |
ನರುಹುತ್ತೈದಿದನೊಲಿದು ವರನಾಹೀಷ್ಮತೀಪುರವ || ೬೧

ಬಂದು ಜನನೀಜನಕರಿಗೆ ಮುದ |
ದಿಂದಲಭಿವಂದಿಸುತಲಿರ್ದರು |
ನಿಂದಿರಲು ಹಿಮಮಿತ್ರಭಟ್ಟಾಚಾರ್ಯನೊಲವಿನಲಿ ||
ನಂದನನ ಬಿಗಿದಪ್ಪಿ ಸೊಸೆಯುನ |
ಮಂದಸಂತೋಷದಲಿ ಕಾಣುತ |
ಬಂಧುರಪ್ರೀತಿಯಲಿ ಹರಸಿದನೈದೆಯಾಗೆನುತ ||

ಬಳಿಕಲಾ ವರವಿಶ್ವರೂಪನು |
ಲಲನೆಯಿಂದೊಡಗೂಡಿ ತಂದೆಯ |
ನಲಘುತರಭಕ್ತಿಯಲಿ ಸೇವಿಸುತಿರುತ ಜನನಿಯನು ||
ಅಲಸದತಿಭಕ್ತಿಯಲಿ ಪೂಜಿಸು |
ತೊಲಿದು ಬಂಧುವ್ರಜವ ಸಂತಸ |
ಗೊಳಿಸಿ ಸಮ್ಮುದದಿಂದಲಿರ್ದನು ನಿಜನಿಕೇತನದೆ ||

ತಂದೆ ತನಗತಿ ಹಿತದಿ ಪೇಳಿಹ |
ಸಂದಸನ್ಮಾರ್ಗದಲಿ ನಡೆವುತ |
ಬಂಧುರಪ್ರೇಮದೊಳು ನಿಜಪತಿಚರಣಸೇವೆಯಲಿ ||
ನಿಂದು ಸೇವಿಸುತತ್ತೆಮಾವರ |
ಬಂಧುಜನಗಳನತುಳ ಗೌರವ |
ದಿಂದ ಸಂಪ್ರೀತಿಸುತಲಿರ್ದಳು ಪೂರ್ಣಶಶಿವದನೆ ||

ಸಕಲ ಗೃಹಕಾರ್ಯಗಳ ಮುದದಿಂ |
ಸುಕರಮೆನಲೆಸಗುತ್ತ ವಸ್ತು |
ಪ್ರಕರದೊಳಗೊಂದಿನಿಸು ಕೆಡದಂದದೆ ನಿರೀಕ್ಷಿಸುತ |
ಪ್ರಕಟಪಾತಿವ್ರತ್ಯಧರ್ಮದೊ |
ಳಕುಟಿಲತ್ವದಿ ನಡೆದು ನಾರೀ |
ಪ್ರಕರ ಭೂಷಣೆಯಾಗಿ ರಂಜಿಸುತಿರ್ದಳಾವಾಣೀ ||

ಸತಿಗೆ ಪತಿ ಪರದೈವವೆಂಬುದ |
ಮತಿಯೊಳರಿದಾವನಿತೆ ತನ್ನಯ |
ಪತಿಪದಾಬ್ಜವನೊಲಿದು ಪೂಜಿಸುತಿಹಳು ಭಕ್ತಿಯಲಿ ||
ಹಿತವೆನಿಪ ಕಾರ್ಯಗಳನೆಸಗುತ |
ಪತಿಯ ಪಡೆದಾತಂದೆತಾಯ್ಗಳ |
ನತಿಶಯಪ್ರೀತಿಯಲಿ ಪೂಜಿಸುತಿರ್ಪಳನವರತ || ೬೬

ಇನಯನಿಂಗಿತವರಿತು ನಡೆವಳು |
ಕನಲಿಕೆಯ ಮಾತುಗಳನಾಡಳು |
ವಿನಯದಿಂ ವರ್ತಿಪಳು ಸಂತತಮಖಿಳಜನರೊಡನೆ ||
ಇನಿದೆನಿಪ ಭೋಜ್ಯಾದಿ ವಸ್ತುವ |
ನನುಗೊಳಿಸಿ ಬಾಂಧವರನೆಲ್ಲರ |
ವನಿತೆ ಸಂತಸಗೊಳಿಸಿ ರಾಜಿಸುತಿರ್ಪಳನವರತ || ೬೭

ಇಂತೆಸೆವ ಸತಿಯೊಡನೆ ತಾನು ನಿ |
ರಂತರದೆ ಗಾರ್ಹಸ್ಥ್ಯಧರ್ಮವ |
ನಂತವನು ವಿರಚಿಸುತ ಮಂಡನಮಿಶ್ರಪಂಡಿತನು ||
ಚಿಂತಿತಾರ್ಥವ ಪಡೆದು ಮನದೊಳು |
ಕಂತುಹರಚರಣಾಬ್ಜಯುಗ್ಮವ |
ಸಂತಸದಿ ಭಜಿಸುತ್ತಲಿರ್ದನು ವಿಪುಳಭಕ್ತಿಯಲಿ || ೬೮

ಶ್ರುತಿವಿಹಿತ ಮಾರ್ಗದಲಿ ದೇವ |
ಪ್ರತತಿ ಸಂತುಷ್ಟಿಗಳನೆಸಗುತ |
ಹಿತದೊಳತಿಥಿವ್ರಜವನಾರಾಧಿಸುತ ಭಕ್ತಿಯಲಿ ||
ಸತತ ಶುಶ್ರೂಷೆಯಲಿ ಮಾತಾ |
ಪಿತರ ಸಂತಸವಡಿಸಿ ವೇದ |
ಪ್ರತತಿಯನು ಶಿಷ್ಯರಿಗೆ ಬೋಧಿಸುತಿರ್ದನಾಬ್ರಹ್ಮ || ೬೯

ಇಂತು ಮಂಡನಮಿಶ್ರಮುನಿಪತಿ |
ಕಾಂತೆಯಿಂದೊಡಗೂಡಿ ಯಜ್ಞವ |
ನಂತವನು ನೆರೆ ರಚಿಸಿ ಗಾರ್ಹಸ್ಥ್ಯದಲಿ ವರ್ತಿಪುದು ||
ಸಂತಸದಿ ಬಹುಕಾಲ ನೋಡಿಯು |
ನಂತರದೊಳಾ ಹಿಮಮಿತ್ರ ತನ್ನಯು |
ಕಾಂತೆಯಿಂದೊಡಗೂಡಿ ಪಡೆದನು ಪರಮಸದ್ಗತಿಯು ||

ಪಿತೃಗಳನು ನೆರೆ ತೃಪ್ತಿಪಡಿಸುತ |
ಲತಿಥಿಗಳನರ್ಚಿಸುತ ಸುರಸಂ |
ತತಿಗೆ ತುಷ್ಟಿಯ ಬಡಿಸಿ ಬಹುವಿಧ ಯಜ್ಞಕರ್ಮದಲಿ ||
ಸತತ ಕರ್ಮಬ್ರಹ್ಮವಾದವ |
ಹಿತದಿ ಲೋಕಕೆ ಬೋಧೆಗೈವುತ |
ಲತಿಶಯದ ಸುಖದಿಂದಲಿರ್ದನು ವಿಶ್ವರೂಪಕನು ||

ವರಮುನಿಯು ಶಾಪದಲಿ ಭಾರತಿ |
ಧರಣಿಯುಲಿ ಜನಿಯಿಸಿ ವಿಧಾತಗೆ |
ವರಸತಿಯು ತಾನಾಗಿ ಜಸವನು ಪಡೆದು ಮನದೊಳಗೆ ||
ಸುರನುತ ಶ್ರೀಕಂಠದೇವನು |
ವರ ಯತಿಯುರೂಪಿನಲಿ ಬರುವುದ |
ನೆರೆ ನಿರೀಕ್ಷಿಸುತಿರ್ದಳಾ ಮಾಹೀಷ್ಮತೀಪುರದೆ ||

ಸಂಧಿ ೨೦ಕ್ಕೆ ಪದ್ಯ ೮೯೯ಕ್ಕೆ ಮಂಗಳ.

# ಇಪ್ಪತ್ತೊಂದನೆಯ ಸಂಧಿ.



ಸೂಚನೆ॥ ಸುರಗುರುಜನಾಶ್ರಮವನುಳಿದಾ।
ಹರನು ವರಕಾಶ್ಮೀರದೇಶದೆ।
ಮೆರೆವ ಮಾಹಿಷ್ಮತಿಯ ಸಾರಿದನಜನಪಾಲಿಸಲು॥

ಕೇಳು ಶೌನಕಮುನಿಪ ಸುರಕುಲ।
ಮೌಳಿಮಂಡಿತಚರಣಯುಗ್ಮನ।
ಲೀಲೆಯನು ವಾಗ್ದೇವಿಯುನ್ನತಶೀಲಗಳನೊಲಿದು॥
ಪೇಳುವೆನು ಮುಂಗಥೆಯ ನೀನೆರೆ।
ಲಾಲಿಪುದು ಭಯಭಕ್ತಿಯಿಂದಲೆ।
ಫಾಲನೇತ್ರನ ಮನುಜಲೀಲೆಯನೆಂದನಾಸೂತ॥ ೧

ಪರಮಪದವನು ಭಟ್ಟಪಾದಗೆ।
ಕರುಣಿಸಿದ ತರುವಾಯ ಪರಶಂ।
ಕರನು ಕರ್ಮಬ್ರಹ್ಮವಾದಿಯೆನಿಪ್ಪನೆಗಳ್ತೆಯನು॥
ಧರಿಸಿ ಮಂಡನಮಿಶ್ರವೆಸರಿಂ।
ಧರೆಯೊಳಿಪ್ಪಾ ವರವಿರಿಂಚಿಯ।
ಪೊರೆಯಬೇಕೆಂದೆನುತ ಮಾಹಿಷ್ಮತಿಗೆ ನಡೆತಂದ॥ ೨

ಬರುತಿರಲು ಕಾಶ್ಮೀರದೇಶದ।
ಸಿರಿ ವಿರಾಜಿಸುತಿರ್ದುದಾ ಶಂ।
ಕರನಚಿತ್ತಕೆ ಬಹುಳಹರ್ಷವಬೀರುತತಿಶಯದೆ॥
ಪರಿಪರಿಯ ಪುಟಭೇದನಂಗಳ।
ಹರಿವ ನದಿಗಳ ದಿವ್ಯಗಿರಿಗಳ।
ತರುಗಳನು ವರಶಾಡ್ವಲಂಗಳತಳೆದು ವಿಭವದಲಿ॥ ೩

ಗೋಸಮೂಹವನೊಲಿದು ವೇದ |
ವ್ಯಾಸ ನಂದದಿರಕ್ಷಿಸುತ್ತಲೆ |
ವಾಸುದೇವನ ತೆರದಲರ್ಜುನಯುಕ್ತವೆಂದೆನಿಸಿ ||
ಭಾಸುರದಯುತಿಯಂತೆ ಕರಕನ |
ಲೇಸೆನಿಸಿ ಧರಿಸುತ್ತ ಸಂತತ |
ಭಾಸಮಾನದೊಳೆಸುದುದ್ಯೆ ಕಾಶ್ಮೀರದೇಶವದು ||

ಸಕಲಧಾನ್ಯವ್ರಜವ ಕಾರ್ಷಿಕ |
ನಿಕರಕಶ್ರಮದಿಂದಲೀಯುತ |
ಅಕುಟಿಲತ್ವದೊಳಾವಗಂ ದ್ವಿಜಗಣವ ರಕ್ಷಿಸುತ ||
ಪ್ರಕಟರಾಜನ್ಯಕವಪೋಲುತ |
ಸುಕರವೆನಿಪಾ ದೇವಮಾತೃಕೆ |
ಕಕುಭವೆಲ್ಲವ ಶೋಭಿಸುತ್ತಿಹವಲ್ಲಿಕೇಳೆಂದ ||

ಹಿಮಗಿರಿಪ್ರಾಂತ್ಯದಲಿ ಜನಿಯಿಸಿ |
ವಿಮಲತೆಯ ನೆರೆವಡೆದು ತನ್ನನು |
ಮಮತೆಯಿಂ ಸೇರುತ್ತಮೀಯಲು ಬಳಿಕಲವದಿರಿಗೆ ||
ಸುಮನಸರಪದವೀವ ಸರ್ವೋ |
ತ್ತಮದ ಮಹಿಮೆಯ ವರವಿತಸ್ತಾ
ವಿಮಲನದಿ ರಂಜಿಪುದು ವರಕಾಶ್ಮೀರವಿಷಯದಲಿ ||

ಒಂದುಕಡೆಯೊಳು ತುಹಿನಗಿರಿಶಿರ |
ದಿಂದಿಳಿವ ಸುರಗಂಗೆಯೆಂದೆಂ |
ಬೊಂದು ನದಿಯೊತ್ತಿನಲಿ ಶಾರ್ವದ ಪೂರ್ಣಿಮಾದಿನಕೆ ||
ನಂದಿಯೊಡನುದ್ಭವಿಸಿ ಭಕ್ತರ |
ಸಂದಣಿಯನುದ್ಧರಿಪ ಸುರಕುಲ |
ವಂದಿತನ ಪರಶಿವನ ದಿವ್ಯಾಲಯವು ರಂಜಿಪುದು ||

ಮೆರೆವ ಫಲನಿಕರಗಳನಾಂತಿಹ |
ತರುಗಳಲಿ ಮೋಣಲ್ಲಿಗಲ್ಲಿಗೆ |
ಹರಿವನದಿಗಳ ತೀರದೇಶದಿ ಬೆಳೆದತೃಣಗಳಲಿ ||
ಕರನೆಸೆವಶಾಲಿಗಳ ಸೊಂಪಿನ |
ಉರುತರದ ಕಾಶ್ಮೀರಜನ್ಮದ |
ಸುರಭಿಯಿಂ ಶೋಭಿಪುದು ವರಕಾಶ್ಮೀರವನವರತ ||

ತರುಗಳೆಲ್ಲವು ಕಲ್ಪತರುಗಳು |
ತುರುಗಳೆಲ್ಲವು ಕಾಮಧೇನುಗ |
ಳುರುತರದಜನರೆಲ್ಲ ವಿದ್ಯಾಧರರು ಬಳಿಕಲ್ಲಿ ||
ನೆರೆ ಬಿರಿದ ಫಲರಸವೆ ವರಸುಧೆ |
ತರುಣಿಯರು ದೇವಾಂಗನೆಯರಂ |
ತಿರಲು ವರಕಾಶ್ಮೀರವೆಸೆದುದು ಸಗ್ಗಕೆಣೆಯೆನಿಸಿ ||

ಇಂತೆಸೆವ ಕಾಶ್ಮೀರದೇಶದ |
ನಂತ ಸೊಬಗನುನೋಡಿ ಪಶುಪತಿ |
ಯಂತರಂಗದಹರುಷದಿಂ ಬಹುತೀವ್ರಗಮನದಲಿ ||
ಸಂತಸದೆ ಬರುತಿರಲು ಮುಂದೆ ಕೃ |
ತಾಂತಹರಸಖಪುರವ ಪೋಲುವ |
ನಂತ ವಿಭವದನಗರ ಮಾಹಿಷ್ಮತಿವಿರಾಜಿಸಿತು |

ಬಂದು ತನ್ನಗರೋಪಕಂಠದ |
ನಂದನವಸಾರುತ್ತಲತ್ಯಾ |
ನಂದದಿಂ ಯತಿಪತಿಯು ನೆರೆನೋಡುತ್ತಸಿಂದಿರಲು ||
ಸಂದವಾಸ್ತೋಷ್ಪತಿಯ ಸುರುಚಿರ |
ನಂದನವ ಧಿಕ್ಕರಿಪತೆರದೊಳ |
ಗಂದು ತದ್ವನವೆರೆಯುತಿರ್ದುದು ಮುನಿಪಕೇಳೆಂದ ||

ವರಯುತಿಯು ದರ್ಶನಕೆ ಮರುತನು |
ಸರಸರಿಸಿ ಬರುತಿರ್ದುಮಾರ್ಗದಿ |
ತರುಗಳನು ತಾನೆಡಹಿ ಕೃತಕಾದ್ರಿಗಳನಡಹಾಯ್ದು ||
ಸರಸಿಯಲಿ ಬಿದ್ದೆದ್ದು ಸಾರಸ |
ಸುರಭಿಯನು ನೆರೆ ಹೊತ್ತು ಬಳಲುತ |
ಚರಣಗಳನೆಳೆದಿಡುತಬಂದನು ಮಂದಗಮನದಲಿ ||

ಸ್ನುಷೆಯ ಶಾಪವ ಹರಿಸಲೈದಿಹ |
ವಿಷಧರಗೆ ಕಾಣಿಕೆಯನೀಡಲು |
ವಿಷಜಮಂದಿರೆ ಬಂದು ತಾವನದೇವಿಯಂದದಲಿ ||
ವಿಷಮರತ್ನವನಿತ್ತಳೆಂದೆನೆ |
ವಿಷಯದೂರನ ಬಳಿಯೊಳಾವನ |
ವಿಷಯದೊಳಗೆರೆಬಿರಿದದಾಡಿಮ ಫಲಗಳೊಪ್ಪಿದವು ||

ಸ್ಮರನು ವನದೊಳಗಿರ್ದು ಬರುತಿಹ |
ಹರನಕಾಣುತಲಂಜಿ ತನ್ನಯ |
ಶರಗಳೈದನು ಬಿಸುಟುಪೋದಂದದಲಿ ಪರಿಕಿಸಲು ||
ಸರಸಿಯೊಳಗರವಿಂದನೈದಿಲೆ |
ತರುಗಳೊಳಗೆಯಶೋಕ ಚೂತವು ||
ವರಲತೆಯೊಳಾಮಲ್ಲಿಗೆಯು ನೆರೆವನದಿ ರಾಜಿಪವು ||

ಕಾಮ ಭಯದಿಂದೋಡಲಾತನ |
ಕಾಮಿತಧ್ವಜ ಧನುವು ವಾಹನ |
ವೈಮನಸ್ಯದೊಳಲ್ಲಿಯೇ ಕಾದಿರ್ದವೆಂಬಂತೆ ||
ತಾಮರಸಯುತಕೊಳದಿ ಮತ್ಸ್ಯ ಸು |
ಧಾಮಯದಧವಳೇಕ್ಷು ದಂಡದ |
ಸೀಮೆಯೊಳಗಾ ಕೀರವಿರಲುದ್ಯಾನರಂಜಿಸಿತು ||

ಪುರುಷ ಮಂದಾರಾಮ್ರ ಕಿಂಶುಕ ।
ವರತಿರೀಟವು ಗುಗ್ಗಲವು ಕರ ।
ಸರಳ ಲಿಕುಚವು ಬಿಲ್ವಿರಾಜಾದನಿಯು ರೇಚಕಿಯು ॥
ಸುರುಚಿರದ ಚಂಪಕವು ದಾಡಿಮ ।
ಕುರವಕವು ಜಂಬೀರಜಂಬುವು ।
ಮರುವಕವು ಮೊದಲೆನಿಪ ತರುಲತೆ ವನದೊಳೊಪ್ಪಿದವು ॥ ೧೬

ಹೊರಗಿರಿಸಿ ಸಜ್ಜನರ ದುಷ್ಟರ ।
ನಿರದಲೊಳಪೊಗಿಸುತ್ತ ಪೊರೆವುದು ।
ಧರೆಯೊಳಾಶ್ರೀಮಂತರಾದರ ಸಹಜಗುಣವೆಂದು ॥
ಧರೆಗೆ ತೋರಿಸುವಂತೆ ಹಂಸೆಯು ।
ಹೊರಗಿರಿಸಿ ಮಧುಕರನ ತವ್ಮೊಳ ।
ಗಿರಿಸಿಕೊಂಡಿಹವಲ್ಲಿ ಸಿರಿಗೃಹವೆನಿಪ ವನಜಗಳು ॥ ೧೭

ತನಗೆ ದೊರೆತನಿತರಲಿ ಸೌಖ್ಯವ ।
ನನುಭವಿಸಿ ನೆರೆ ತೃಪ್ತಿವಡೆಯದೆ ।
ಘನತರದ ವಸ್ತುವನು ಬಯಸುತ ದುಃಖಗೊಂಬಂತೆ ॥
ಇಸಿದೆನಿಪ ಸಹಕಾರಫಲರಸ ।
ವನು ತಿರಸ್ಕರಿಸುತ್ತ ಗಿಳಿಗಳು ।
ಕೊನೆಗೆ ನೊಂದವು ಕುಟುಕಿ ಬಲಿತಿಹನಾರಿಕೇಳಗಳ ॥ ೧೮

ತಿಳಿಗೊಳನತಂಪಿನಲಿ ಮೇಣಾ ।
ಜಲರುಹದ ಕಂಪಿನಲಿ ರಂಜಿಪ ।
ತಳಿತಶೋಕೆಯ ಕೆಂಪಿನಲಿ ಮಾಂದಳಿರಗುಂಪಿನಲಿ ॥
ಸುಳಿವ ಮಂದಾನಿಲನಸೊಂಪಿನ ।
ಲುಲಿವ ಪಿಕಸರದಿಂಪಿನಲಿ ಸಲೆ ।
ಸುಲಭದಿಂ ಜನಮನವ ಸೆಳೆಯುತ್ತಿರ್ದುದಾವನವು ॥ ೧೯

ಇಂತು ಪಾಂಥರಿಗಧಿಕತರ ವಿ|
ಶ್ರಾಂತಿಯನು ನೆರೆಕುಡುತಲುಪವನ|
ಸಂತಸದೊಳೆಸೆದಿರಲು ಸುರಪನವನವಪೋಲ್ವಂತೆ॥
ಕಂತುಮಥನನು ಪುಗುತಮಾರ್ಗ|
ಶ್ರಾಂತತೆಯ ಪರಿಹರಿಸಿ ಹರ್ಷ|
ಸ್ವಾಂತನಾಗುತ ಸಾರ್ದನಲ್ಲಿಯ ವರಸರೋವರವ॥

ಬಂದು ಸರಸಿಯ ದಿವ್ಯಜಲದೊಳು|
ಮಿಂದು ಯತ್ಯಾಶ್ರಮದ ಧರ್ಮವ|
ನಂದಮಿಗೆ ವಿರಚಿಸಿಯೆ ತಡಿಯೊಳಗಿರುವಮಾಮರನ॥
ಇಂದುಮೌಳಿಯು ಸಾರುತತ್ಯಾ|
ನಂದದಿಂದಲೆ ಕುಳಿತು ತದ್ವನ|
ದಂದವನು ನೋಡುತ್ತಲಿದ್ದನು ಮುನಿಪಕೇಳೆಂದ॥

ಈತೆರದಿ ಕುಳಿತಿರ್ಪ ಯತಿಪನ|
ನಾ ತಮೋಹರ ನೋಡುತರಿದನು|
ಭೂತನಾಥನು ಪರಮಹಂಸಾಶ್ರಮವಕೈಗೊಂಡು॥
ಭೂತಲದಿ ಸಂಚರಿಪನೆಂಬುದ|
ಸಾತಿಶಯಭಕ್ತಿಯಲಿ ವಂದಿಸು|
ತಾತನಂ ಬೀಳ್ಕೊಂಡು ಸಾರ್ದನು ಪಶ್ಚಿಮಾಚಲಕೆ॥

ತರಣಿಯಪರಾಂಗನೆಯ ಸೇರಲು|
ತೆರಳಲೀಯದೆ ಮುತ್ತಿಕೊಂಡಿಹ|
ಸರಸಿಜದ ಸಂಕುಲವೊ ಮೇಣ್ಪಶ್ಚಿಮದಿಗಂಗನೆಯು॥
ವರಪತಿಯ ಕಾಣುತ್ತಲುಬ್ಬಿದ|
ಪರಮಸಂಭ್ರಮ ರಸವೊ ಪೇಳುವ|
ಡರಿದೆನಲು ಪಶ್ಚಿಮದಿ ಸಂಧ್ಯಾರಾಗವೊಪ್ಪಿದುದು॥

# ಇಪ್ಪತ್ತೊಂದನೆಯ ಸಂಧಿ

ದಿನಪನಸ್ತಮಿಸಿದುದಕಾಣುತ |
ವನಜತತಿಮುಚ್ಚಿದವು ಮುಖಗಳ |
ಕನಲುತಿಂದಿಂದಿರಗಳ್ಕೈದಿದವಿತರಸುಮಗಳನು ||
ವಿನುತ ಕೋಕಗಳಾಗ ವಿರಹಕೆ |
ತನುವತೆತ್ತವು ತಗಡುಗತ್ತಲೆ |
ಯನುವಿನಿಂದಾವರಿಸಿಕೊಂಡುದು ಭುವನಕೋಶವನು ||

ಯತಿಪತಿಯೆ ಪಶುಪತಿಯು ನಿಜವೆಂ |
ದತಿಶಯದಿ ತಿಳಿದಿರ್ಪ ಸುರಸಂ |
ತತಿಯು ದರ್ಶನಕೆಳಸಿಬಂದಿರೆ ವರವಿಮಾನಗಳ ||
ವಿತತಿಕಂಗೊಳಿಪಂತೆ ತಾರಾ |
ವ್ರತತಿಗಳು ಹರಿಪದದಿ ತೇಜೋ |
ನ್ನತಿಯಲಿರ್ದವು ವರಮುನಿಪ ಕೇಳೆಂದನಾಸೂತ ||

ಭೋಗಿಭೂಷಣನಿರುವ ವನದೊಳ |
ಗಾಗ ಕತ್ತಲೆ ಕವಿದುಕೊಂಡಿರೆ |
ಬೇಗಲಮರರು ಬೆಳಕನಿಟ್ಟಂದದಲಿ ಪರಿಕಿಸಲು ||
ಆಗಸದೊಳುದ್ಭವಿಸಿ ಚಂದ್ರಮ |
ರಾಗಮಿಗೆ ಕೌಮುದಿಯು ಹರಹಲು |
ನೀಗಿದುದು ಕತ್ತಲೆಯು ಧರಣೀತಲವು ಥಳಥಳಿಸೇ ||

ಸಿರಿನಿಕೇತನಗಳನು ಬಾಧಿಸಿ |
ಹರಿಸುತಾದ್ವಿಜನಿಕರಕಾಂತಿಯು |
ಸುರಗುರುದ್ರೋಹವನು ಗೈದಿಹಕತದೊಳಮೃತಾಂಶು ||
ವರಯುತಿಯನ್ನೈದಲಿಕೆ ಲಜ್ಜಾ |
ಭರಿತನಾಗುತ ದೂರದಿಂದಲಿ |
ಮರೆಮರೆಯಲೀಕ್ಷಿಸುತಲಿರ್ದನು ತರುಗಳಿಡುಬಿನಲಿ ||

ಸುತನ ಗುಣದುರ್ಗುಣವ ತನ್ನಯ |
ಮತಿಗೆತಾರದೆ ಬರಿಯರೂಪಕೆ |
ಪಿತನು ಮರುಳಾಗುತ್ತಲುಬ್ಬುವತೆರದೊಳಾಶಶಿಯು ||
ಅತಿಶಯದ ದೋಷಗಳನೆಣಿಸದೆ |
ಸುತ ಕಲಾಧರನೆಂದು ಮೀರಿದ |
ಹಿತದೊಳುಬ್ಬಿದನಂದು ವಸುಧಾಪರಿಧಿಘನಶರಧಿ ||

ಕೈರವಗಳಿಂದುವನು ಕಾಣುತ |
ಭೂರಿ ಸಂಭ್ರಮದಿಂದನಗುತಲಿ |
ಸಾರುತಿಹ ಷಟ್ಚರಣನಿಕರಗಳಾಗ ಝೇಂಕರಿಸಿ ||
ದೂರಿದಡೆ ಕಮಲಗಳನದಕುರೆ |
ಮೀರಿದುತ್ಸಹದಿಂಪರಾಗವ |
ಸೂರೆಗೊಟ್ಟವು ಕುಮುದತತಿಗಿದುಸಹಜವೆಂದೆನಲು ||

ಇಂತೆಸೆವ ರಜನಿಯಲಿ ವಿಗತ |
ಶ್ರಾಂತನಾಯತಿಪತಿಯು ಹರ್ಷ |
ಸ್ವಾಂತನಾಗಿಯೆ ವಿಮಲಯೋಗಾಸಕ್ತನಾಗಿರಲು ||
ಅಂತಬಲುನಿದ್ರೆಯಲಿ ಖಗಮೃಗ |
ಸಂತತಿಯು ಮರೆದೊರಗಿ ಮಾಯಾ |
ಭ್ರಾಂತಿಯಿಂ ಬಿಗಿವಡೆದತೆರದೊಳಗಿರ್ದವಾವನದೆ ||

ಇರುತಿರಲು ಬಳಿಕಾಗ ಲೋಕದಿ |
ಪರಮದ್ವೈವಾಞ್ಛೆಯನು ಮೀರದೆ |
ಪರಿಕರವನಳವಡಿಸಿ ಬಹುಧರ್ಮಗಳನಾಚರಿಸೆ ||
ಪರಗತಿಯು ದೊರಕುವುದು ನಿಜವೆಂ |
ದೊರೆದು ತಾ ಸ್ವರಮೂರರಿಂದಲಿ |
ನರರಿಗೆಚ್ಚರಿಪಂತೆ ಚರಣಾಯುಧವು ಕೂಗಿದುದು ||

ತೀಡಿದುದು ತಂಗಾಳಿಯಾಗಲು |
ಬಾಡಿದುವು ತಾರಕಿಗಳೆನೆ ತೆಗೆ |
ದೋಡಿದುದು ಕತ್ತಲೆಯು ಲೋಕಾಲೋಕವನುದಾಂಟಿ ||
ಮೂಡಲೊಳು ಕೆಂಪಡರೆ ಕಮಲವ |
ಕಾಡಿಪತಿ ದೋಷದಿನಳಲ್ದನು |
ನೀಡುಮೆನೆ ಶಶಿಯಾಗೆ ತೇಜೋಹೀನನೆನಿಸಿದನು || ೩೨

ಪಾಕಶಾಸನಮುಖ್ಯದಿವಿಜಾ |
ನೀಕಪೂಜಿತ ಪರಮಪಾವನ |
ಲೋಕಬಾಂಧವನುದಿಸೆ ಪೂರ್ವಾಚಲದ ಶಿಖರದಲಿ ||
ಕೋಕತತಿಸಂಭ್ರಮಿಸುತಿರ್ದುದು |
ಕೋಕನದ ನಗುತಿರಲು ಕಾಣುತ |
ಲಾ ಕುಮುದಸಂದೋಹ ಮುಖವನು ಮುಚ್ಚಿತೀರ್ಷೆಯಲಿ || ೩೩

ಗಗನ ನೆರೆ ಥಳಥಳಿಸುತಿರ್ದುದು |
ಜಗಕೆ ಮಂಗಳವಾಯ್ತು ಮೇಣಾ |
ಖಗವಿತತಿಸಂಭ್ರಮಿಸುತಿರ್ದುದು ಸುಸ್ವರವತೋರಿ ||
ದೃಗುಯುಗಳವರಳಿದವು ಸರ್ವರಿ |
ಗೊಗುಮಿಗೆಯಭಕ್ತಿಯಲಿ ಜನತತಿ |
ನಿಗಮವೇದ್ಯನ ಗುಣವಪಾಡುತಲಿರ್ದುದಲ್ಲಲ್ಲಿ || ೩೪

ಊರಿನೊಳಗೀಕ್ಷಿಸಲು ನಭದೊಳ |
ನೂರುವುದಯಿಪಮುನ್ನಮೇ ವರ |
ನಾರಿಯರು ತಾವೆದ್ದು ಮಂಗಳತರನಿಕೇತನದ ||
ದ್ವಾರದೇಶಂಗಳನು ಮುದದಿಂ |
ಸಾರಿ ಶುದ್ಧಿಯಗೈದು ನೆರೆ ಪಿ |
ಸ್ತಾರ ಚಿತ್ರದಿನೆಸಗುತಿರ್ದರು ರಂಗವಲ್ಲಿಗಳ || ೩೫

ದಿನಪ ಪೂರ್ವಾದ್ರಿಯನು ಸಾರಿರೆ |
ಜನವಿತತಿ ಮುದದಿಂದ ಕಾಲ್ಯದ |
ವಿನುತ ಧರ್ಮಾಚರಣೆಗಳನವರವರ ಧರ್ಮದಲಿ ||
ಅನುವಿನಿಂದಾಚರಿಸಿ ಬಳಿಕಾ |
ಮನೆಯ ಕೃತ್ಯಗಳೆಲ್ಲವನು ತಾ |
ವನುಸರಿಸಿ ಸಾರುತ್ತಲಿರ್ದರು ಸದನಗಳನುಳಿದು ||

ಇತ್ತ ಪದ್ಮಾಕರದೊಳಿಳಿಯುತ |
ಲುತ್ತಮದ ಜಲದೊಳಗೆ ಸಮ್ಮುದ |
ವೆತ್ತು ಯತಿಯಘಮರ್ಷಣವ ವಿಧಿಯಿಂದಲಾಚರಿಸಿ ||
ಉತ್ತಮಾಶ್ರಮಧರ್ಮಕರ್ಮವ |
ನುತ್ತರಿಸಿ ಕಾಷಾಯವಸ್ತ್ರವ |
ಸುತ್ತಿ ದಂಡವಧರಿಸಿ ನಡೆತರುತಿರ್ದನಾವನದೆ ||

ವನವಿಜೃಂಭಣೆಗಳನು ನೋಡುತ |
ಮನದಿ ಸಂಭ್ರಮವಾಂತು ಯತಿಯಾ |
ವನಜಪೀಠನ ಕಾಣಲೋಸುಗ ಭರದಿಬರುತಿರಲು ||
ವನಜಭವನಂಶವನು ಬಿಟ್ಟಾ |
ವನಜಸಖನೊಲಿದಾಮಹೇಶನ |
ವಿನುತ ಸಾರೂಪ್ಯವನು ಕೈಗೊಂಡಿರ್ದನಂಬರದೆ ||

ದಂಡಧರಪಿತನಾಗ ತನ್ನಯ |
ಚಂಡಕಿರಣಗಳಿಂದ ನೆಲನನು |
ಕೆಂಡದಂತಿರೆಗೈದು ಪಾಂಥರ ಪೀಡಿಸುತ್ತಿರಲು ||
ಖಂಡಶಶಿಮಂಡಲವ ತನ್ನಯ |
ಮಂಡೆಯೊಳಗಾಂತವನು ಲೋಕೋ |
ದ್ದಂಡ ಶಾಂತತೆಯಿಂದ ತಂಪನು ಬೀರುತೈದಿದನು ||

ನಂದನವ ಪೊರಮಟ್ಟು ಮಸ್ಕರಿ ।
ಮುಂದೆ ಬರುತಿರೆ ವಿಶ್ವರೂಪನ ।
ಮಂದಿರವನುಳಿದೈದಿ ಬರುತಿಹ ಘನಪಲಿಕ್ಕಿಯನು ॥
ಅಂದದಿಂ ಪೊತ್ತಿರ್ದ ಕುಟಿವನು ।
ನಿಂದು ಕಂಡಾಕೆಯನು ಸಮ್ಮುದ ।
ದಿಂದ ನುಡಿಸಿದನಿಂತು ಕೇಳ್ಗೆ ಭೃಗುಕುಲೋತ್ತಮನೆ ॥ ೪೦

ಎಲೆವನಿತೆಯೀಪುರದಿ ಸಂತತ ।
ನೆಲಸಿಕೊಂಡಿಹ ವಿಪ್ರಜನರೊಳು ।
ಸಲೆಸುಕೀರ್ತಿಯನಾಂತ ಮಂಡನಮಿಶ್ರಪಂಡಿತನ ॥
ನಿಲಯವೆಲ್ಲಿಹುದದನು ನೀನೆನ ।
ಗೊಲಿದು ತಿಳಿವಂದದಲಿ ಪೇಳ್ದೊಡೆ ।
ಸುಲಭದಿಂ ದೊರಕುವುದು ಸುಕೃತವಿಶೇಷ ನಿನಗೆಂದ ॥ ೪೧

ಎನಲು ಕೇಳ್ದಾವೃದ್ಧೆ ತನ್ನಯ ।
ಮನದೊಳಚ್ಚರಿಯಾಂತು ಸಂಯಮಿ ।
ಗನುನಯದಿ ವಂದಿಸುತಲೀತನು ಪರಮಶಿವನೆಂದು ॥
ನೆನೆದು ನಡಿದಳು ಪರಮಹಂಸನೆ ।
ನಿನಗೆ ಮಂಡನಮಿಶ್ರಗೇಹದ ।
ವಿನುತವಹ ಕುರುಹುಗಳಪೇಳುವೆನೊಲಿದುಕೇಳೆಂದು ॥ ೪೨

ವೇದವೇ ನಿಜಸುಪ್ರಮಾಣವು ।
ವೇದವೆನ್ನುತಲಾವ ವರಗೃಹ ।
ದಾದಿಯೊಳು ಕಂಗೊಳಿಪ ಬಾಗಿಲಮುಂದೆ ಪಂಜರದೆ ॥
ಮೋದದಿಂದಿರುತಿರ್ಪ ಗಿಳಿಗಳು ।
ಬೋಧೆಗೈಯುತಲಿಹವೊ ತದ್ಗೃಹ ।
ವಾದಿಶಾಂತವ್ಯಾಪ್ತಕೀರ್ತಿಯಗೇಹವೆನಿಸುವುದು ॥ ೪೩

ಸಾರತರ ಸತ್ಕರ್ಮನಿಕರಕು |
ದಾರ ಫಲಗಳನೊಲಿದುಕೊಡುವನು |
ವಾರಿಜೋದ್ಭವನೆಂದು ಪಂಜರದೊಳಗೆ ನೆರೆಕುಳಿತು ||
ಕೀರಗಳು ಸಾರುತ್ತಲಿರ್ಪವ |
ದಾರ ಸದ್ಮದ್ವಾರದೇಶದೊ |
ಳಾರಯಿಸಲಾ ಗೃಹವೆ ಮಂಡನಮಿಶ್ರವಿಪ್ರನದು ||

ಜಗವುನಿಜ ನಿಜವಲ್ಲವೆಂಬೀ |
ಬಗೆಯ ಚರ್ಚಿಸಿ ತಮ್ಮತವ್ಮೊಳು |
ಜಗವು ನಿಜವಲ್ಲೆಂದು ನಿರ್ಣಯುಗೈದು ವಾಚಿಸುತ ||
ಬಗೆಬಗೆಯ ಪಂಜರದಗಿಳಿಗಳು |
ಸೊಗಸು ಮಿಗೆ ತಾವಾವನಿಲಯದ |
ಜಗಲಿಗಳಮೇಲಿಹವೊ ಗೃಹವದು ವಿಶ್ವರೂಪನದು || ೪೫

ದಾರಸಂಗ್ರಹಗೈದು ಕರ್ಮವಿ |
ಚಾರಪರರಾಗುತ್ತ ಸಂತತ |
ಭೂರಿಯಜ್ಞವರಚಿಸಿ ಮೋಕ್ಷವಪಡೆವುದೆಂದೆನುತ ||
ಆರಗೇಹದ್ವಾರದೇಶದ |
ಕೀರಗಳು ಸಾರುತ್ತಲಿರ್ಪವೊ |
ಪಾರಿಕಾಂಕ್ಷಿಯೆ ಕೇಳು ತದ್ಗೃಹ ವಿಶ್ವರೂಪನದು || ೪೬

ಎಂದುಪೇಳಿದ ವನಿತೆಯುತ್ತರ |
ದಿಂದ ಸಮ್ಮುದವಾಂತು ಯತಿಯು |
ಲ್ಲಿಂದ ತೆರಳುತ ಬಂದುಹೊಕ್ಕನು ಪುರವರವನದನು ||
ಸಂದವಿಪ್ರರ ನಿಳಯಪಙ್ತಗ |
ಳಿಂದ ಪರಿಶೋಭಿಸಿತು ತಾನರ |
ವಿಂದಸಂಭವಪುರಕೆ ಮಿಗಿಲೆಂದೆನಿಪಕಾಂತಿಯುಲಿ || ೪೭



ಶ್ರೀ ಶಂಕರರು ಮಂಡನಮಿಶ್ರರ ಮನೆಗೆ ಬರುತ್ತಿರುವ ಭಾವವು.

ಭೂತ್ರಿದಶಪಂಡಿತರು ಮೇಣಾ |
ಕ್ಷಾತ್ರವಂಶೋದ್ಭವರು ಬಹು ಸ |
ದ್ಗೋತ್ರಜಾತರು ವೈಶ್ಯಶೂದ್ರರು ವಾಸಿಸುತ್ತಿರಲು ||
ಧಾತ್ರಿಯೊಳಗುತ್ಕೃಷ್ಟವೆನಿಸುತ |
ನೇತ್ರಗಳಿಗಾನಂದವೀಯುತ |
ಲಾತ್ರಿನೇತ್ರನ ಮನವ ಸೆಳೆಯುತ್ತಿರ್ದುದಾಪುರವು || ೪೮

ಎಲ್ಲರುಂ ಕುಲವಿಹಿತಕರ್ಮಗ |
ಳಲ್ಲಿ ನಿರತರು ದಾನಧರ್ಮವ |
ನುಲ್ಲಸದಿ ವಿರಚಿಪರು ಸಂತರು ಶೀಲಗುಣಯುತರು ||
ಫುಲ್ಲನಾಭನ ಪಾದಪಲ್ಲವ |
ದಲ್ಲಿ ಚಿತ್ತವನಿಟ್ಟು ಭಜಿಸುವ |
ಸಲ್ಲಲಿತಗುಣವಂತರಾ ಮಾಹಿಷ್ಮತೀಜನರು || ೪೯

ಹರಿಹರರ ದಿವ್ಯಾಲಯಂಗಳ |
ಪರಿಪರಿಯ ಸೌಧಗಳ ಸಾಲ್ಗಳ |
ವರವಿಟಂಕಂಗಳಲಿ ವೇದಿಕೆತೋರಣಂಗಳಲಿ ||
ಉರುತರದ ವಾತಾಯನಂಗಳ |
ನೆರೆ ತಳೆದ ಸದ್ಮಗಳಸಾಲಿಂ |
ಧರೆಯಮಂಡನದಂತೆ ಸಂತತ ಪುರವಿರಾಜಿಪುದು || ೫೦

ಹಲಗಳಿಂದೌಕ್ಷಕಗಳಿಂದಲೆ |
ಪಲವುಬಣ್ಣದ ವಾತ್ಸಕಂಗಳ |
ಲುಲಿವಮೇಷಂಗಳಲಿ ಗೋಪತಿಮಹಿಷನಿಕರದಲಿ ||
ಹಲವುಧಾನ್ಯದರಾಶಿಯಿಂದಲೆ |
ಸಲೆ ವಿರಾಜಿಸುತಿರ್ದವಾ ವರ |
ನಿಲಯಪಂಙ್ತಿಗಳಿಂದ ಶೂದ್ರರಕೇರಿಗಳು ಪುರದೆ || ೫೧

ಸಕಲವಿಧ ಸಂವೃಷ್ಟಧಾನ್ಯ |
ಪ್ರಕರತೈಲಾಜ್ಯಾದಿ ವಸ್ತುವ |
ಸುಕರಮೆನೆ ವಿಕ್ರಯಿಸುತಿರ್ಪಂಗಡಿಯಸಾಲಿನಲಿ ||
ಆಕುಟಿಲತ್ವದಿ ನಡೆವ ವಾರ್ಧುಷಿ |
ನಿಕರದಿಂದಲಿ ಕನಕರತ್ನ |
ಪ್ರಕರದಿಂದಲಿ ವೈಶ್ಯವೀಧಿಗಳೊಪ್ಪುತಿಹವಲ್ಲಿ ||

ಕರಿತುರಗರಥಶಾಲೆಯಿಂದಲೆ |
ಪರಶುತೋಮರಕುಂತವಸಿಮು |
ದ್ಗರಗದಾದಂಡಾದಿ ಶಸ್ತ್ರೋತ್ಕರಗಳಿಂದೆಸೆವ ||
ಸುರುಚಿರಾಯುಧಶಾಲೆಯಿಂದಲೆ |
ನೆರೆ ವಿರಾಜಿಪ ಸದನಪಂಕ್ತಿಗ |
ಳಿರಲು ಪರಿಶೋಭಿಪುದು ಪುರದೊಳು ವೀಧಿಬಾಹುಜರ ||

ಅತಿಥಿಗಳಪೂಜಿಸುತ ನಿಯಮ |
ವ್ರತವನಾಚರಿಸುತ್ತ ಸಂತತ |
ಮತಿಯೊಳಗೆ ಹರಿಹರರಪಾದವನೊಲಿದು ಭಾವಿಸುತ ||
ಶ್ರುತಿವಿಹಿತ ಸತ್ಕರ್ಮನಿಕರವ |
ಹಿತದೊಳೆಸಗುತಲಿರ್ಪ ವಿಪ್ರ |
ಪ್ರತತಿಗೇಹಶ್ರೇಣಿಯೊಪ್ಪಿತು ಪುರದೊಳಗಲದಲಿ ||

ಗುರುಸಪರ್ಯೆಯನೆಸಗಿ ವೇದವ |
ಗುರುಮುಖದಲಧ್ಯಯನಗೈಯುತ |
ಉರುತರದ ಭಿಕ್ಷಾನ್ನಭೋಜನ ಪರಮನಿಯಮದಲಿ ||
ಸುರುಚಿರದ ಸುಬ್ರಹ್ಮಚರ್ಯವ |
ನಿರತರಕ್ಷಿಸುತಿರ್ಪ ವಟುಗಳು |
ನೆರೆ ವಿರಾಜಿಸುತಿರ್ದರಾ ವಿಪ್ರಾಗ್ರಹಾರದಲಿ ||

ಪ್ರುತಿಗಳೊಳು ಸಾಮವ ಸುಪಾತ್ರ |
ಪ್ರತತಿಯೊಳು ದಾನವನು ಭೇದವ |
ನತಿಶಯದ ಯಜ್ಞಾದಿ ಬಹುವಿಧಕರ್ಮಜಾಲದೊಳು ||
ಸತತವಾಸ್ನಾತಕದೆ ದಂಡವ |
ಹಿತದಿ ಧರಿಸುತ ರಾಜಿಸುತ್ತಿಹ |
ಚತುರವಿಪ್ರರ ನೆರವಿಯಿರ್ದುದು ಪುರದವೀಥಿಯಲಿ || ೫೬

ಎಲ್ಲರುಂ ವರದೂರದರ್ಶಿಗ |
ಳೆಲ್ಲರುಂ ಶ್ರೋತ್ರಿಯರು ಪಂಡಿತ |
ರೆಲ್ಲರುಂ ವರಯಾಯಜೂಕರು ಸೋಮಯಾಜಿಗಳು ||
ಎಲ್ಲರುಂ ರುತ್ವಿಜರು ನಾರಿಯ |
ರೆಲ್ಲರುಂ ಸುವ್ರತೆಯರೆನಿಸುವ |
ರೆಲ್ಲರುಂ ಜ್ಞಾನಿಗಳು ವರವಿಪ್ರಾಗ್ರಹಾರದಲಿ || ೫೭

ಶಾಂತರೂಪನು ಬಹುಳಹರ್ಷ |
ಸ್ವಾಂತನಾಗುತ ವಿಪ್ರನಿಳಯವ |
ನಂತವನು ಪರಿಕಿಸುತ ಬರುತಿರೆ ಪುರದಮಧ್ಯದಲಿ ||
ಪಾಂಥರಿಗೆ ವಿಶ್ರಾಂತಿಯೀಯುತ |
ನಂತತಾರಾಪರಿವೃತೇಂದುವಿ |
ನಂತೆ ಕರ್ಮಬ್ರಹ್ಮವಾದಿಯ ಸದನರಂಜಿಸಿತು || ೫೮

ವರಸುಧಾ ಧಾವಳ್ಯದಿಂದಲೆ |
ನೆರೆ ವಿರಾಜಿಪ ಭಿತ್ತಿಗಳ ಬಹು |
ತರ ವಿಚಿತ್ರದಕಾರಣೆಯು ತಾಂ ಕಾಂತಿಗೊಳುತಿರಲು ||
ಸುರುಚಿರಸ್ತಂಭಗಳಸಾಲ್ಗಳು |
ಮೆರೆವತೋರಣದಿಂದ ಶೋಭಿಸು |
ತಿರಲು ನೋಳ್ಪರಮನವ ಸೆಳೆಯುತ್ತಿರ್ದುದಾಗೃಹವು || ೫೯

ಚಾರುತರವಾಗೆಸೆವ ಸದ್ಮ |
ದ್ವಾರದಿದ್ದೆಶೆಯೊಳಗೆ ನೆರೆ ವಿ |
ಸ್ತಾರವಾಗಿಹ ಜಗಲಿಗಳಮೇಲೆಸೆವ ಪಂಜರದೆ ||
ಶಾರಿಕೆಗಳಿರುತಿರ್ದು ಬಹುಗಂ |
ಭೀರವಾಕ್ಯದಿ ಸಕಲಯಜ್ಞಾದ |
ಸಾರವುಹಿಮೆಯನುಸಿರುತಿರ್ದವು ಮಧುರತರವಾಗಿ ||

ಪರಮಸದ್ಗತಿಯಹಡೆ ಜಗದೊಳ |
ಗುರುತರದ ಸತ್ಕರ್ಮಮಾರ್ಗವೆ |
ನರಗೆ ಸುಕರವೆನಿಪ್ಪುದಲ್ಲದೆ ಬೇರೆಮಾರ್ಗದಲಿ ||
ವರಸುಗತಿ ತಾಂ ದೊರೆಯದದರಿಂ |
ಧರೆಯ ಬುಧರಿಗೆ ಬಹುಳಯಜ್ಞಾ |
ಚರಣೆಯೇ ಹಿತವೆಂದು ನುಡಿಯುತಲಿಹವು ಕೀರಗಳು ||

ಅರಗಿಳಿಯ ನುಡಿಗಳನು ಕೇಳುತ |
ಬರುವಪಥದೊಳು ವೃದ್ಧೆಯುಸುರಿದ |
ಕುರುಹಿದಹುದೆಂದೆನುತ ಭಾವಿಸಿ ತನ್ನಮನದೊಳಗೆ ||
ಪರಮಪಂಡಿತ ವಿಶ್ವರೂಪನು |
ನೆರೆ ನೆಲಸಿಕೊಂಡಿರ್ಪಗೇಹಕೆ |
ಬರುತಲಿರ್ದನು ಭರದೊಳಾ ಶ್ರೀಕಂಠನಂದೊಲಿದು ||

ಸಂಧಿ ೨೧ಕ್ಕೆ ಪದ್ಯ ೯೬೧ಕ್ಕೆ ಮಂಗಳ.



# ಇಪ್ಪತ್ತೆರಡನೆಯ ಸಂಧಿ.

ಸೂಚನೆ॥ ಬಂದು ಮಂಡನಮಿಶ್ರವಿಪ್ರನ।
ಮಂದಿರವ ಸಾರಿದನು ಯತಿಪತಿ।
ಯೆಂದವಿಗೆ ಸತ್ಕಾರಪಡೆದನು ಬಹುಳವಿಭವದಲಿ॥

ಸಾದರದಿ ಮುನಿಪತಿಯೆ ಲಾಲಿಪು।
ದಾದಿವಸ ವರವಿಶ್ವರೂಪನು।
ವೋದದಿಂ ಪಿತೃಯಜ್ಞಕರ್ಮವನೆಸಗಲೋಸುಗವೆ॥
ಬಾದರಾಯಣಮುನಿಯು ಮತ್ತಾ।
ವೇದವಿದಜೈಮಿನಿಯ ಕರೆತಂ।
ದಾದರಿಸಿ ವಿಧಿಯಿಂದ ಪೂಜಿಸುತಿರ್ದನೊಲವಿನಲಿ॥ ೧

ಸಲೆ ಕುಶಾಸನವಿತ್ತು ವಿಪ್ರರ।
ನಿಳಯದೊಳು ಕುಳ್ಳಿರಿಸಿ ಬಾಗಿಲ।
ನೊಳಗೆ ಭದ್ರಿಸಿ ತನ್ನ ಶಾಖಾಕ್ರಮವನನುಸರಿಸಿ॥
ಕಲಶಸೂಕ್ತಾದಿಗಳ ಪೇಳುತ।
ಲಲಘುಮತಿ ತಾ ಕ್ಷಣವನೀಯುತ।
ತೊಳೆಯಲನುಗೈದಿರ್ದನಾದ್ವಿಜವರರ ಚರಣಗಳ॥ ೨

ಅತ್ತಲನ್ನೆಗ ಗೇಹ ಬಾಹ್ಯದೊ।
ಳುತ್ತಮಾಮಲಕೀರ್ತಿ ಯತಿ ಸ।
ರ್ವೋತ್ತಮ್ಮನು ನಡೆತಂದು ನಿಂದಾದ್ವಾರದೇಶದಲಿ॥
ಅತ್ತಲಿತ್ತಲು ನೋಡಿ ಬಾಗಿಲು।
ಕೆತ್ತುಕೊಂಡಿರೆ ಕಂಡು ಸಂತಸ।
ವೆತ್ತು ಪುಷ್ಕರಮಾರ್ಗದಿಂ ನಡೆತಂದನಾಲಯಕೆ॥ ೩

ಬರುತಲಾ ಖೇಚರರಮಾರ್ಗದಿ |
ಹರನು ಮಂಡನಮಿಶ್ರಗೃಹವನು |
ಹರುಷದಿಂದೊಳಪೊಕ್ಕನಾಗ ನಭೋವಕಾಶದಲಿ ||
ಪರಿಪರಿಯ ಧನಕನಕವಸ್ತ್ರೋ |
ತ್ಕರದಿ ಶೋಭಿಸುತಿರ್ಪ ಸದ್ಮದ |
ಸಿರಿಯಕಾಣುತ ಶಿರವತೂಗುತ ಮುಂದೆನಡೆತಂದ ||

ಎಲ್ಲಿ ಮಂಡನಮಿಶ್ರಪಂಡಿತ |
ನುಲ್ಲಸಿತನಾಗುತ್ತಲಾ ಮುನಿ |
ವಲ್ಲಭರ ಪದಯುಗಪ್ರಕ್ಷಾಳನದೊಳಿರುತಿಹನೊ ||
ಅಲ್ಲಿಗೈತರೆ ಯತಿಯು ಹಸಿತೋ |
ತ್ಫುಲ್ಲಮುಖರಾಗುತ್ತಲಿರ್ದರು |
ಫುಲ್ಲನಾಭಮುನೀಶ ಜೈಮಿನಿಮುನಿಪರತಿಶಯದೆ ||

ವ್ಯೋಮಮಾರ್ಗವನಿಳಿದುಬಂದಾ |
ಜೈಮಿನಿಯ ಹರಿಮುನಿಯಬಳಿಯಲಿ |
ಕಾಮವೈರಿಯು ನಿಲ್ಲಲಾತನ ಕಾಣುತಾಬಳಿಕ ||
ಧಾಮಕೈದಿಹ ಯತಿಯಕೋಪಿಸಿ |
ವೈಮನಸ್ಯವ ತಳೆದು ಶಾಸ್ತ್ರೋ |
ದ್ದಾಮ ಪಂಡಿತಕೇಳ್ದನೆಲ್ಲಿಂ ಮುಂಡಿಯೆಂದೆನುತ ||

ಕೇಳಿ ತದ್ವಾಕ್ಯವನು ಚಿತ್ತದೊ |
ಳಾಳಿದಾಶ್ಚರ್ಯದಲಿ ಯತಿಕುಲ |
ಮೌಳಿ ನಸುನಗೆಯಿಂದಲಾಗ ಪ್ರವೃತ್ತಿಮಾರ್ಗವನು ||
ಪಾಲಿಸುತ್ತಿಹ ಮಂಡನಾರ್ಯಗೆ |
ಪಾಲಿಸಿದನುತ್ತರವ ಮುನಿಪತಿ |
ಕೇಳು ಗಳದಿಂಮೇಲೆ ಮುಂಡಿಯೆನುತ್ತಲಂದೊಲಿದು ||

ಆದನು ಕೇಳುತ ಮಂಡನಾರ್ಯನು |
ಪದದೆನ ಮೆಟ್ಟಿದ ಸರ್ಪದಂತಿರ |
ಲೊದವಿದತಿಕೋಪದಲಿ ಕಂಗಳು ಕಿಡಿಗೆದರುತಿರಲು ||
ಸದರವಲ್ಲಲೆ ಮುಂಡಿ ನೀನತಿ |
ಚದುರತನದಿಂ ಗಳಹದಿರು ನಾ |
ನದನು ಕೇಳಿದುದಲ್ಲ ಕೇಳಿದೆ ಪಥವನರಿಯೆಂದ || ೮

ಯತಿಯು ನಸುನಗೆಗೂಡುತಾ ಗೃಹ |
ಪತಿಯ ಸಂಬೋಧಿಸುತಲೇನೈ |
ಮತಿಯುತನೆ ನೀನೆನ್ನ ಕೇಳದೆ ಪಥವಕೇಳಿದೆಯ ||
ಅತಿಶಯದಲಾಪಥವು ನಿನಗೆಂ |
ದತಿಶಯದ ಮಾತುಗಳ ಪೇಳ್ದೊಡೆ |
ಹಿತವಹುದು ತನಗೆಂದುನುಡಿದನು ವಿಶ್ವರೂಪಂಗೆ || ೯

ಕೇಳಿದನು ಮಂಡನನು ಶಂಕರ |
ಪೇಳಿದುದನಾಕ್ಷಣವೆ ಕೋಪ |
ಜ್ವಾಲೆ ನೆತ್ತಿಯನಡರೆ ಹಲುಗಳಕಡಿದುಹೂಂಕರಿಸಿ ||
ಕೇಳುಕೇಳೆಲೆ ಯತಿಯೆ ಮಾರ್ಗವು |
ಪೇಳಿದುತ್ತರಗಳನು ನನಗದು |
ಪೇಳಿದುದು ತವಜನನಿ ತಪ್ಪದೆ ವಿಧವೆಯೆಂದೆನುತ || ೧೦

ಮಾತನದನಾಲಿಸುತ ಬಳಿಕಾ |
ಭೂತನಾಥನು ನಗುತನುಡಿದನು |
ಕಾತರಿಸಬೇಡಕಟಕೇಳೈ ದ್ವಿಜಕುಲೋತ್ತಮನೆ ||
ಮಾತೆ ವಿಧವೆಯದೆಂಬ ಪಥದಾ |
ಮಾತು ಕೇಳಿದವಂಗೆ ಸಲ್ಲುವುದು |
ನೀತಿವಿದ ನೀನಲ್ತೆ ಪಥವನುಕೇಳಿದವನೆಂದ || ೧೧

ಎನಲು ಕೇಳುತ ವಿಶ್ವರೂಪನು |
ಕನಲಿ ಕೋಪಾನಲನ ಜಳದಲಿ |
ತನುವು ಮಿಗೆ ಗದಗದಿಸಿ ಬೆಮರಿನ ಬಿಂದುಗಳುಸುರಿಯೆ ||
ತನುರುಹಂಗಳು ಕೆದರಿ ನಿಲ್ಲಲು |
ಮನಸಿಜಾಂತಕನೊಡನೆ ನುಡಿದನು |
ಘನವದಲೆಲೆ ಭಿಕ್ಷು ಸುರೆ ತಾಂ ಪೀತವೋಯೆಂದು ||

ಧರಣಿಯಮರನ ನುಡಿಯ ಕೇಳುತ |
ದರಹಸಿತಮುಖನಾಗಿ ಪಂಡಿತ |
ವರನೆ ಕೇಳೈ ವರ್ಣಭೇದವು ನಿನಗೆ ತಿಳಿಯದಲ ||
ಸುರೆಯಬಣ್ಣವು ಪೀತವಲ್ಲವು |
ಪರಿಕಿಸಲ್ಕದುಸಿತವು ನೀನಿದ |
ನರಿಯದಿರ್ದುದು ಚೋದ್ಯವೆಂದನು ಕವಿಗೆ ಮದನಾರಿ ||

ಭಲರೆ ಭಾಪುರೆ ಮುಂಡಿ ಸಂಯಮಿ |
ಕುಲತಿಲಕ ನೀನಹುದು ಮದಿರಾ |
ನಿಲಯ ಪರಿಚಯವುಂಟು ನಿನಗದರಿಂದಪರಿಕಿಸಲು ||
ಸಲೆ ಸುರೆಯು ಸಿತವರ್ಣವೆಂಬೀ |
ನೆಲೆಯ ನೀನರಿತಿರ್ಪೆಯೆನಲಾ |
ಬಳಿಕ ಶಂಕರನುಡಿದ ಮಂಡನಮಿಶ್ರಗುತ್ತರವ ||

ಅಹುದಹುದು ತಪ್ಪೇನುನುಡಿದುದು |
ವಿಹಿತವಹುದೆಲೆ ವಿಪ್ರ ನಾನರಿ |
ದಿಹೆನು ಮದ್ಯದ ವರ್ಣಮಾತ್ರವ ನೀನು ಜಗವರಿಯೆ ||
ಅಹಿತವೆಂದೆನಿಸಿರ್ಪ ಮದ್ಯದ |
ಬಹುಳರುಚಿಯನು ಬಲ್ಲೆಯನಲಾ |
ದೃಹಿಣನೊಂದಿದ ಕೋಪವನು ಕಾಲಾಂತಕನತೆರದೆ ||

ಖ್ಯಾತವಹ ವಿಷಬಾಣಹತ ಮೃಗ |
ಪ್ರೋತವಾಂಸಾಶನದಿ ಮತ್ತೋ |
ಜಾತ ತಾ ವಿಪರೀತಗಳಹುವನೆನಲು ಶಂಕರನು ||
ಪೂತು ನಿಜವನುಪೇಳ್ದೆ ನಿನ್ನಯ |
ಜಾತ ಪಿಶಿತಾಶನನು ತನ್ನಯ |
ತಾತನಂದದೊಳೆಂದನಾವರ ವಿಪ್ರಗುತ್ತರವ || ೧೬

ಬಳಿಕಲದ ಕೇಳುತ್ತ ಮಂಡನ |
ನುಲಿದ ನೆಲೆ ದುರ್ಬುದ್ಧಿ ಪೊತ್ತಿಹೆ |
ಯಲಘುಕಂಥೆಯನಿದನು ರಾಸಭ ಹೊರಲಿಕಾಗದುದ ||
ಸಲೆ ಶಿಖಾಯಜ್ಞೋಪವೀತವು |
ಬಲುಹೊರೆಯು ನಿನಗಾಯ್ತೆ ನೀನೀ
ತಲೆಯಬೋಳಿಸಿಕೊಂಡು ಬಿಸುಟೆಯದೇಕೆ ಸೂತ್ರವನು || ೧೭

ಎಂದುದನು ಕೇಳುತ್ತ ಶಂಕರ |
ನೆಂದನೆಲೆದುರ್ಬುದ್ಧಿ ನಿನ್ನಯ |
ತಂದೆ ಹೊರೆ ದುರ್ಭರವಿದೆಂಬೀಕೆಂಥೆಯನು ನಾನು ||
ಚಂದದಿಂ ವಹಿಸಿರ್ಪೆ ಕೇಳೈ |
ಬಂಧುರಶ್ರುತಿಗಳಿಗೆ ಭಾರವಿ |
ದೆಂದು ಶಿಖಿಸೂತ್ರಗಳ ಬಿಸುಟಿಹೆನೆಂದು ತಿಳಿಯೆಂದ || ೧೮

ಸತಿಯಪೊರೆಯಲಶಕ್ತನಾಗಿಯೆ |
ಸತತ ಶಿಷ್ಯರಕೂಡಿ ಪುಸ್ತಕ |
ತತಿಯ ಹೊರಲಿಚ್ಛೈಸಿ ಗಾರ್ಹಸ್ಥ್ಯವನು ನೆರೆತೊರೆದು ||
ಯತಿತನವ ಕೈಕೊಂಡ ನಿನ್ನಿಂ |
ಪ್ರಥಿತವಾಯ್ತೀ ಬ್ರಹ್ಮನಿಷ್ಠತೆ |
ಮತಿವಿಕಳತನದಿಂದಗಳಹದಿರೆಂದು ವಿಧಿನುಡಿದ || ೧೯

ಗುರುವಸೇವಿಸಲಲಸುತಲ್ಲಿಂ |
ನೆರೆ ಸಮಾವೃತನಾಗಿ ಧರೆಯೊಳು |
ಬರಿದೆ ಗಾರ್ಹಸ್ಥ್ಯವನು ಕೈಕೊಂಡಿರುತ ಸದನದೊಳು ||
ತರುಣಿಯರ ಸೇವಿಸುವ ನಿನ್ನೀ |
ಪರಿಯು ಬಹುವಿಧಕರ್ಮನಿಷ್ಠತೆ |
ಯರರೆತಾಂ ವ್ಯಾಖ್ಯಾತವಾಯ್ತೆಂದನು ಪುರಧ್ವಂಸಿ ||

ಸುದತಿಯರಜಠರದಲಿ ಜನಿಯಿಸಿ |
ಸುದತಿಯರು ರಕ್ಷಿಸಲು ಬೆಳೆದಾ |
ಸುದತಿಯರನಾಕ್ಷೇಪಿಸುತ್ತಿಹೆ ಯತಿಯೆ ನೀನಿಂತು ||
ಇದು ಕೃತಘ್ನತೆಯಲ್ಲವೇನಿದ |
ಬುಧರು ಮೆಚ್ಚುವರೆಂತು ಲೋಕದೊ |
ಳಧಮವೃತ್ತಿಯು ನಿನ್ನದೆಂದನು ವರಪಿತಾಮಹನು ||

ಸುದತಿಯರಜಠರದಲಿ ಜನಿಯಿಸಿ |
ಸುದತಿಯರು ರಕ್ಷಿಸಲು ಬೆಳೆದಾ |
ಸುದತಿಯರ ನೀ ಕೂಡುತಿಹೆ ನೆರೆಪಶುವಿನಂದದಲಿ ||
ಇದು ಕೃತಘ್ನತೆಯಲ್ಲವೇನಿದ |
ಬುಧರು ಮೆಚ್ಚುವರೆಂತು ಲೋಕದೊ |
ಳಧಮವೃತ್ತಿಯು ನಿನ್ನದೆಂದನು ನಗುತ ಮದನಾರಿ ||

ದ್ವಿಜಕುಲದಿ ನೆರೆಪುಟ್ಟಿ ಸಂತತ |
ಯಜನಮೊದಲಾದಖಿಳಕರ್ಮ |
ವ್ರಜವನೆಸಗದೆ ಗಾರ್ಹಪತ್ಯಾದ್ಯಗ್ನಿಸಂಕುಲವ ||
ತ್ಯಜಿಸಿದೊಡೆ ತಪ್ಪದಲೆದೊರಕುವು |
ದಜರವಲ್ಲಭಹತ್ಯೆಯೆಂಬೀ |
ನಿಜವನರಿಯದೆ ಕೆಟ್ಟೆ ನೀನೆಂದಜನು ನೆರೆಜರೆದು ||

ಪರಮಸುಕೃತವಿಶೇಷದಿಂದಲೆ |
ದೊರಕುವುದು ನರಜನ್ಮವದರೊಳು |
ಪರಮಪದವನು ಪಡೆವಮಾರ್ಗವನರಿತು ವರ್ತಿಸದೆ ||
ಬರಿಯಕರ್ಮದಜಾಡ್ಯದಲಿ ನೆರೆ |
ಮರುಳರಾಗಿರಲಾತ್ಮಹತ್ಯಾ |
ಪರಮಪಾತಕದೊರೆವುದೆಂದನು ಮನಸಿಜಾರಾತಿ || ೨೪

ದ್ವಾರದೇಶದೊಳಿದ್ದ ನಮ್ಮಯ |
ಕೀರಗಳ ನೆರೆ ಜಯಿಸಲಾರದೆ |
ಚೋರನಂದದಿಬಂದೆ ನೀನೆಂತೆನಲು ಕೇಳುತವೆ ||
ಗಾರುಹಸ್ತ್ಯದೊಳಿರುತ ಗೇಹ |
ದ್ವಾರವನು ಬಂಧಿಸುತ ಬಹುಳ ವಿ|
ಕಾರಿ ಗಿಡುಗನತೆರದಿ ನೀನೆಂತಿರ್ಪೆ ಪೇಳೆಂದ || ೨೫

ಚಾರುತರ ಸತ್ಕರ್ಮಮಧ್ಯೆ ವಿ |
ಕಾರವೇಷಿಗಳೊಡನೆ ಭಾಷಣ |
ಬಾರದೆನುತಲೆ ಕದವಮುಚ್ಚಿರೆ ದುಷ್ಟನಹನೀನು ||
ಚೋರನಂದದಿ ಬಂದು ಸುಮ್ಮನೆ |
ಚೀರುತಿಹೆ ಬಾಯ್ಬಡಕತನದಲಿ |
ಸಾರುಸಾರೆಂದೆನುತ ಜರೆದನು ವಿಪ್ರನಾಯತಿಯ || ೨೬

ಮಾತಿನಲಿ ಯತಿಭಂಗದೋಷವು |
ಸಾತಿಶಯದಿಂ ನಿನ್ನ ಸಾರ್ದುದು |
ಪೂತು ಭಾಂಡಸಜನಕೆ ಶಾಸ್ತ್ರವಿಚಾರವಲ್ಪವಲ ||
ಖ್ಯಾತನಹೆ ನೀನೆಂದು ಕುಹಕದಿ |
ಭೂತನಾಥನು ನುಡಿಯೆಕೇಳುತ |
ಲಾತ ನುಡಿದನು ಕೋಪದಿಂದಾಬಳಿಕಲುತ್ತರವ || ೨೭

ಮನಸಿನಲಿ ವಾಕ್ಕಿನಲಿ ಕರ್ಮದ |
ಲನುವಿನಿಂ ಯತಿಭಂಗವೇ ಬೇ |
ಕೆನುತಲಿರ್ಪೆನಗೆಂತು ಲಭಿಪುದು ದೋಷವಾಕ್ಕಿನಲಿ ||
ಸನುಮತವು ಯತಿಭಂಗವೆನಗೆನೆ |
ಮನಸಿಜಾಂತಕನೆಂದನಾ ಯತಿ |
ವಿನುತ ಪಂಚಮ್ಯಾಂತಶಬ್ದವೆನುತ್ತಲಾವಿಧಿಗೆ ||

ಎಲ್ಲಿಯಾಬ್ರಹ್ಮವದು ಭಾವಿಸ |
ಲೆಲ್ಲಿ ದುರ್ಮೇಧೆಗಳು ತಾವಕ |
ಟೆಲ್ಲಿ ಸನ್ಯಾಸವಿದು ಕಲಿಯುಗಮೆಲ್ಲಿಭಾವಿಸಲು |
ಸಲ್ಲಲಿತಭಕ್ಷ್ಯಗಳ ಭಿಕ್ಷದಿ |
ಮೆಲ್ಲಲೋಸುಗ ಯತಿಯವೇಷವ |
ಖುಲ್ಲರೀಪರಿ ತಾಳಿಕೊಂಡಿಹರೆಂದನಜನಾಗ ||

ಎಲ್ಲಿ ನೀಚಾಚಾರತತ್ಪರ |
ರೆಲ್ಲಿ ಸಗ್ಗವದಗ್ನಿಹೋತ್ರವ |
ದೆಲ್ಲಿ ಕಲಿಯುಗಮೆಲ್ಲಿ ಭಾವಿಸಿ ನೋಡಲಕಟಕಟ ||
ಫುಲ್ಲಲೋಚನೆಯರನು ಭೋಗಿಸೆ |
ಸಲ್ಲಲಿತ ಗಾರ್ಹಸ್ಥ್ಯವೇಷವ |
ಖುಲ್ಲರೀಪರಿ ತಾಳಿಕೊಂಡಿಹರೆಂದನಾಶಿವನು ||

ಆರುಕರೆದರು ನಿನ್ನ ನಮ್ಮೀ |
ಗಾರಗೇತಕೆ ಬಂದೆ ಬರಿದೇ |
ಗಾರುಗೆಡೆಯದೆ ಪೋಗು ನೀನೆನಲಾಗಶಂಕರನು ||
ಸಾರಿದೆನು ನಾನಿನ್ನಪೂರ್ವದ |
ಪಾರಪುಣ್ಯೋದಯದಿ ಕೇಳ್ವೈ |
ಸೂರಿವರ ವರವಿಷ್ಣುರೂಪದೊಳೆಂದನಾದ್ವಿಜಗೆ ||

ಭೂತನಾಥನೆ ಯತಿಪನೆಂಬೀ |
ರೀತಿಯನು ಭಾವಿಸದೆ ತಾ ವಿಪ |
ರೀತಕೋಪದಿ ಮಂಡನಾರ್ಯನು ಚರ್ಚಿಸುತ್ತಿರಲು ||
ಆ ತಪೋನಿಧಿಬಾದರಾಯಣ |
ನೀತೆರನಕಾಣುತ್ತನೆರೆ ಸಂ |
ಪ್ರೀತಿಯಿಂದಾವಿಶ್ವರೂಪಗೆ ನುಡಿದನಿಂತೆಂದು || ೩೨

ಶ್ರೋತ್ರಿಯೋತ್ತಮನೆನಿಪ ವರಹಿಮ |
ಮಿತ್ರಪುತ್ರನೆ ಕೇಳು ಪರಮಪ |
ವಿತ್ರವೆನಿಪುದು ಪರಮಹಂಸಾಶ್ರಮವು ಧರೆಯೊಳಗೆ ||
ಮಿತ್ರತೇಜದಿ ಬಂದೊಡೀ ಸುಚ |
ರಿತ್ರಯತಿಯನು ದೂಷಿಸುತ್ತಿಹೆ |
ಚಿತ್ರವಾಯ್ತಿದು ಯೋಗ್ಯರಿಗೆ ತಾ ಯೋಗ್ಯವಲ್ಲೆಂದ ೩೩

ಮುನ್ನಮಾಡಿದ ಪುಣ್ಯಕರ್ಮದೊ ||
ಳುನ್ನತದ ಪಿತೃಕರ್ಮಸಮಯವೆ |
ಸನ್ನುತನು ಯತಿಯೀಗಲಭ್ಯಾಗತನುತಾನಾದ ||
ನನ್ನಿಯಿಂದೀತನನು ನೀನೆರೆ |
ಮನ್ನಿಪುದು ವರವಿಷ್ಣುವೆನ್ನುತ |
ಲಿನ್ನುತಡವೇಕೆನುತ ವೇದವ್ಯಾಸಮುನಿ ನುಡಿದ || ೩೪

ಧರೆಯೊಳಗೆ ಪಿತೃಯಜ್ಞಮಧ್ಯದೆ |
ಪರಮಭಕ್ತಿಯೊಳೊಲಿದು ವಿಪ್ರರ |
ಚರಣಗಳತೊಳೆವಾಗ ಯತಿಯೈತರಲಿಕಾತನನು ||
ಪರಮವಿಷ್ಣುಸ್ಥಾನದೊಳಗಾ |
ದರಿಸಿ ಪೂಜಿಸದಿರ್ದೊಡಾ ಸುರು |
ಚಿರದಕರ್ಮವು ನಷ್ಟವಹುದೆಂದುಲಿದ ಜೈಮಿನಿಯು || ೩೫

ಎನಲುಕೇಳುತಲಾಗ ವಿಪ್ರನು |
ಕನಲಿಕೆಯನುಳಿಯುತ್ತಲಾಪವ |
ನನುವಿನಿಂ ಸ್ಪರ್ಶಿಸುತ ಶುದ್ಧಾಚಮನವೆಸಗುತಲಿ ||
ವಿನಯಮಿಗಿಲಾಯತಿಗೆ ವಂದನೆ |
ಯನು ಸಮರ್ಪಿಸಿ ಭಿಕ್ಷವೀವೆನು |
ಘನಮಹಿಮ ನಿನಗೆಂದು ನುಡಿದನು ಕರವಜೋಡಿಸುತ ||

ಇಂತು ಮಂಡನಮಿಶ್ರಪಂಡಿತ |
ಸಂತಸದಲಾಮಂತ್ರಣವನಾ |
ಕಂತುಸಂಹರಗಿತ್ತು ಶಾಂತತೆಯಾಂತುನಿಂದಿರಲು ||
ಸ್ವಾಂತದಲಿಹರ್ಷವನು ತಳೆದಾ |
ಸಂತರುಗಳಿರುತಿರಲು ನಗುತ |
ತ್ಯಂತಸೌಹಾರ್ದ್ರದಲಿ ನುಡಿದನು ಯತಿಪನಾದ್ವಿಜಗೆ ||

ವಿಪ್ರವರ್ಯನೆ ಕೇಳು ನಿನ್ನೊಳು |
ಸುಪ್ರಸಿದ್ಧವೆನಿಪ್ಪತೆರದಿಂ |
ಸ್ವಪ್ರಕಾಶತೆಯಾಂತ ವಿದ್ಯಾವಾದವನು ಬಯಸಿ ||
ಕ್ಷಿಪ್ರದಿಂದೈತಂದೆನಲ್ಲದೆ |
ಯಪ್ರಯೋಜನವೆನಿಪ ಭಿಕ್ಷವಿ |
ದಪ್ರಿಯವು ತನಗೆನುತ ಮತ್ತಿಂತೆಂದನಾಯತಿಪ ||

ಪರಿಪರಿಯ ಯಜ್ಞಾದಿಕರ್ಮವ |
ವಿರಚಿಸುತಗಾರ್ಹಸ್ಥ್ಯಧರ್ಮವ |
ಚರಿಸುವಂಗಪವರ್ಗ ಪರಕಿಸೆ ಸಾವಧಾನದಲಿ ||
ದೊರೆವುದದರಿಂದಾ ಪ್ರವೃತ್ತಿಯ |
ತೊರೆದು ವರಸನ್ಯಾಸಧರ್ಮಾದಿ |
ಚರಿಪುದಿದುಸುಖವೆಂದು ತನ್ಮಾರ್ಗದಲಿವರ್ತಿಪೆನು ||

ಬಗೆವೊಡೀ ಸಂಸಾರಶರಧಿಯು ।
ಪುಗುತಲುರುತಾಪತ್ರಯಾಗ್ನಿಯು ।
ಡಗೆಗೆ ಸಿಲುಕಿದಜನಕೆ ಬಿಡುಗಡೆಯುಹಡೆಬೇಗದಲಿ ॥
ವಿಗಡವೆನಿಪ ನಿವೃತ್ತಿಮಾರ್ಗವೆ ।
ಮೃಗಧರನವೊಲು ತಂಪನೆರೆವುದು ।
ಜಗಕಿದನುಬೋಧಿಸಲು ವಾದವನೆಸಗಲೈದಿಹೆನು ॥ ೪೦

ಯತಿಯು ವಾದವಗೈವುದಾಶ್ರುತಿ ।
ಗತಿವಿರೋಧವದಾದಡೆಯುತಾ ।
ಕ್ಷಿತಿಯೊಳುತ್ತಮಜನಕೆ ಮಹದುಪಕಾರಮಪ್ಪುದರಿಂ ॥
ಮತಿಯುತನೆ ನಿನ್ನೊಡನೆ ವಾದವ ।
ನತಿಶಯದಲೆಸಗುವಡೆ ಬಂದೆನು ।
ಸತತಕರ್ಮಭ್ರಾಂತನಾಗಿಹ ನಿನ್ನಬಳಿಗೀಗ ॥ ೪೧

ಅವನಿಯೊಳಗನ್ಯೋನ್ಯ ಶಿಷ್ಯ ।
ತ್ವವದು ಪಣವಾಗಿರಲಿ ತನ್ನೊಳು ।
ವಿವರದಿಂವಾದಿಪೊಡೆ ನಿನ್ನನು ಜಯಿಸಿ ಹರ್ಷದಲಿ ॥
ಅವಿರಳದ ಸನ್ಯಾಸಧರ್ಮವೆ ।
ತವೆ ಸುನಿಶ್ಚಲಮಾರ್ಗವೆಂಬುದ ।
ಭುವನದೊಳು ನಿರ್ಧರಿಪೆನವನೀವಿಬುಧಕೇಳಿಂದ ॥ ೪೨

ಎಂದಮಾತನು ಕೇಳಿ ವಿಪ್ರನು ।
ಮಂದಹಾಸವತಳೆದು ಬಳಿಕಿಂ ।
ತೆಂದನೆಲೆ ಯತಿಕೇಳು ಮಂಡನಮಿಶ್ರಪಂಡಿತನ ॥
ಸಂಧಿಸುತ ವಾದವನಪೇಕ್ಷಿಪ ।
ಸಂದಪಂಡಿತರುಗಳ ಕಾಣೆನು
ಬಂದಿರುವೆನೀನೈಸೆ ಶುಭದಿನವಾದುದೆನಗಿಂದು ॥ ೪೩

ವ್ಯಾಸಮುನಿಪತಿಶಿಷ್ಯಜೈಮಿನಿ |
ತಾಸುವಿಸ್ತರವಾಗಿಪೇಳ್ದಿಹ |
ಭಾಸುರದಸತ್ಕರ್ಮಮಾರ್ಗದಿ ನಿತ್ಯವರ್ತಿಸುವ ||
ಭೂಸುರಾಗ್ರಣಿ ಮಂಡನಾರ್ಯನ |
ಸಾಸಿರಾನನದಿಂದರಂಜಿಪ |
ವಾಸುಕಿಯು ಗೆಲಲರಿದು ನೀನೆಷ್ಟರವ ಪೇಳೆಂದ ||

ಸಾರತರವೇದೋಕ್ತ ಕರ್ಮವಿ |
ಚಾರ ದುರ್ವಾದಿಗಳ ಹೃದಯಕು |
ಠಾರ ಕರ್ಮಬ್ರಹ್ಮವಾದಿಯೆನಿಪ್ಪಬಿರಿದುಗಳ ||
ಭೂರಿವಿಭವದಿತಳೆದ ತನ್ನ ವಿ |
ಚಾರವನು ನೀಕೇಳಿದರಿಯಾ |
ಸೇರಲರಿಯದು ಜಯವು ನಿನಗೆಲೆ ಯತಿಯೆ ಕೇಳೆಂದ ||

ವಾದಭಿಕ್ಷವ ಬೇಡುತಿಹೆ ನೀಂ |
ಮೋದದಿಂದಾನೀವೆ ನಮ್ಮವಿ |
ವಾದವನು ಪರಿಕಿಸುವ ನಾಳಿನದಿವಸವಿಂದಿನಲಿ ||
ವೇದವಿಹಿತ ಸುಕರ್ಮವನು ನಾ |
ನಾದರಿಪೆನೆಂದೆನುತ ವಿನಯದಿ |
ಭೂದಿವಿಜನುರೆ ಬೇಡಿಕೊಂಡನು ಯತಿಯ ಪಶುಪತಿಯ ||

ಎಂದುದನುಲಾಲಿಸುತ ಶಂಕರ |
ಮಂದಹಾಸದಲೊಪ್ಪೆ ಬಳಿಕಿಂ |
ತೆಂದನಾ ಜೈಮಿನಿಗೆ ವೇದವ್ಯಾಸಮುನಿಗೆರಗಿ ||
ಸಂದಯತಿಯೊಡನೆನಗೆ ಘಟಿಸುವ |
ಬಂಧುರದವಾದದಲಿ ನೀವ್ಮನ |
ಸಂದು ಮಾಧ್ಯಸ್ಥದಲಿ ವರ್ತಿಸಬೇಹುದೆಂದೆನುತ ||

ಎನಲುಕೇಳಾ ವ್ಯಾಸಜೈಮಿನಿ ।



ಎನಲುಕೇಳ್ದಾ ವ್ಯಾಸಜೈಮಿನಿ |
ಮುನಿವರೇಣ್ಯರು ನಗುತ ನುಡಿದರು |
ಮನುಜರೂಪಿನ ಕಮಲಜಾತನ ನೆರೆಸಿರೀಕ್ಷಿಸುತ ||
ಘನಮಹಿಮ ಕೇಳ್ನಿನ್ನ ಸತಿಯೀ |
ವನಜಮುಖಿಭಾರತಿಯು ನಿಮ್ಮಯ
ಘನವಿವಾದಕೆ ಸಾಕ್ಷಿಯಹಳೆಂದೆನುತ ವಿನಯದಲಿ || ೪೮

ಅದಕೆ ಬಳಿಕಾವಿಶ್ವರೂಪನು |
ಪದುಳದಿಂ ಸಮ್ಮತಿಸಿ ಮನದೊಳ |
ಗೊದವಿದತಿಭಕ್ತಿಯಲಿ ಪೂಜಿಸುತಾಮುನಿತ್ರಯವ |
ಸದಮಲಾಗ್ನಿತ್ರಯವ ಪೂಜಿಪ |
ವಿಧದೊಳಾಸುಶ್ರಾದ್ಧ ಕರ್ಮವ |
ವಿಧಿವಿಹಿತವಾಗಿರಲಿಕಾಚರಿಸಿದನು ಸತಿಸಹಿತ || ೪೯

ಮೃಷ್ಟಭೋಜನದಿಂದ ನೆರೆ ಸಂ |
ತುಷ್ಟಿಯಾಂತಾ ಮೂರುಜನರುಪ |
ವಿಷ್ಟರಾಗಿರಬಾಗ ಮಂಡನಮಿಶ್ರಪಂಡಿತನ ||
ಶಿಷ್ಟರಹ ಸಚ್ಛಿಷ್ಯರತ್ಯುತ್ |
ಕೃಷ್ಟಸುವ್ಯಜನಾದಿಸೇವಾ |
ನಿಷ್ಟರಾಗಿರುತಿರ್ದರತಿಶಯಭಕ್ತಿಭಾವದಲಿ || ೫೦

ಇನಿತು ಸತ್ಕಾರಗಳನೆಲ್ಲವ |
ನನುವಿನಿಂ ಕೈಗೊಂಡು ಜೈಮಿನಿ |
ಮುನಿಪ ವೇದವ್ಯಾಸ ಶಂಕರಯತಿಪರಂದೊಲಿದು ||
ವಿನುತ ಸುಖಸಲ್ಲಾಪಗೈಯುತ |
ಲನಘವೆಸಿಪಾಶ್ರಾದ್ಧಕರ್ಮವ |
ನನುವಿನಿಂ ಸಂಪೂರ್ತಿಗೈಸಿದರಾಗಮುನನಲಿದು || ೫೧

ಬಳಿಕ ಮಂಡನಮಿಶ್ರವಿಪ್ರನ |
ನಿಳಯವನು ಬೀಳ್ಕೊಂಡು ಬರುತಾ |
ನಳಿನನಾಭ ಮುನೀಂದ್ರ ಜೈಮಿನಿಮುನಿಪರಾಗಸಕೆ ||
ಘಳಿಲನೈದಲು ಮೃಡನು ತಾನಾ |
ಪೊಳಲಹೊರವಳಯದಲಿರಂಜಿಪ |
ನಳಿನರಿಪುಸಂಜಾತೆ ರೇವಾತಟನಿಗೈದಿದನು ||

ಬಂದನಾ ನರ್ಮದೆಯ ತೀರದ |
ಬಂಧುರದ ದೇವಾಲಯುವ ನಲ |
ವಿಂದಪೊಕ್ಕನು ಕಂಡನಲ್ಲಿ ಸನಂದನಾದಿಗಳ ||
ವೃಂದವನು ಬಳಿಕೆಲ್ಲರಿಗೆ ನಲ |
ವಿಂದಪೇಳ್ದನು ವಿಶ್ವರೂಪನ |
ಮಂದಿರದ ಬಹುವಿಧದ ವಾದದ ಸಕಲಸಂಗತಿಯ ||

ಪರಮಕರುಣಾಮೂರ್ತಿ ಪೇಳ್ದಾ |
ಸರಸವಾಕ್ಯವಕೇಳ್ದು ಶಿಷ್ಯರ |
ನೆರವಿ ಪರಿವೇಷ್ಟಿಸುತ ಪರಿತೋಷದಲಿ ಕುಳ್ಳಿರಲು ||
ನೆರೆದ ತಾರಾಗಣದಮಧ್ಯದ |
ಸರಸಿಜಾರಿಯತೆರದಿ ಶಂಕರ |
ವರಯತಿಯು ರಾಜಿಸುತಲಿರ್ದನು ವರಶಿವಾಲಯದೆ ||

ವೇದವೇದಾಂತಗಳ ವಿಷಯ ವಿ |
ವಾದವದು ನಾಳಿನಲಿ ನಡೆವುದು |
ಮೇದಿನೀಸುರ ವಿಶ್ವರೂಪನಗೃಹದಲೆಂಬುದನು ||
ವೇದಮಯನಾದಿತ್ಯನರಿದತಿ |
ಮೋದದಿಂದ್ವೈತಪ್ರತವಕದ |
ಲಾದಿವವನುಳಿದೈದಿಪೊಕ್ಕನು ಪಶ್ಚಿಮಾಂಬುಧಿಯ ||

ನಳಿನಸಖನಪರಾಂಬುರಾಶಿಯು |
ಲಿಳಿಯಲದ ಕಾಣುತ್ತ ಮರುಗುತ |
ನಳಿನಗಳು ಮುಚ್ಚಿದವು ಮುಖಗಳ ವಿರಹದುಬ್ಬೆಯಲಿ ||
ಅಳಲುತಿಹ ವೈರಿಗಳ ನೋಡಿ ಕು |
ವಲಯಗಳಿಗಾನಂದವಾಗಲು |
ಕಳಕಳಿಸಿನಗುತಿಹನು ತಾನೆನೆ ಶಶಿ ವಿರಾಜಿಸಿದ || ೫೬

ಇಂತೆಸೆವ ರಜನಿಯಲಿ ರಜನೀ |
ಕಾಂತಶೇಖರನೊಲಿದು ಶಿಷ್ಯರ |
ಸಂತತಿಗೆ ವೇದಾಂತತತ್ವವ ಬೋಧಿಸುತ್ತಿರಲು ||
ಶಾಂತಮಾನಸರಾಗಿ ಮಾಯಾ |
ಭ್ರಾಂತಿಯನು ಕೆಡೆನೂಕುತೆಲ್ಲರು |
ಚಿಂತಿಸುತಲಿರುತಿರ್ದರಾಶ್ರೀಕಂಠಯತಿಪದವ || ೫೭

ಸಂಧಿ ಇಪ್ಪತ್ತೆರಡಕ್ಕೆ ಪದ್ಯ ೧೦೧೮ಕ್ಕೆ ಮಂಗಳ.



# ಇಪ್ಪತ್ತಮೂರನೆಯ ಸಂಧಿ.



ಸೂಚನೆ || ವೇದವೇದಾಂತದರಹಸ್ಯವು |
ಮೇದಿನಿಗೆ ಗೋಚರಿಸಲೆನ್ನುತ |
ವಾದಗೈದರು ಯತಿಪ ಮಂಡನಮಿಶ್ರರೊಲವಿನಲಿ ||

ಕೇಳು ಶೌನಕಮುನಿಪ ಮೃಗಧರ |
ಮೌಳಿಯಾ ಸೋಮೋದ್ಭವೆಯ ವರ |
ಕೂಲದಲಿ ಶಿಷ್ಯಾಳಿ ಸಹ ಸಂಭ್ರಮದಲಿರುತಿರಲು ||
ಕಾಲಕಾಲನ ಪದವಸೇವಿಸಿ |
ಮೇಲೆನಿಪ ಸದ್ಗತಿಯಪಡೆವ ವಿ |
ಶಾಲಮತಿಯಿಂದೈದಿತೆನೆ ತಂಗಾಳಿತೀಡಿದುದು || ೧

ಸರಿದವಾತಾರಕೆಗಳಭ್ರದೊ ।
ಳಿರುಳಿಗಂತ್ಯವದಾಯ್ತು ಸರಸಿಯೊ ।
ಳರಳಿದವು ಸರಸಿಜಗಳಾಗ ಪರಾಗವನು ತೂರಿ ॥
ತರಣಿಯುದಯಾದ್ರಿಯಲಿ ತೋರ್ದನು ।
ಕಿರಣಗಳಪಸರಿಸುತ ಬೆಳಕಾ ।
ವರಿಸುತ್ತಿತರೆ ತೊಡೆದುದಾಗಲು ಭುವನದಂಧತನ ॥

ಅನಿತರೊಳು ಯತಿವರ್ಯ ತನ್ನಯ ।
ವಿನುತ ಕರ್ಮವರಚಿಸಿ ಶಿಷ್ಯರ ।
ನನುವಿನಿಂದೊಡಗೂಡಿ ರೇವಾನದಿಯಬೀಳ್ಕೊಂಡು ॥
ಇನಸಮಾನಸುತೇಜದಿಂ ಸಲೆ ।
ಮಿನುಗುತಿಹ ಪುರವರವ ಪುಗುತಾ ।
ವಿನುತ ಭೂಸುರಮಂಡನಾಖ್ಯನಗೃಹವಸಾರಿದನು ॥

ಮಂದಿರವಪುಗುತಲ್ಲಿ ಕಂಡನು ।
ಬಂಧುರದ ಮುಖಮಂಟಪವ ಬಾ ।
ಲೇಂದುಧರನೊಳಪೊಕ್ಕು ಕುಳಿತನು ದಿವ್ಯಪೀಠದಲಿ ॥
ನಿಂದುದೆಡಬಲದೊಳಗೆ ಶಿಷ್ಯರ ।
ವೃಂದವತಿ ಸಂತೋಷದಿಂದಲೆ ।
ಬಂದುದಾಗಲು ಮಂಡನಾರ್ಯನ ಶಿಷ್ಯಸಂದೋಹ ॥

ಬರುತ ಕಂಡರು ಯತಿವರೇಣ್ಯನ ।
ಪರಮತೇಜಃಪುಂಜವನು ತಾ ।
ವ್ಹೆರೆಯದಾದವು ಕಂಗಳಾಪುರಹರನ ಪರಿಕಿಸಲು ॥
ಆರರೆ ಸಾಕ್ಷಾತ್ಪರಮಶಿವನೀ ।
ಧರೆಯೊಳಗೆ ಯತಿಯಾಗುತ್ತಿದಿಹ ।
ನಿರುತವೆನುತಲೆ ನಮಿಸಿ ಕರಗಳಮುಗಿದರಲ್ಲಲ್ಲಿ ॥

ಅತ್ತ ಮಂಡನಮಿಶ್ರವಿಪ್ರನು |
ದಾತ್ತವಹ ಗಾರ್ಹಸ್ಥ್ಯಧರ್ಮವ |
ಬಿತ್ತರಿಸಿ ಭಕ್ತಿಯಲಿ ಬಂದನು ಸಭೆಗೆ ವಹಿಲದಲಿ ||
ಉತ್ತಮಾಶ್ರಮದಿಂದ ರಂಜಿಪ |
ಚಿತ್ತಜಾರಿಗೆ ಮನದಿ ವಂದಿಸು |
ತುತ್ತಮದಪೀಠದಲಿ ಕುಳಿತನು ಯತಿಪನಿದಿರಿನಲಿ || ೬

ಕಮಲಚರಣಪ್ರಮುಖಶಿಷ್ಯರು |
ಕಮಲರಿಪುಶೇಖರನ ಬಳಿಯಲಿ |
ವಿಮಲಮಾನಸರಾಗಿ ನಿಂದಿರ್ದರು ಸರಾಗದಲಿ ||
ಅಮರನಾಥನ ಗುರುವಪೋಲುವ |
ವಿಮಲ ವಿದ್ಯಾಪ್ರೌಢರಿರ್ದರು |
ಕಮಲಪೀಠನ ಶಿಷ್ಯರಾತಂಗೆಪರಭಾಗದಲಿ || ೭

ಪರಮಪಂಡಿತರಿಂದ ಶೋಭಿಪ |
ವರಸಭಾಮಂಟಪಕೆ ಬಂದಳು |
ಸರಸಿಜಾನನೆ ಶಾರದೆಯು ವಿದ್ಯಾವಿಶಾರದೆಯು ||
ಪರಿಕಿಸಲು ಕಮಲಜಗೆ ಮತ್ತಾ |
ಹರಗೆ ನಡೆಯುವ ವಾದವಿವರವ |
ನರಿಯಲೈದಿದ ವೇದಮಾತೆಯತೆರದಿ ರಂಜಿಸುತ || ೮

ಶ್ರುತಿಯ ಪೂರ್ವಾಪರದ ವಾದ |
ಸ್ಮೃತಿಯನರಿಯುವ ಸಮಯವೀಗೆಂ |
ದತಿಶಯದ ತವಕದಲಿ ಸುರಮುನಿಗಳು ಸುರೇಶ್ವರರು ||
ಮತಿಯುತರು ಮನುಮುನಿಗಳಮರ |
ಪ್ರತತಿಸಹಿತೈತಂದು ಗಗನದಿ |
ಸತತಸಿಂದರು ಜನರದೃಷ್ಟಿಗದೃಶ್ಯರೆಂದೆನಿಸಿ || ೯

ತದುಪರಿಯೊಳಾವಿಶ್ವರೂಪನ |
ಮದನರಿಪುನೋಡುತ್ತ ಸುಸ್ಮಿತ |
ವದನಸರಸೀರುಹನು ಮಧುರವಚೋವಿಲಾಸದಲಿ ||
ವಿದಿತಮೆನೆ ಪೇಳಿದನು ಕೇಳ್ಕೈ |
ಸದಮಲನೆ ನೀನೆಂದು ತನ್ನಯ |
ಹೃದಯಸದಭಿಪ್ರಾಯಮುನ್ನತ ಸಾರಸಂಗತಿಯ ||

ಮಿಥ್ಯವಹಜಗವಿದುವೆ ತೋರ್ಪುದು |
ಸತ್ಯಮಾಗಿಹುದೆಂಬ ತೆರದೊಳ |
ಗತ್ಯಧಿಕದಿನದಿಂದ ಬಂದಿಹ ಗುಣದವಿದ್ಯೆಯಲಿ ||
ಸತ್ಯವೇ ಶುಕ್ತಿಯಲಿ ರಜತವು |
ಮಿಥ್ಯವಲ್ಲದೆಯದರ ಪರಿಯಿಂ |
ಸತ್ಯವಲ್ಲೀಜಗವು ಭಾವಿಸಲೆಂದನಾಯತಿಪ ||

ಬ್ರಹ್ಮವೊಂದೇ ಸತ್ಯವಹುದಾ |
ಬ್ರಹ್ಮವೊಂದೇ ನಿತ್ಯವಹುದಾ |
ಬ್ರಹ್ಮವೇ ತಾಂ ಸಚ್ಚಿದಾನಂದ್ಯೈಕರಸವಹುದು |
ಬ್ರಹ್ಮವನು ತಿಳಿದವನು ಕೇಳ್ಕೈ |
ಬ್ರಹ್ಮವೇ ತಾನಹನು ಬಳಿಕಾ |
ಬ್ರಹ್ಮವಲ್ಲದೆ ಬೇರೆ ಜಗವಿಲ್ಲೆಂದನಾಶಿವನು ||

ಇದನು ತಿಳಿವುದೆ ಬಂಧಮೋಚನ |
ವಿದುವೆ ಪರಮಾರ್ಥೈಕಸಾಧನ |
ವಿದನು ತಿಳಿದಾಬಳಿಕ ದೇಹಭ್ರಾಂತಿಯಡಗುವದು ||
ಇದನು ಬೋಧಿಪುದುಪನಿಷತ್ತೆನ |
ಲಿದಕೆ ಸಂಶಯವಿಲ್ಲ ಕೇಳೆಂ |
ದಧಿಕಸಂತೋಷದಲಿ ನುಡಿದನು ವಿಧಿಗೆ ಮದನಾರಿ ||

ಮತವಿದೇ ಸಮ್ಮತವು ತಾನಿದ |
ನತಿಶಯದಿ ವಾದಿಸುತ ಸಾಧಿಪೆ |
ಮತಿಯುತನೆ ನೀ ಕೇಳು ಜಿತನಾನಾದಡಾಬಳಿಕ ||
ಯತಿಸುಧರ್ಮವ ತೊರೆದು ಮತ್ತೀ |
ಕ್ಷಿತಿಯೊಳಗೆ ಗಾರ್ಹಸ್ಥ್ಯಧರ್ಮವ |
ಸತತವಂಗೀಕರಿಪೆನೆಂದನು ನಗುತ ಮದನಾರಿ || ೧೪

ಶೀಲಗುಣನಿಧಿ ಯತಿಪನೆಂದುದ |
ನಾಲಿಸುತ ಹಿಮಮಿತ್ರಪುತ್ರನು |
ಮೌಳಿಯನು ತೂಗುತ್ತ ನುಡಿದನು ಮಾತಿಗುತ್ತರವ ||
ಕೇಳೆಲೈ ಯತಿವರನೆ ಮತವನು |
ಪೇಳುವೆನು ಗುರುಮುಖದೊಳರಿದುದ |
ಮೇಲೆನೆಪ ಸತ್ಕರ್ಮಜಾಲದ ಮಹಿಮೆಗಳ ನಿನಗೆ || ೧೫

ವಂಚಿದಾನಂದೈಕರಸವಹ |
ಪರಮಸಿದ್ಧಬ್ರಹ್ಮಪದದೊಳು |
ಬೆರೆಯಲರಿಯವು ಬರಿಯ ಸಾಧ್ಯಗಳೆನಿಪಶಬ್ದಗಳು ||
ಪರಿಕಿಸಲು ವೇದಾಂತ ವಾಕ್ಯದ |
ನೆರವಿ ಶಬ್ದಗಳೆನಿಪವದರಿಂ |
ದರಿಯೆ ಭರಿತಬ್ರಹ್ಮದೊಳು ತಾವಪ್ರಮಾಣಗಳು || ೧೬

ಪರಿಕಿಪೊಡೆ ಪದಚಯವು ಕರ್ಮದ |
ನಿರುತವನು ವಾಚಿಪುದು ಪದಚಯ |
ಕಿರುವ ಶಕ್ತಿಯು ಕರ್ಮ "ಘಟವಾನಯ"ವು ಮೊದಲಾದ ||
ಬರಿಯ ಪದಚಯದಂತೆಯದರಿಂ |
ದುರುವ ಮೋಕ್ಷಕೆ ಕರ್ಮಕಾರಣ |
ವರಿಯೆ ಕರ್ಮವ ಪೇಳ್ವ ವೇದವೆ ಸಪ್ರಮಾಣವದು || ೧೭

ಕರ್ಮವೇ ಪುರುಷಾರ್ಥಸಾಧನ |
ಕರ್ಮವೇ ಮೋಕ್ಷೈಕಕಾರಣ |
ಕರ್ಮವಾಚರಣೀಯವಹುದಾ ನಿಧನಪರ್ಯಂತ ||
ಕರ್ಮವನು ವರ್ಜಿಸಲು ಸಲ್ಲದು |
ಕರ್ಮಹೀನಗೆ ಮುಕ್ತಿ ಸಲ್ಲದು |
ಕರ್ಮಯೋಗವು ಸುಕರಯೋಗವು ಜಗದೆನಿಶ್ಚಯವು ||

ಅತಿಶಯದವಾದದಲಿ ತನ್ನೀ |
ಮತವ ಸಂಸ್ಥಾಪಿಸುವೆ ಕೇಳೈ |
ಯತಿವರನೆ ಜಯವೆನಗೆ ಕೈಸಾರದಡೆ ನಾಬಳಿಕ ||
ಯತಿಯಹೆನು ಮೋಹ್ನಿನ್ನ ಶಿಷ್ಯ |
ಪ್ರತತಿಯಲಿ ಸೇರುವೆನು ತನ್ನೀ |
ಸತಿಯು ಸಾಕ್ಷಿಯಲೆಂದು ನುಡಿದನು ಕಮಲಸಂಭವನು ||

ಈ ಪರಿಯ ಪಣಗಳನು ಸಭೆಯೊಳ |
ಗಾಪಿನಾಕಿಯು ಪದ್ಮಜಾತನು |
ಲೋಪವಿಲ್ಲದ ತೆರದಿ ನಿರ್ಣಯಿಸುತ್ತ ಲಾಬಳಿಕ ||
ರೂಪಗುಣ ಸಂಪನ್ನಶೀಲೆಯು |
ನಾ ಪರಮಪಾವನೆಯ ಮೃಡಮುನಿ |
ಶಾಪದಿಂಜನಿಯಿಸಿದ ವಾಣಿಯು ಸಾಕ್ಷಿಗಿರಿಸಿದರು ||

ದಿನದಿನದೊಳಾವಶ್ಯಕಂಗಳ |
ನನುವಿಸಿಂಗೈಯುತ್ತ ಬಳಿಕೀ |
ಘನಸಭೆಯ ಸೇರುವುದು ವಾಕ್ಯಾರ್ಥಗಳನೆಸಗುವುದು ||
ಎನುತ ನಿರ್ಣಯಿಸಿದರು ಮಹಿಮರು |
ಮನದೊಳಗೆ ನೆನೆಯುತ್ತ ಗುರುಪದ |
ವನರುಹಂಗಳನಾಗ ಕುಳಿತರುವಾದಕನುವಾಗಿ ||



ಶ್ರೀ ಶಂಕರಾಚಾರ್ಯರ ಮಂಡನಮಿಶ್ರಸಂವಾದವು.

ಬಳಿಕುಭಯಭಾರತಿಯು ಪುಷ್ಪಂ |
ಗಳಲಿ ಮಾಲೆಯನೆರಡ ವಿರಚಿಸು |
ತೊಲವಿನಿಂದೊಂದೊಂದನಿತ್ತಳು ಯತಿಗೆ ನಿಜಪತಿಗೆ ||
ಗಳದಿ ಧರಿಸುವುದಿದನು ಮಾಲೆಯು |
ಮಲಿನವಾಗುವುದಾರದಾತನು |
ಸಲೆಪರಾಜಿತನೆಂದು ಭಾವಿಪುದೆಂದಳಿಂದುಮುಖಿ || ೨೨

ಎಂದು ಬೀಳ್ಕೊಂಡಬಲೆ ತನ್ನಯ |
ಮಂದಿರವ ಸಾರಿದಳು ಸಮ್ಮುದ |
ದಿಂದಲಾ ಗೃಹಕಾರ್ಯತತ್ಪರೆಯಾಗಿ ಬಳಿಕಿತ್ತ ||
ಬಂಧುರದ ಸಭೆಯೊಳಗೆ ವರಬಾ |
ಲೇಂದು ಮೌಳಿಯು ಕಮಲಜಾತನು |
ನಿಂದರೈ ವಾಗ್ವಾದ ಕಾರ್ಯಜಯೈಕದೃಷ್ಟಿಯಲಿ || ೨೩

ಪ್ರತಿದಿವಸ ಮಧ್ಯಾಹ್ನ ಸಮಯದೆ |
ಸತಿಯುಭಯಭಾರತಿಯು ಬಂದಾ |
ಪತಿಗೆ ಬಿನ್ನೈಸುವಳು ಭೋಜನ ಸಮಯವಾಯ್ತೆನುತ ||
ಯತಿಗೆ ನಮಿಸುತ ದಯದಿ ಭಿಕ್ಷವ |
ಪತಿಕರಿಸಲ್ಕೈತಹುದು ಸೇವೆಂ |
ದತಿಶಯದ ಭಕ್ತಿಯಲಿ ಬಿನ್ನೈಸುವಳು ಕೈಮುಗಿದು || ೨೪

ಇಂತು ಸರಸತಿ ಕರೆಯುತಿರಲಾ |
ಕಂತುಹರ ಕಮಲಜರು ವಿಗತ |
ಶ್ರಾಂತಮಾನಸರಾಗಿ ಭೋಜನ ಕಾರ್ಯಗಳನೆಸಗಿ ||
ಶಾಂತರೂಪರು ಮತ್ತೆ ಬಂದು ಸ |
ಭಾಂತರಾಳವಪೊಕ್ಕು ವಿದ್ಯಾ |
ವಂತರಿದಿರಲಿ ವಾದಿಸಲು ಸಲೆಕಲೆವರೊಲವಿನಲಿ || ೨೫

ಶ್ರುತಿತತಿಯನುದಹರಿಪಮೀಣಾ |
ಶ್ರುತಿಯ ಪರಮಾರ್ಥಗಳ ವಿವರಿಪ |
ಚತುರತೆಯ ವಾಕ್ಸರಣಿಯಿಂದಲೆ ಸಭೆಯರಂಜಿಸುವ ||
ಶ್ರುತಿನುತವ ಪೋಷಿಸುವ ವಾಕ್ಯ |
ಪ್ರತತಿಗಳನೊಳಗೊಂಡಪೂರ್ವ |
ಶ್ರುತಮಿದೆಂದೆನೆ ಸೊಗಸಿತಾ ವಾಗ್ವಾದವಿಬ್ಬರಲಿ ||

ಒಬ್ಬನುರುಕರ್ಮವನು ಪೋಷಿಪ |
ನೊಬ್ಬ ವಿಜ್ಞಾನವನು ಸಾಧಿಪ |
ನಿಬ್ಬರಿಗೆ ವರವೇದವಾಕ್ಯವೆ ಸುಪ್ರಮಾಣಗಳು ||
ಒಬ್ಬರೊಬ್ಬರ ಮೆಚ್ಚುವರು ಮೇ |
ಣೊಬ್ಬರೊಬ್ಬರ ಜಯಿಸಲಿಚ್ಛಿಸು |
ತಿಬ್ಬರಿಗೆ ತಾವಿಬ್ಬರೇ ಸಮನೆನಲು ಚರ್ಚಿಪರು ||

ನುಡಿಯುತೆಡಹುವುದಿಲ್ಲ ಪಡಿನುಡಿ |
ಕುಡುವುದಕೆ ತಡವಿಲ್ಲ ನುಡಿದುದ |
ನುಡಿವ ಬೇಸರವಿಲ್ಲ ನಡುಕವದಿಲ್ಲ ನುಡಿಗಳಲಿ ||
ನುಡಿಯಲರಿಯದೆ ವಿಗಡಕೋಪವ |
ಪಡೆವಗಡಬಡೆಯಿಲ್ಲ ಗಗನದ |
ಕಡೆಗೆ ನೋಡುವುದಿಲ್ಲವಿಬ್ಬರು ನುಡಿವ ಸಡಗರದಿ ||

ಈಸುಪರಿಯಲಿ ಸಕಲ ಶಾಸ್ತ್ರ |
ಭ್ಯಾಸಿಗಳು ವಾದಿಸುತ ಮನದೊಳು |
ಬೇಸರಿಲ್ಲದೆ ಸಕಲ ವೇದರಹಸ್ಯಸಂಗತಿಯ ||
ಆ ಸಭೆಯು ನಲಿವಂತೆ ವಿವರಿಸೆ |
ವಾಸವಾದಿ ಸಮಸ್ತ ಸುರತತಿ |
ಲೇಸುಲೇಸೆಂದೆನುತ ಪೊಗಳಿದುದು ಭಯವಾದಿಗಳ ||

ಇಂತು ನಾದವು ನಡೆಯುತಿರೆ ಮದ |
ನಾಂತಕನ ನೋಡುತ್ತ ವಾಣೀ |
ಕಾಂತ ನುಡಿದನು ಬಳಿಕ ನಸುನಗೆಯಿಂದುಪೇಕ್ಷೆಯಲಿ ||
ಎಂತು ನೀಂ ಚರ್ಚಿಸಿದಡೆಯು ದೇ |
ಹಾಂತ ಪರ್ಯಂತರವು ಕರ್ಮವ |
ಸಂತತಂ ಮಾಡದೊಡೆ ಮನುಜಗೆ ಮುಕ್ತಿಯಿಲ್ಲೆಂದು || ೩೦

ಬರಿಯ ಕರ್ಮದ ಜಾಡ್ಯದಿಂದಲೆ |
ನರನು ಮೋಕ್ಷವಪಡೆವನೆಂಬೊಡೆ |
ಗಿರಿಯತುದಿಗೇರುವ ಪಿಪೀಲಕಯತ್ನದಂದದಲಿ ||
ದೊರೆವುದತಿದುರ್ಲಭವು ಕೇಳ್ಕೆ |
ಪರಮಸುಜ್ಞಾನೈಕಮಾರ್ಗವು |
ವರವಿಚಾರದ ತೆರದಿ ಸುಲಭವಿದೆಂದನಾಮೃಡನು || ೩೧

ಆದೊಡೆಲೆ ಯತಿಪತಿಯೆ ಲಾಲಿಸು |
ವೇದಗಳು ಸಾರುತ್ತಲಿಹ ವಾ |
ಭೂದಿವಿಜತಾನಗ್ನಿಹೋತ್ರವ ಮರಣಪರ್ಯಂತ ||
ಆದರಿಪುದೆಂದೆನುತಲಿಂತಿರೆ |
ವೇದವಾಕ್ಯವ ಮೀರಿ ನಡೆವುದು |
ಸಾಧಕವೆ ಪೇಳೆಂದು ನುಡಿದನು ಯತಿಗೆ ಕಮಲಜನು || ೩೨

ಮತಿಯುತನೆ ಜೀವೇಶಭೇದ |
ಸ್ಥಿತಿಯ ಮಹದಜ್ಞಾನ ಮೋಹ |
ಪ್ರತತಿಯನು ದಿನದಿನದೆ ಸುಜ್ಞಾನಾಗ್ನಿಕುಂಡದಲಿ ||
ಕ್ಷಿತಿಯಮರನಾಹುತಿಯನೀಯುತ |
ಲತಿಶಯದ ಮೋಕ್ಷವನು ಪಡೆವುದೆ |
ಹಿತಕರದ ವಿಮಲಾಗ್ನಿಹೋತ್ರವಿದೈಸೆ ವೇದಮತ || ೩೩

ಬ್ರಹ್ಮತಾನರ್ಪಣವು ಮೇಣಾ |
ಬ್ರಹ್ಮತಾನೇಹವಿಯು ಮತ್ತಾ |
ಬ್ರಹ್ಮವೇತಾನಗ್ನಿಯಹುದಾ ಬ್ರಹ್ಮನಾಹುತಿಯು ||
ಬ್ರಹ್ಮವನೆ ಸೇರುವುದು ಸಕಲವು |
ಬ್ರಹ್ಮದಲಿ ಲಯಿಸುವುದು ಕರ್ಮವು |
ಬ್ರಹ್ಮವಲ್ಲದುದುಂಟೆ ಸರ್ವಂ ಬ್ರಹ್ಮಮಯವೆಂದ ||

ಮದನರಿಪುವಿನ ಮಾತಕೇಳುತ |
ಲದಕೆ ಮಾರುತ್ತರವು ತೋರದೆ |
ಪದುಮಜಾತನು ಮೌನದಿಂದಿರಲಾಗಲದಕಂಡು ||
ವಿದಿತವಾದುದೆ ನಿನಗೆ ವಿಜ್ಞಾ |
ನದ ಮಹಾಮಹಿಮೆಗಳು ಪೇಳೈ |
ಹೃದಯದೊಳು ಮತ್ತೇನು ಸಂಶಯವೆಂದನಾಹರನು ||

ವಾದದೊಳು ತನ್ನ ಕುಳಮತವನು |
ಸಾಧಿಸುವ ಬಗೆಗಾಣದಾ ದು |
ರ್ಭೇದ ಪರಮಾದ್ವೈತಮತವನು ಖಂಡಿಸಲು ತೊಡಗಿ ||
ಬೋಧಿಸುವೆ ಜೀವೇಶರೈಕ್ಯವ |
ಸಾಧಿಸುವೊಡಾಧಾರಮಿಲ್ಲೆನೆ |
ಲಾದಯಾಂಬುಧಿ ನುಡಿದನಾಕಮಲಜನಿಗುತ್ತರವ ||

ವಿಪ್ರವರಲಾಲಿಪುದು ಜಗದೊಳು |
ಸುಪ್ರಮಾಣಾಭಿನ್ನತತ್ವವ |
ವಿಪ್ರವರನುದ್ದಾಲಕಾಖ್ಯನು ಬಾದರಾಯಣನು ||
ಸುಪ್ರಯೋಜನವೆಂದು ಪೇಳ್ದುದ |
ನಪ್ರಯೋಜನವೆಂದು ವಾದಿಪೆ |
ಸುಪ್ರಸಿದ್ಧ ಶ್ವೇತಕೇತು ಪ್ರಮುಖರೊಪ್ಪಿದುದ ||

ಜನಕಚಕ್ರೇಶ್ವರನು ಮೊದಲಾ |
ದನುಪಮಿತತತ್ವಜ್ಞರೆಲ್ಲರು |
ಸನುಮತಿಸಿಕೊಂಡಿಹರು ಜೀವೇಶೈಕ್ಯಭಾವವನು ||
ಘನಮಹಿಮನಾಯಾಜ್ಞವಲ್ಕ್ಯನು |
ಮುನಿಪ ವೈಯಾಸಕಿಯು ಮೊದಲಾ |
ದನುಪಮರು ತಮ್ಮಭಿಮತವನಿತ್ತಿಹರಿದಕೆ ಕೇಳೆಂದ || ೩೮

ವರಮುನಿಪನಾಯಾಜ್ಞವಲ್ಕ್ಯನು |
ಕರುಣದಿಂ ಜನಕಕ್ಷಿತೀಶಂ |
ಗರುಹಿದನು ಪೂರ್ವದಲಿ "ಅಹಂ ಬ್ರಹ್ಮಾಸ್ಮಿ" ಎಂದೆನುತ ||
ಅರಿತ ಬಳಿಕೆಲ್ಲಿಯದು ಭವವಾ |
ನರನಿಗದರಿಂ ನಿನಗೆ ನಿಜಸುಖ |
ದೊರಕುವುದು ನೀನದನು ನಿನ್ನೊಳು ತಿಳಿವುದೆಂದೆನುತ || ೩೯

ಲೋಕವನು ನಿಜವೆಂದು ನಂಬುತ |
ಲೇಕವಸ್ತುವನರಿಯಲಮ್ಮದ |
ನೇಕಭಾವನೆಗಳನು ಕಲ್ಪಿಸುತಾತ್ಮನಲಿ ಬರಿದೆ ||
ಶೋಕಮೋಹಭ್ರಾಂತಿ ಬಿಡದವಿ |
ವೇಕದಲಿ ನೆರೆತೊಳಲಿ ಬಳಲುವ |
ದೀಕುಮಾಯಾತಂತ್ರವೆಂದನು ಜಾನ್ಹವೀಧರನು || ೪೦

ಆವವಸ್ತುಗೆ ಜನನವಿಲ್ಲವೊ |
ಆವವಸ್ತುವು ಲಯವನೈದದೊ |
ಆವಿಗಡಪರವಸ್ತು ತಾನೆಂದರಿಯದಲೆಬರಿದೆ ||
ಜೀವನಾನತ್ಯಂತದುಃಖದಿ |
ನೋವೆನೆಂದನವರತ ಭೇದದ |
ಭಾವದಲೆ ಕೆಡುತಿಹುದವಿದ್ಯೋಪಾಧಿಯಲಿ ಜಗವು || ೪೧

ಪರಮನಿರ್ಗುಣನಜಡನವ್ಯಯ ।
ನುರುಪರಾನಂದೈಕರಸನಹ ।
ನೆರೆಪರಾತ್ಪರನೆನಿಪ ಪರಮಾತುಮನಕ್ರಿಯನ ॥
ಧರೆಯ ಸೃಷ್ಟಿಪ ಮೇಣು ಕೊಲ್ಲುವ ।
ಪೊರೆವ ಕಾರ್ಯದಿಬದ್ಧನೆಂದೇ ।
ಬರಿದೆತಿಳಿವುದು ಜಗವು ವಿದ್ಯೋಪಾದಿಯಲಿನೋಡೆ ॥

ನಿರುಪಮಿತ ನಿರುಪಾಧಿಯಿಂದಲೆ ।
ಮೆರೆವ ಪರಮಾತ್ಮನಲಿ ಮಾಯಾ ।
ವರಣದಿಂ ಕಲ್ಪಿಸಿದ ವಿದ್ಯಾವಿದ್ಯೆಯೆಂಬೆರಡ ॥
ನೆರೆಸಮಾಧಿಯನೈದಿಸಲು ತಾ ।
ನುರುತರದಪರವಸ್ತು ನಿಲುವುದು ।
ಪರಿಕಿಸಲು ತಾನದನು ತಾನೇ ಬ್ರಹ್ಮನಹನೆಂದ ॥

ಶಾಂತಕುಂಭವದೊಂದೆ ನೆರೆ ವಿ ।
ಖ್ಯಾತಕಟಕಾದಿಗಳ ರೂಪವ ।
ನಾತುಕೊಂಡಿರುತಿರಲು ರೂಪವು ಭಿನ್ನವಾದಡೆಯು ॥
ಜಾತರೂಪವಭಿನ್ನವಹುದಾ ।
ರೀತಿಯಲಿ ಸಂಪೂರ್ಣಸುಖವಿ ।
ಖ್ಯಾತವೆನಿಪಾಬ್ರಹ್ಮವರಿತಡಭಿನ್ನವಹುದೆಂದ ॥

ಆದಿಮಧ್ಯಗಳಿಲ್ಲದಂತ್ಯವ ।
ನೈದಲಮ್ಮದ ಗೋತ್ರಸೂತ್ರೋ ।
ಪಾಧಿಯಿಲ್ಲದ ಜಾತಿಲಿಂಗವು ಸುಕೃತದುಷ್ಕೃತದ ॥
ಭೇದ ಹೊಗದಾಕಾರವಿಲ್ಲದ ।
ಖೇದವೋದಾದಿಗಳ ಪೊರ್ದದ ।
ನಾದಿತತ್ವಬ್ರಹ್ಮತಾನೊಂದಲ್ಲದೆರಡಹುದೆ ॥

ಪರಿಪರಿಯಬಣ್ಣಗಳ ಗಾಜಿನ |
ಲಿರದೆ ರವಿಯುನು ನೋಡುತಾಗಲು |
ತರಣಿಬಿಂಬವನೇಕವಿವೆಯೆಂದೆನುತಪೇಳ್ವಂತೆ ||
ನರನವಿದ್ಯಾಬದ್ಧನಾಗುತ |
ಪರಮನೊಳು ತಾಂ ದ್ವೈತಭಾವವ |
ಬರಿದೆಕಲ್ಪಿಸಲೆಂತು ನಿಜವಹುದೆಂದನಾಯತಿಪ || ೪೬

ಏಕನಾತ್ಮನುಯೆಂದು ವೇದಗ |
ಳೇಕಮುಖದಲಿ ಸಾರುತಿರಲವಿ |
ವೇಕಿಗಳು ತಾವಂಧಕಾರಮಹಾಬ್ಧಿಯಲಿ ಮುಳುಗಿ ||
ತೇಗಿ ತಲೆಕೆಳಕಾಗುತಾತ್ಮಗೆ |
ನೇಕಭಾವವ ಬರಿದೆಕಲ್ಪಿಸ |
ಲಾಕುತಾರರಮಾತು ನಿಜವಹುದೆಂತುಪೇಳೆಂದ || ೪೭

ನಿರುಪಮಿತನಿಗೆ ನಿರ್ಗುಣಾತ್ಮಗೆ |
ನಿರವಯುವ ನಿರ್ದ್ವಂದ್ವನೆನಿಸುವ |
ಪರಪರಾನಂದೈಕರಸರೂಪಂಗರೂಪಂಗೆ ||
ಪರಿಕಿಸಲ್ಕೇಕತ್ವಮಲ್ಲದೆ |
ನೆರೆಯಲಹುದೆ ಬಹುತ್ವಮದರಿಂ |
ದರಿಯಲಾಜೀವೇಶ್ವರೈಕ್ಯವು ಪರಮತತ್ವಾರ್ಥ || ೪೮

ಇಂತುನೆರೆ ಜೀವೇಶ್ವರೈಕ್ಯದ |
ನಂತ ವಿವರವನೊರೆದು ಭೇದ |
ಭ್ರಾಂತಿಯನು ತೊಲಗಿಸುತಲಾದ್ವೈತಾಂಧಕಾರವನು ||
ಶಾಂತನುರೆಪರಿಹರಿಸಿ ಜಗಕ |
ತ್ಯಂತ ಸೌಖ್ಯವತೋರುತಿರ್ದನು |
ಸಂತಸದಲಾಶ್ರೀಕಂಠದೇವನಪಾರಕರುಣದಲಿ || ೪೯

ಸಂಧಿ ಇಪ್ಪತ್ತಮೂರಕ್ಕೆ ಪದ್ಯ ೧೦೬೭ಕ್ಕೆ ಮಂಗಳ.

# ಇಪ್ಪತ್ತನಾಲ್ಕನೆಯ ಸಂಧಿ.



ಸೂಚನೆ॥ ತತ್ವವಿದನಾಮಂಡನಾರ್ಯಗೆ।
ತತ್ವಮಸಿ ಮೊದಲಾದವಾಕ್ಯದ।
ತತ್ವವನುಬೋಧಿಸುತ ವಿಜಯನಾಂತನುತ್ಸವದೆ॥

ಕೇಳಿದೈ ಶೌನಕನೆ ಪರಮುಕ್ರ।
ಪಾಳು ಶಂಕರನೊಲಿದು ವಾಣೀ।
ಲೋಲನಿಗೆ ತಾಂ ಬ್ರಹ್ಮವಿದ್ಯಾಸಾರಸಂಗತಿಯ॥
ಪೇಳಿದನು ನಲವಿಂದ ಕೇಳ್ವವಿ।
ಶಾಲಭಾಗ್ಯರಿಗಮಿತಪುಣ್ಯವ।
ಮೇಳನಿಸಿಕುಡುತಿರ್ಪ ವರವೇದಾಂತತತ್ವವನು॥

ಭೂದಿವಿಜವರ ಕೇಳು ಜಗದೊಳ।
ನಾದಿಸಿದ್ಧನೆನಿಪ್ಪ ಪರಮಗೆ।
ಭೇದವನುಕಲ್ಪಿಸುತ ಮಾಯಾಜಗವ ನಿಜವೆಂದು॥
ವಾದಗೈವರು ನರರವಿದ್ಯೋ।
ಪಾಧಿಯಿಂದಲುಪಾಧಿಯಳಿಯಲು।
ಭೇದಭಾವನೆಯಡಗಿ ವರತತ್ವಾರ್ಥ ರಂಜಿಪುದು॥

ಒಂದುದೀಪದಮೇಲೆ ಪಾತ್ರೆಯ।
ನೊಂದಮುಚ್ಚುತಲದರನೆತ್ತಿಯೊ।
ಳೊಂದುರಂಧ್ರವರಚಿಸೆ ದೀಪಪ್ರಭೆಯುರಂಧ್ರದಲಿ॥
ಬಂದು ಹೊರಭಾಗದಲಿ ರಂಜಿಸ।
ಲಂದೆರಡುದೀಪಗಳು ತಾವಿಹ।
ವೆಂದು ತೋರುವುದೈಸೆ ಪಾತ್ರೆಯುಪಾಧಿಯಾಗಿರಲು॥

ಆದರತೆರದೊಳವಿದ್ಯೆಯಿಂದಲೆ |
ಸದಮಲಾತ್ಮನೊಳನ್ಯಭಾವನೆ |
ಯೊದವಿರಲು ಜೀವೇಶಭೇದವ ವಾದಿಸುತ ನರನು ||
ಹೃದಯದೊಳಗಜ್ಞಾನವೈತರ |
ಲುದರ ಫಲವೆನಿಪತುಳದುಃಖಾಂ |
ಬುಧಿಯೊಳಾಳುತಲಿಹನವಿದ್ಯೆಯುಪಾಧಿಯಾಗಿರಲು || ೪

ಕೊಡರಿಗಾಚ್ಛಾದಿಸಿದುಪಾಧಿಯ |
ನೊಡನೆ ತೆಗೆಯಲು ಭೇದಭಾವನೆ |
ಯಡಗುತೊಂದೇದೀಪವೆಂಬುದು ಗೋಚರಿಪತೆರದೆ ||
ಕಡಿದವಿದ್ಯೋಪಾಧಿಯೆಂಬುದ |
ಕಡೆಗೆ ನೂಕಿದ ನಿಶ್ಚಲಾತ್ಮಂ |
ಗೊಡನೆ ಭೇದವು ನಶಿಸಿ ನಿಜಸುಖದೊರೆಗುಮತಿಶಯದ || ೫

ವಾರಿಜಾಪ್ತನ ದೊಂದುಬಿಂಬವು |
ವಾರಿಘಟದೊಳು ಹಲವರೂಪಿಂ |
ತೋರಿದೊಡೆ ದಿವಸಾಧಿಪರು ಹಲರೆಂದು ಭಾವಿಪರೇ ||
ಭೂರಿಸಚರಾಚರದೊಳಾತ್ಮನು |
ತೋರಿದೊಡೆ ತಾಂ ಭಿನ್ನನಾಗಿಯೆ |
ಸೇರಲರಿವುದೆ ಭಿನ್ನಭಾವವಭಿನ್ನತತ್ವದಲಿ || ೬

ತೋರುವುದು ಘಟದೊಳಗೆ ಗಗನವು |
ಬೇರೆಯಾಗಿದ್ದಂತೆ ಬಳಿಕೀ |
ತೋರಿಕೆಗೆ ಕಾರಣವೆನಿಪ್ಪಾಘಟವನೊಡೆದಿಡಲು ||
ಬೇರೆಯಾದಾಕಾಶ ಮಹದಾ |
ಕಾರದಾಕಾಶದಲಿ ಬೆರೆವುದು |
ತೋರುವುದು ತಾಂ ಬಳಿಕ ಗಗನವಖಂಡರೂಪದಲಿ || ೭

ಈತೆರದೊಳಾದ್ಯಂತ ವಿರಹಿತ |
ಭೂತಭಾವನ ಸಕಲವಿಷಯಾ |
ತೀತ ಪರಮಾತುಮನು ಸಚರಾಚರದಿತುಂಬಿರುವ ||
ಈತಭಿನ್ನನೆನುತ್ತ ಬಹುವಿಪ |
ರೀತದಜ್ಞಾನದಲಿ ತೋರುವ |
ಪಾತಮವಪರಿಹರಿಸೆ ಬಳಿಕಲಭಿನ್ನನಾಗೆಸೆವ ||

ಕನಸಿನಲಿ ಸುಖದುಃಖಗಳ ತಾ |
ನನುಭವಿಸೆ ನಿಜವಾಗೆಬಲ್ಲುದೆ |
ಮನವು ಮೊದಲಹಕರಣಚಯದ ವಿಕಾರಮಲ್ಲದೆಯೆ ||
ತನುವ ಧನಕನಕಾದಿವಸ್ತುವ |
ನನುಭವಿಪೆನೆಂದೆಂಬಭಾವನೆ |
ಕನಸದಲ್ಲದೆ ನಿಜವು ತಾನಲ್ಲೆಂದನಾಯತಿಪ ||

ಜಲಧಿಯೊಳಗುದ್ಭವಿಪ ಬುದ್ಬುದ |
ಜಲಧಿಯೊಳು ತಾಂ ಲಯವನೈದಲು |
ಜಲಧಿಗಹುದೇಲಯವು ಪರಿಕಿಸಲಾಪ್ರಕಾರದಲಿ ||
ಜಲಜಜಾಂಡವನೇಕವಾತ್ಮನೊ |
ಳಳಿದು ಪುಟ್ಟುತಲಿರಲು ಚಿನ್ಮಯ |
ಗಳಿವು ತಾನಹುದೆಂತು ನೀ ಪೇಳೆಂದನಾಶಿವನು ||

ಪರಿಪರಿಯ ಸಚರಾಚರಂಗಳೊ |
ಳಿರುತ ಬೆರೆದಂತಿರ್ದು ಬೆರೆಯದೆ |
ಹೊರಗೊಳಗೆ ಸಂಸ್ಥೂಲಸೂಕ್ಷ್ಮೋತ್ಕರದಿತುಂಬಿರುತ ||
ಅರಿವುಮರವೆಗೆ ಸಾಕ್ಷಿ ತಾನಾ |
ಗಿರುತ ಚಿನ್ಮಯನೆನಿಸಿ ರಂಜಿಪ |
ನುರುತರಾತ್ಮನಭೇದಸಕ್ರಿಯನಭವನೆಂದೆನಿಸಿ || ೧೦

ಈಪರಿಯೊಳನವರತ ರಂಜಿಪ |
ರೂಪವಿರಹಿತನಪರವರಚಿ |
ದ್ರೂಪನಾತ್ಮನನಮಲಪರಮಬ್ರಹ್ಮವಿಗ್ರಹನ ||
ರೂಪು ತಾನೆಂದೆನುತ ದೃಶ್ಯದ |
ರೂಪು ತಾನಲ್ಲೆನುತ ಭಾವಿಸ |
ಲಾಪರಮಪದ ನರಗೆ ಹಸ್ತಾಮಲಕದಂತಹುದು || ೧೨

ಕರ್ಮಕಿಂಕರರಾಗಿ ಬಹುದು |
ಷ್ಕರ್ಮವಾಸನೆಯುಳಿದು ತನ್ನನು |
ಕರ್ಮಕರ್ತನು ಭೋಕ್ತೃತಾನಹೆನೆಂದಹಂಕರಿಸಿ ||
ನಿರ್ಮಲಾತ್ಮನಭಿನ್ನನೆಂಬುದ |
ಕೂರ್ಮೆಯಿಂ ಭಾವಿಸದೆ ಮೋಕ್ಷದ |
ಧರ್ಮವಂ ತ್ಯಜಿಸುತ್ತ ಕೆಡುತಿಹರಕಟನರರೆಂದ || ೧೩

ಕನಸುಮೇಣೆಚ್ಚರ ಸುಷುಪ್ತಿಗೆ |
ಳೆನಿಪವಸ್ಥಾತ್ರಯವಿಕಾರಗ |
ಳಿನಿತುಹೊದ್ದದ ದುಃಖಸುಖಗಳಮೂಲವೆಂದೆನಿಪ ||
ಜನನಮರಣ ವಿಕಾರವಿಲ್ಲದ |
ಘನಚಿದಾತ್ಮನಬೆರೆದು ಮೋಕ್ಷವ |
ನನುವಿನಿಂ ಪಡೆಯುವುದು ಮನುಜಗೆ ಪರಮಪುರುಷಾರ್ಥ || ೧೪

ಜ್ಞಾನಮಯನೆಂದೆನಿಸಿ ಸಮ್ಯ |
ಜ್ಞಾನದೃಷ್ಟಿಗೆಮಾತ್ರ ತೋರಿ ಕೃ |
ಶಾನುಕಾಷ್ಟದಿ ತೈಲತಿಲದೊಳಗಿರ್ಪರೀತಿಯಲಿ ||
ತಾನೆ ಸಚರಾಚರದಿ ತೋರುತ |
ಹಾನಿವೃದ್ಧಿಯನೊಂದದಾತ್ಮನು |
ತಾನೆ ನಿಜವೆಂಬರಿವು ವರವಿಜ್ಞಾನಸಾಗರವು || ೧೫

ಕತ್ತಲೆಯರಾಶಿಯನು ಮೊರದೊಳು |
ಹೊತ್ತು ಸಾಗಿಸಲಹುದೆ ತರಣಿಯು |
ಬಿತ್ತರದ ಕಿರಣಗಳದೆಸೆಯಿಂದಲ್ಲದೆಯೆಬರಿದೆ ||
ಚಿತ್ತದಜ್ಞಾನವನು ಕರ್ಮದ |
ಲೆತ್ತಿ ಬಿಸುಡಲ್ಕಹುದೆ ಭಾವಿಸ |
ಲುತ್ತಮದ ಸುಜ್ಞಾನದೀಪ್ತಿಯೊಳಲ್ಲದೆಯೆಬರಿದೆ ||

ಗುರುತರದ ಸುಜ್ಞಾನದೀಪ್ತಿಯೆ |
ಪರಮಪುರುಷಾರ್ಥೈಕಸಾಧನ |
ವರುಹಲೇನದ್ವೈತತತ್ವವ ತಿಳಿವುದೇ ಜ್ಞಾನ |
ಪರಿಕಿಸಲು ಜೀವೇಶ್ವರೈಕ್ಯವೆ |
ಸುರುಚಿರಾದ್ವೈತಾಖ್ಯತತ್ವವು |
ಭರಿತಪರಮಬ್ರಹ್ಮತಾನೆಂಬರಿವೆ ಪರಮಾರ್ಥ ||

ವರವಶಿಷ್ಠನಮಗನ ಮೊಮ್ಮಗ |
ನೊರೆದಿರುವ ಸುಬ್ರಹ್ಮಸೂತ್ರದ |
ವರತುರೀಯಾಧ್ಯಾಯದೊಳು ತಾಂ ವಿವರಗೊಂಡಂತೆ ||
ನರಗೆ ಪುನರಾವರ್ತಿ ವಿರಹಿತ |
ಸುರುಚಿರದ ಸಾಯುಜ್ಯಪದವಿಯೆ |
ಪರಮಸುಖಕರಮೋಕ್ಷವೆಂಬುದೆ ಸಾರತತ್ವವಲೆ ||

ಅರಿಯಲಾಸಾಯುಜ್ಯವೆಂದೊಡೆ |
ಬೆರೆವುದಾಬ್ರಹ್ಮದೊಳಗದರೊಳು |
ಬೆರೆದಬಳಿಕಾಬ್ರಹ್ಮವೇತಾನಲ್ಲದಿನ್ನೇನು ||
ಪರಿಪರಿಯವೇದಾಂತವಾಕ್ಯದ |
ನೆರವಿಯಿದ ಬೋಧಿಪುದು ನಂರಿದ |
ನರಿದಬಳಿಕಡಗುವುದು ಭೇದಭ್ರಾಂತಿಮನದೊಳಗೆ ||

ಕ್ಷಿತಿಯೊಳುದ್ದಾಲಕನು ಮೊದಲಾ |
ದತಿಶಯಜ್ಞಾನಿಗಳು ಶಿಷ್ಯ |
ಗ್ರತಿಮುದದಿ ಛಾಂದೋಗ್ಯ ಬೃಹದಾರಣ್ಯ ಮೊದಲಾದ ||
ಶ್ರುತಿಗಳನು ಬೋಧಿಸುತಲೈಕ್ಯ |
ಸ್ಥಿತಿಯಪೇಳಿಹರಾಗಿ ಮಹದು |
ನ್ನತದ ಘನವೇದಾಂತವಾಕ್ಯವು ಸುಪ್ರಮಾಣವಲೆ || ೨೦

ಎಂದು ಶಂಕರಪೇಳೆ ಲಾಲಿಸಿ |
ಮಂದಹಾಸವತಳೆದು ಮಂಡನ |
ನೆಂದನೆಲೆ ಯತಿಕೇಳು ವರತತ್ವಮಸಿ ಮೊದಲಾದ ||
ಸಂದವಾಕ್ಯಗಳೆಲ್ಲ "ಹುಂಫಟು" |
ವೆಂದೆನಿಪ ಜಪಯೋಗ್ಯಮಂತ್ರಗ |
ಳಂದವಲ್ಲದೆ ತಿಳಿಯಲರ್ಥವಿವಕ್ಷೆಯಿಲ್ಲೆಂದು || ೨೧

ಆದೊಡಾಲಿಸು ವಿಪ್ರ "ಹುಂಫಟು" |
ವಾದಿ ಶಬ್ದಗಳರ್ಥವಿಲ್ಲದ |
ವಾದಕಾರಣ ಯೋಗ್ಯವಾದವು ಜಪಕೆಭಾವಿಸಲು ||
ಭೇದನಾಶಕ ತತ್ವಮಸಿಯಿದು |
ಮೋದದಿಂ ಪೂರ್ಣಾರ್ಥವೊಂದಿಹು |
ದಾದಕಾರಣ ನಿನ್ನ ಪಕ್ಷವಿರೋಧಮಾಯ್ತೆಂದ || ೨೨

ತತ್ವಮಸಿವಾಕ್ಯವಿದು ಮುಖಕ |
ರ್ತೃತ್ವವನು ಪಡೆದಿರುವ ನರಗೀ |
ಶತ್ವವಂ ಪ್ರತಿಪಾದಿಸುತ್ತಲೆನುತಿಪರೀತಿಯಲೆ ||
ಸತ್ವನಿರ್ಮಲ ಜೀವರಿಗೆ ಭೇ |
ದತ್ವ ವಿರಹಿತಮಾದಡೇನೈ |
ಕ್ಯತ್ವವಿದು ವೇದಾಂತಮತವಲ್ಲೆಂದನಾದ್ವಿಜನು || ೨೩

ತರಣಿಯೂಪಾದಿಗಳಭಜನೆಯು |
ನರುಹುತಿಹ ವರ ಕರ್ಮಕಾಂಡದ |
ಪರಿಪರಿಯವಾಕ್ಯಗಳು ವಿಧಿಶೇಷಗಳವಾಗಿರಲಿ ||
ಭರಿತ ಪರಮಬ್ರಹ್ಮ ಭಾವವ |
ನರುಹುವಾಸುಜ್ಞಾನಕಾಂಡದ |
ಪರಮವಾಕ್ಯಗಳದರಪರಿಯಲ್ಲಿಂದನಾಶಿವನು ||

ಆದೊಡನ್ನಂ ಬ್ರಹ್ಮವೆಂಬೀ |
ವೇದವಾಕ್ಯವು ಹೇಗೆಯನ್ನದಿ |
ಬೋಧಿಪುದೊ ಪರವಸ್ತು ದೃಷ್ಟಿಯನದರರೀತಿಯಲಿ ||
ಬೋಧಿಪುದು ತತ್ವಮಸಿವಾಕ್ಯವ |
ನಾದಿ ಪರಮಬ್ರಹ್ಮವಲ್ಲದೆ |
ಭೇದನಾಗಿಹ ಜೀವಗೊಲಿಯುತುಪಾಸನಾಕ್ರಮವ ||

ವರಯತಿಪನಿದಕೇಳಿ ಮಾರು |
ತ್ತರವ ಪೇಳ್ದನುಪಾಸನಾಕ್ರಮ |
ದಿರವ ಪೇಳುವ ವಾಕ್ಯವಿಧ್ಯರ್ಥದಲಿ ವರ್ತಿಪುದು ||
ಪರಮವಾಕ್ಯ ತದರ್ಥದಿಂದಲಿ |
ವಿರಹಿತವು ತಾನಾಗಿ ಪರಮನ |
ಬೆರೆವ ಪರಮಾರ್ಥವನೆ ಬೋಧಿಪುದೆನುತಹರ್ಷದಲಿ ||

ಆದೊಡೆಲೆ ಯತಿಕೇಳು ವಾಕ್ಯವು |
ವೋದದಿಂದಲುಪಾಸನಾಕ್ರಮ |
ಭೇದವನು ವಿಧ್ಯರ್ಥದಿಂದಲಿ ಪೇಳದಿರೆ ಬಿಡಲಿ ||
ಸಾದೃಶವನೆರಡರಲಿತೋರುವ |
ಬೋಧೆಯಲ್ಲದೆ ಪರಮಜೀವರ |
ಭೇದರೆಂಬುದು ವೇದಸಮ್ಮತವಲ್ಲದಿಟವೆಂದ ||

ಎರಡರಲಿ ಸಾದೃಶ್ಯವಾವುದು |
ಪರಿಕಿಸಲು ಚೈತನ್ಯರೂಪವೊ |
ಭರಿತ ಸರ್ವಜ್ಞತ್ವಪದವಿಯೊ ಪೇಳು ನೀನದನು ||
ಅರಿಯಲಾಚೈತನ್ಯರೂಪವಿ |
ದೆರಡರಲಿ ವಿಖ್ಯಾತಮಾಗಿರೆ |
ಬರಿದೆ ಬೋಧಿಸಲಿದುವೆ ಚರ್ವಿತಚರ್ವಣವೆಯಹುದು || ೨೮

ಇನ್ನು ಸರ್ವಜ್ಞತ್ವವೆಂಬೊಡೆ |
ಭಿನ್ನಭಾವವು ನಶಿಸಿ ಜೀವನ |
ಭಿನ್ನನಹನಾತ್ಮನಲಿ ಸರ್ವಜ್ಞತ್ವ ಸಮನಾಗೆ ||
ನಿನ್ನ ಮತಕೆ ವಿರೋಧಮಾದುದು |
ನನ್ನಿಯಹುದದ್ವೈತತತ್ವವ |
ದೆನ್ನಮತ ನೆರೆಗೆಲ್ದುದೆಂದೆನು ಮನ್ಮಥಾರಾತಿ || ೨೯

ಪರಿಕಿಸಲು ನಿತ್ಯತ್ವಮಾತ್ರದಿ |
ಪರಮಗುಣ ಸಾದೃಶ್ಯವಾಗುತ |
ಲರಿದೆನಿಸುವಜ್ಞಾನ ಬೆರಸಿರಲಪ್ರತೀತಿಯನು ||
ನೆರೆ ಪಡೆದ ಸುಖಬೋಧ ಮೊದಲಾ |
ದುರುತರದಗುಣದಿಂದ ಜೀವಂ |
ಗಿರದೆ ಪರಮಂಗೊರೆವ ವಾಮ್ನಾಯಗಳು ಸಾಮ್ಯವನು || ೩೦

ಆದೊಡಾಶ್ರುತಿವಾಕ್ಯ ಜೀವಗೆ |
ಬೋಧಿಪುದು ಪರಮಾತ್ಮತತ್ವವ |
ನೀದುರಾಗ್ರಹವೇಕೆ ಜೀವನೆ ಪರಮನೆಂದೆನಲು ||
ಭೇದವಾದಕವಿದ್ಯೆ ಕಾರಣ |
ವಾದುದೆಂಬುದ ನೀನು ಮೊದಲನು |
ಮೋದಿಸುತ್ತಿಹೆಯೆಂದು ನುಡಿದನು ಶಂಕರನು ನಗುತ || ೩೧

ನರಯುತಿಯು ಸಾಯುಜ್ಯಮೋಕ್ಷವು ।
ನರಗುಪಾಸನೆಯಿಂದಲಿಲ್ಲದೆ ।
ಬರಿಯಬೋಧೆಗಳಿಂದ ಸಲ್ಲುವುದದೆಂತುಭಾವಿಸಲು ॥
ಅರಿದೆನಿಸುವಜ್ಞಾನತಿಮಿರದ ।
ಪರಿಹರವು ಬರಿನುಡಿಯೊಳಪ್ಪುದು ।
ನೆರೆಸಮಾಹಿತಮಲ್ಲವೆಂದನು ಕಮಲಜನು ನಗುತ ।

ಸನ್ನಿಕಾರನೆಕೇಳು ಜಗದೊಳು ।
ತನ್ನತಾನೆರೆತಿಳಿವ ಘನಸಂ ।
ಪನ್ನಮತಿಯೇ ಬ್ರಹ್ಮವಿದನೆಂದೆನಿಸಿಕೊಳ್ಳುವನು ॥
ತನ್ನತಾಂತಿಳಿವುದಕವಿದ್ಯಾ ।
ಪನ್ನನಪ್ಪನವಿದ್ಯೆಯಳಿಯಲು ।
ತನ್ನತಾನೇಬ್ರಹ್ಮನೆನುತಲೆ ತಿಳಿವನತಿಶಯದಿ ॥

ಪರಮತಾನಾಗಿದ್ದು ತನ್ನನು ।
ಬೆರೆದವಿದ್ಯೋಪಾಧಿಯಿಂದಲೆ ।
ಮರೆದುತನ್ನನು ಜೀವನೆನ್ನುತದುಃಖಿಸುಖಿಯೆಂದು ॥
ಬರಿದೆದುಃಖಿಸುತಿರ್ದುಬಳಿಕಾ ।
ಗುರುಸುಬೋಧೆಗಳಿಂದವಿದ್ಯೆಯು ।
ಹರಿಯೆತಾನೇ ಮತ್ತೆ ಪರಮಬ್ರಹ್ಮನಾಗೆಸೆವ ॥

ಮುನ್ನುಸುಖಿಯಾಗಿರ್ದು ರೋಗಾ ।
ಪನ್ನನಾಗುತ ಮದ್ದುಮೆಲ್ಲುತ ।
ಲಸ್ನಪಾನಾದಿಗಳ ಬಲದಿಂ ರೋಗವುಪಶಮಿಸೆ ।
ಮುನ್ನಿನಂತಾರೋಗ್ಯಮಾಗಲು ।
ಮುನ್ನಿನಾಸುಖಬಂದುದಲ್ಲದೊ ।
ಟಿನ್ನುಸುಖಪೊಸತಲ್ಲವೆಂಬೀರೀತಿಯಲಿನೋಡೆ ॥

ಹಿಂದೆ ರಾಮನು ದೈತ್ಯಕುಲವನು |
ಕೊಂದುಬಳಿಕಾಜನಕರಾಜನ |
ನಂದನೆಯಮನ್ನಿಸದೆ ತಾನೆರೆಮೌನದಿಂದಿರಲು ||
ಬಂದುಕಮಲಜಮುಖ್ಯದಿವಿಜರ |
ವೃಂದವಾರಾಮಂಗೆ ನಮಿಸುತ |
ನಿಂದು ಕರಗಳಮುಗಿದು ಬಿನ್ನವಿಸಿದರು ಭಕ್ತಿಯಲಿ || ೩೬

ರಾಮನೀನರನಾಗಿ ಜನ್ಮಿಸಿ |
ಭೂಮಿಗೈತಂದಖಿಳಸುರಕುಲ |
ಕಾಮಿತಾರ್ಥದನಾದೆ ರಾವಣಕುಲವಸಂಹರಿಸಿ ||
ಭೂಮಿಜಾತೆಯು ನಿನ್ನವರಸು |
ಪ್ರೇಮದಿಂ ಮನ್ನಿಪುದು ಮಾನವ |
ಕಾಮಿನಿಯೆ ಗೋಮಿನಿಯನುಪಚರಿಸೆಂದುಬೇಡಿದರು || ೩೭

ನಾನು ರಾಮಾಭಿಖ್ಯಮನುಜನು |
ಭಾನುವಂಶೋತ್ಪನ್ನ ದಶರಥ |
ಸೂನುವೆನ್ನನು ನೀವು ಮಾನವನಲ್ಲವೆನ್ನುವಿರಿ ||
ಏನು ತೋರದು ಮನಕೆ ನಿಮ್ಮನು |
ಮಾನವೇನೆಂದೆನಲು ಬಳಿಕಾ |
ಭಾನುಕುಲಜಂಗೆಂದನೀಪರಿ ಜಲಜಸಂಭವನು || ೩೮

ನೀನು ಸಾಕ್ಷಾದ್ವಿಷ್ಣುಚಿನ್ಮಯ |
ನೀನು ಪರಮಾದ್ವೈತವಸ್ತುವು |
ನೀನು ಪರಮಬ್ರಹ್ಮ ನಿರ್ಗುಣ ಚೇತನಾತ್ಮಕನು ||
ದಾನವರ ಸಂಹರಿಸಲೋಸುಗ |
ಮಾನುಷಾಂಗದಿ ಬಂದೆ ನಿನ್ನನು |
ನೀನು ತಿಳಿದೆಮ್ಮವನು ರಕ್ಷಿಸೆನುತ್ತ ಕೈಮುಗಿದ || ೩೯

ಕಮಲಜನ ವಾಕ್ಯಗಳ ಕೇಳ್ದಾ |
ದ್ಯುಮಣಿಕುಲಸಂಜಾತ ತಾನತಿ |
ಮುಮತೆಯಿಂದಲಿ ತಿಳಿದು ತನ್ನ ನಿಜಸ್ವರೂಪವನು ||
ವಿಮಲವಸ್ಥಿಯನುಳಿದು ಬಂದಿಹ |
ರಮಣಿಯನು ಕೈಗೊಂಡು ಮುದದಿಂ |
ದಮರರನು ಗೌರವಿಸಿ ಕಳುಹಿದನುಚಿತವಚನದಲಿ ||

ತಾನು ಪೂರ್ಣಬ್ರಹ್ಮನೆಂಬುದ |
ಮಾನುಷಾಂಗದವಿದ್ಯೆಯಿಂದಲೆ |
ಭಾನುಕುಲಜನು ಮರೆದು ಬಳಿಕ ವಿರಿಂಚಿವಾಕ್ಯದಲಿ ||
ತಾನು ತನ್ನನು ತಿಳಿದನೆನಲ |
ಜ್ಞಾನನಾಶಕೆ ಬೋಧೆಯುಳಿದಿ |
ನ್ನೇನಗೈಯಲು ವಿಫಲವಹುದೆಲೆ ವಿಪ್ರಕೇಳೆಂದ ||

ಧಾರಿಣೀಪತಿಯೋರ್ವ ಪೂರ್ವದಿ |
ವೈರಿ ನೃಪತಿಗಳೊಡನೆ ಧುರದೊಳು|
ಶೂರತನವನು ತೋರಿ ಬಾಹುಜಧರ್ಮದಲಿಮಡಿಯೆ ||
ವೈರಿರಾಜರಿಗಂಜಿ ರಾಯನ |
ನಾರಿ ಸುತಸಹ ತೆರಳಿ ಹೊಕ್ಕಳು |
ಘೋರವಿಪಿನವನಲ್ಲಿ ರಕ್ಷಿಸುತಿರ್ದಳರ್ಭಕನ ||

ವನವನದಿ ಸಂಚರಿಸುತಲ್ಲಿಯ |
ವನಚರರನಾಶ್ರಯಿಸಿ ತನ್ನಯ |
ತನುಜನನು ನೋಡುತ್ತ ಹಿಗ್ಗುತ ಪೂರ್ವವನು ನೆನೆದು ||
ಮನದೆ ಮರುಗುತ ಮತ್ತೆ ಮರೆಯುತ |
ವನಿತೆ ಕಾಲವ ನಿಂತುಕಳೆಯುತ |
ತನಯನಭಿವೃದ್ಧಿಯನು ಬಯಸುತಲಿರ್ದಳಾವನದೆ ||

ದಿನದಿನದೊಳಭಿವೃದ್ಧಿಯಾಂತಾ |
ಜನಪ ತನುಜನು ತದ್ವನೇಚರ |
ಜನಗಳೊಡನಿರುತಿರ್ದು ತಿಳಿಯದೆ ರಾಜಸುತನೆಂದು ||
ವನಚರನು ತಾನೆನುತ ಭಾವಿಸಿ |
ವನಚರರಧರ್ಮದಲಿ ಚರಿಸುತ |
ವನಚರಾಧಿಪನಾಗಿ ಸೊಗದಿಂದಿರ್ದನಾವನದೆ || ೪೪

ಒಂದುದಿನ ನೃಪವನಿತೆ ತನ್ನಯ |
ನಂದನನನೀಕ್ಷಿಸುತ ಮನದೊಳು |
ನೊಂದು ಮಗನನು ಕರೆದು ನುಡಿದಳು ಕರುಣವಾಂತಿಂತು ||
ಕಂದ ನೀಂ ನರಪಾಲಪುತ್ರನು |
ತಂದೆಯನು ರಿಪುನೃಪರು ಕೊಲ್ಲಲು |
ಮಂದಿರವನುಳಿದಾನು ಬಂದೆನು ವನಕೆ ನಿನ್ನೊಡನೆ || ೪೫

ವರಕುಮಾರಕ ಕೇಳು ಶಬರರ |
ನೆರವಿಗಳನಾಶ್ರಯಿಸಿ ನಿನ್ನನಃ |
ಪೊರೆದಿಹೆನು ನೀನಿನ್ನು ನಿನ್ನಯ ಪಿತನರಾಜ್ಯವನು ||
ಆರಿನೃಪರನೊತ್ತರಿಸಿ ಸಾಧಿಸಿ |
ಪೊರೆದು ಸತ್ಕೀರ್ತಿಯನು ಪಡೆಯುವು |
ದರಸುನೀತಿಗೆ ಯೋಗ್ಯವೆಂದಳು ಜನನಿ ನಿಜಸುತಗೆ || ೪೬

ಜನನಿಯೆಂದುದ ಕೇಳಿದಾಕ್ಷಣ |
ವನಚರನು ತಾನೆಂಬ ಭಾವನೆ |
ಮನದೊಳಡಗಿತು ತನ್ನ ನಿಜದರಿವಾಯ್ತು ನೃಪಸುತಗೆ ||
ಘನಪರಾಕ್ರಮದಿಂದ ಶಾತ್ರವ |
ಜನಪತಿಯ ಜಯಿಸಿದನು ರಾಜ್ಯವ |
ನನುವಿನಿಂ ಕೈಗೊಂಡು ಸುಖದಿಂದಿರ್ದನಾಕುವರ || ೪೭

ತಾಯಿ ಪೇಳಿದ ಮಾತನಾಲಿಸಿ |
ರಾಯ ಕುವರನು ತನ್ನ ಮನಸಿನ |
ಮಾಯೆಯನು ಕೆಡೆನೂಕಿ ನಿಜವನು ತಿಳಿದರೀತಿಯಲಿ ||
ಹೇಯವಾದಜ್ಞಾನನಾಶಕು |
ಪಾಯವದು ವಿಜ್ಞಾನವಲ್ಲದೆ |
ಬೀಯವಾಗದುಪಾಸನಾದಿಗಳಿಂದ ಭಾವಿಸಲು ||

ಉತ್ತಮೋತ್ತಮು ಕೇಳು ಗಂಗೆಯ |
ನುತ್ತರಿಸಬೇಕೆನುತಬಂದರು |
ಹತ್ತುಜನರೀಸುತ್ತನದಿಯನು ದಾಟಿದರು ಬಳಿಕ ||
ಉತ್ತರದ ಕೂಲದಲಿ ನಿಂದೆಣಿ |
ಸುತ್ತ ತಮ್ಮನು ತೊರೆಯೊತುಳಿದೊಂ |
ಬತ್ತನೆಣಿಸುತಲೊಬ್ಬನಿಲ್ಲವೆನುತ್ತ ಮರುಗಿದರು ||

ಬಳಿಕಲೆಲ್ಲರು ತನ್ನ ತಾ ಬಿ |
ಟ್ಟಳಿದವರನೆಣಿಸುತ್ತಲೊಬ್ಬಂ |
ಗಳಿವನೇ ನಿಶ್ಚಯಸಿ ಗಂಗಾತೀರದಲಿನಿಂದು ||
ಅಳಲುತಿರಲಿನ್ನೊಬ್ಬನವದಿರ |
ಬಳಿಗೆ ಬಂದನು ಕೇಳ್ದನೇತ |
ಕ್ಕಳಲುವಿರಿ ನೀವೆಂದು ತಿಳಿದನು ದುಃಖಕಾರಣವ ||

ಮರುಗಿದನು ಮನದೊಳಗೆ ಜನರೀ |
ಪರಿಯೊಳಜ್ಞಾನದಲಿ ತಮ್ಮನು |
ಮರೆದು ಕಾಮಕ್ರೋಧ ಮದಮತ್ಸರಗಳೆಂದೆನಿಪ ||
ಅರಿಗಳಿಗೆ ನೆರೆಸಿಲುಕಿ ಬಯಲಿಗೆ |
ಮರುಗಿ ದುಃಖಾಂಬುಧಿಯೊಳಾಳುತ |
ಲರರೆಕೆಡುತಿಹರೆನುತಲವದಿರಲೊಬ್ಬಗಿಂತೆಂದ ||

ಆಳಲಬೇಡಲೆಸಖನೆ ನಿಮ್ಮೊಳ |
ಗಳಿದನೊಬ್ಬನೆನುತ್ತ ನಿನ್ನೀ |
ಬಳಗವನೆಣಿಸುತನ್ನಿದಿರೊಳೆಂದೆನುತ ವಚನಿಸಲು ||
ಗಳಿಲನೆದ್ದನ ತನ್ನನೊಬ್ಬನ |
ನುಳಿಯುತುಳಿದರನೆಣಿಸಿ ಮತ್ತವ |
ನಳಲುತಿರಲಾಗಂತುಕನು ನಗುತೆಂದನವನೊಡನೆ || ೫೨

ಮತ್ತೆ ನೀನೆಣಿಸೆನಲು ಬಳಿಕೊಂ |
ಬತ್ತನೆಣಿಸುತ ತನ್ನನುಳಿಯಲು |
ಮತ್ತತೆಯನದಕಂಡು ದಶಮಸ್ತ್ವಮಸಿಯೆಂದೆನಲು ||
ಚಿತ್ತದುಮ್ಮಹವಳಿದು ಸಮ್ಮುದ |
ವೆತ್ತು ಬಳಿಕಾ ಹತ್ತುಜನಗಳು |
ಚಿತ್ತದಜ್ಞಾನವನು ತೊರೆದತಿಸುಖವನೊಂದಿದರು || ೫೩

ಭಾವಿಸಲು ಸುಜ್ಞಾನದಾವಿ |
ರ್ಭಾವವೇ ನಿಜಸುಖವ ಮನುಜಂ |
ಗೀವುದಲ್ಲದೆ ಚಿತ್ತದಜ್ಞಾನವನುಪರಿಹರಿಸಿ ||
ಕಾವುದಿದಬಿಟ್ಟುಳಿದುಪಾಸನೆ |
ನೋವಹರಿಸಲು ಸಲ್ಲದದರಿಂ |
ದೀವಿಮಲಸುಜ್ಞಾನಲಾಭಕೆ ಮನವಮಾಡೆಂದ || ೫೪

ಸುರರುಪಾಸನೆಯಿಂದವಿದ್ಯೆಯು |
ಹರಿದುದೇ ರಾಮಂಗೆ ಮತ್ತಾ |
ನರಪತಿಯುಸುತನಾವ ದೇವರುಪಾಸನೆಯ ಮಾಡಿ ||
ಅರಸುತಾನೆಂದರಿದ ಪೇಳ್ವೈ |
ಧರಣಿಯುಮರನೆ ಚಿತ್ತತಿಮಿರದ |
ಪರಿಹರಕೆ ಸುಜ್ಞಾನಮಾತ್ರವೆ ಪರಮಸಾಧನವು || ೫೫

ಲೋಕಹಿತವನು ಬಯಸುತಾಜಗ |
ದೇಕನಾಥಮುಕುಂದನೀ ಭೂ |
ಲೋಕದಲಿ ಕೃಷ್ಣಾಭಿದಾನದಿರಾಜಿಸುತ್ತಿರಲು ||
ಈ ಕನುಲಲೋಚನನ ಸುತನಿಂ |
ಸೋಕುವುದು ಮೃತಿತನಗೆ ದಿಟವೆಂ |
ದಾಕುಠಾರನು ಶಂಬರಾಸುರನಿರ್ದ ಚಿಂತೆಯಲಿ ||

ಇಂತಿರಲು ನಾರಾಯಣಪ್ರಿಯ |
ಕಾಂತೆರುಕ್ಮಿಣಿಯೊಲಿದು ಗರ್ಭವ |
ನಾಂತು ಮಗನನುಪಡೆದಳಾ ಪ್ರದ್ಯುಮ್ನನಾಮಕನ ||
ಅಂತಕನು ಶಿಶುತನಗೆನುತ್ತಲಿ |
ಚಿಂತಿಸುತಲಾದೈತ್ಯ ಶೈಶವ |
ವಾಂತ ಕಾಮುನನೆತ್ತಿಕೊಂಡೊಯ್ದೊಗೆದನಬ್ಧಿಯಲಿ ||

ಇತ್ತರುಕ್ಮಿಣಿ ಪಡೆದಶಿಶುವನು |
ಮತ್ತೆಕಾಣದೆ ಬಹುಳದುಃಖಾ |
ಯತ್ತಮಾನಸಳಾಗಿ ಮರುಗುತ್ತಿರಲು ನರಹರಿಯು ||
ಚಿತ್ತದೊಳುತಾನರಿದು ತನ್ನಯ |
ಮತ್ತಕಾಶಿನಿಯನ್ನು ಸಂತೈ |
ಸುತ್ತಲಿರ್ದನು ಹರಿಯುಲೀಲೆಯುನರಿವರಾರೆಂದ ||

ಜಲಧಿಯೊಳು ಮೀನೊಂದುನುಂಗಿತು |
ಜಲಜನಾಭನಸುತನನಾಗಲೆ |
ಬಲೆಯಬೀಸಿದನೊಬ್ಬಸೂತನು ಪಿಡಿದನಾಝಷವ ||
ಮೊಲಲಿಶಂಬರನಿದನು ತಾನೆಂ |
ದೊಲಿದು ಸೂತನು ಕೊಡಲು ರಕ್ಕಸ |
ಕಳುಹಿದನುಮತ್ಸ್ಯವನು ತನ್ನಯ ಬಾಣಸದಮನೆಗೆ ||

ಹಿಂದೆ ಕಾಮನು ಹರನಮುನಿಸಿಂ |
ಬೆಂದು ಹೋಗಲ್ಕವನಸತಿರತಿ |
ಯಿಂದುಮೌಳಿಯಭಜಿಸಿ ಪತಿಯನುಕರುಣಿಸುವುದೆನಲು ||
ಮುಂದೆಜನಿಸುವನಿವನು ದೇವನು |
ಕುಂದನಿಗೆಸುತನಾಗಿ ನೀಮುದ |
ದಿಂದಲಾತನ ಸೇರಿಸುಖಿಸುವುದೆನುತ ಕರುಣಿಸಿದ || ೬೦

ರತಿಯು ಶಿವನಾಜ್ಞೆಯಲಿತನ್ನಯ |
ಪತಿಯಪುನರುದ್ಭವನ ಕಾಮಿಸು |
ತತಿಶಯದ ಖೇದದಲಿ ವನದೊಳಗಿರಲು ಶಂಬರನು ||
ರತಿಯಕಾಣುತ ಮೋಹಗೊಂಡನು |
ಸತಿಯುತನಗೆಹಳೆನುತ ತಂದನು |
ಮತಿವಿಕಳತನದಿಂದ ಪೋಷಿಸುತಿರ್ದನಾಕೆಯನು || ೬೧

ವ್ರತದನೆವವನು ಪೇಳ್ದುರಾಕ್ಷಸ |
ಪತಿಗೆ ಮೋಹವಬೀರಿ ಸಾಧ್ವೀ |
ವ್ರತವರಕ್ಷಿಸಿಕೊಂಡು ಮಾಯಾವಿದ್ಯೆಯನುಕಲಿತು ||
ಸತಿಯು ಶಂಬರದೈತ್ಯಗೃಹದೊಳು |
ಪತಿಪರಾಯಣೆಯಾಗಿ ಮಾಯಾ |
ವತಿಯೆನಿಪಪೆಸರಿಂದಲಿರ್ದಳು ಬಹುಳಖೇಧದಲಿ || ೬೨

ಧೀವರನುತಂದಿತ್ತ ಮತ್ಸ್ಯವ |
ನೀವನಜಮುಖಿ ಸೀಳಿಕಂಡಳು |
ತಾವರೆಯಸಖನಂತೆ ರಾರಾಜಿಸುವಶಿಶುವರನ ||
ದೇವಮುನಿಯೈತಂದನಾಗಲೆ |
ದೇವದೇವನ ತನಯನೀತನು |
ಕಾವನಿವನನು ಪೊರೆವುದೆನ್ನುತತೆರಳಿದನು ನಭಕೆ || ೬೩

ಆಲತಾಂಗಿಯು ಬಹುಳಹರ್ಷವ |
ತಾಳಿ ಪತಿಭಾವನೆಯೊಳೀತನ |
ಪಾಲಿಸುತ ತಾರುಣ್ಯಮಂಕುರವಾಗೆ ತಾಂಬಳಿಕ ||
ಪೇಳಿದಳು ವೃತ್ತಾಂತವೆಲ್ಲವ |
ಪಾಲಿಸಿದಳಾತಂಗೆ ಮಾಯಾ |
ಜಾಲವನುಪರಿಹರಿಪ ಬಹುಳೋಪಾಯಕೌಶಲವ ||

ಬಳಿಕಲಾಪ್ರದ್ಯುಮ್ನ ತನ್ನಯ |
ಲಲನೆಯೊರೆದಾತೆರದೆ ರಣದೊಳ |
ಗಲಘುಸಾಹಸಿಯಾದ ಶಂಬರದೈತ್ಯನನುಮಡುಹಿ ||
ಬಲವಿರೋಧಿಯ ನೆನಹನೀಯುತ |
ಲಲನೆಯಿಂದೊಡಗೂಡಿ ಬಂದನು |
ಜಲಜನಯನನಪುರಿಗೆ ಗಗನೇಚರರ ಮಾರ್ಗದಲಿ ||

ಬಂದನಾದ್ವಾರಕಿಗೆ ಸತಿಸಹ |
ತಂದೆಗೆರಗಿದಬಳಿಕ ಜನನೀ |
ಮಂದಿರಕೆನಡೆತಂದು ಚರಣಕ್ಕೆರಗಿಕೈಮುಗಿಯೆ ||
ಕಂದನೆಂಬುದನರಿಯದಾ ಪೂ |
ರ್ನೇಂದುಮುಖಿ ಸಂದೇಹದಿಂದಿರ |
ಲಂದು ನಾರದಮುನಿಪನೈತಂದನು ಸರಾಗದಲಿ ||

ಜನನಿಕೇಳ್ವೈದರ್ಭಿ ನಿನ್ನಯ |
ತನುಜನೀತನ ಜನಿಸಿದಾಗಲೆ |
ದನುಜಶಂಬರನೊಯ್ದು ಬಿಸುಟನು ಜಲಧಿಮಧ್ಯದಲಿ ||
ವನಜಮುಖಿರತಿಯೊಲಿದು ಪಾಲಿಸೆ |
ದನುಜನನು ಸಂಹರಿಸಿಬಂದಿಹ |
ನನುಪಿನಿಂದೀತನನು ಪಾಲಿಪುದೆಂದನಾಮುನಿಪ ||

ಮುನಿಯುವಚನವ ಕೇಳುತಾಕ್ಷಣ |
ವನಜಮುಖಿಸಂಶಯುವ ವರ್ಜಿಸಿ |
ತನುಜನನು ಬಿಗಿಯಪ್ಪಿಸಂತೈಸಿದಳು ತತ್ಪತಿಯು ||
ಮನದೊಳಂಕುರಿಸಿರ್ದವಿದ್ಯೆಯು |
ವಿನುತಸುಜ್ಞಾನದಲಿ ಹರಿದುದು |
ವನಜಮುಖಿರುಕ್ಮಿಣಿಗೆ ನೀನರಿಯೆಂದನಾಶಿವನು || ೭೮

“ದ್ವಾಸುಪರ್ಣಾ” ಶ್ರುತಿಯುವರಸ |
ನ್ಯಾಸಿಕೇಳೈ ಕರ್ಮಫಲಗಳ |
ಬೇಸರಿಲ್ಲದೆಭುಜಿಪಜೀವಗು ಭೋಕ್ತೃವಲ್ಲದಿಹ ||
ಭಾಸಮಾನಚಿದಾತ್ಮಗೂ ವ್ಯ |
ತ್ಯಾಸವನು ಬೋಧಿಸುವುದದರಿಂ |
ದೀಸುವಾಕ್ಯವಭೇದತ್ವವಿರೋಧವಾಗಿಹುದು || ೭೯

ಕರ್ಮವಿದನೀ ಪೇಳಿದೀಶ್ರುತಿ |
ಕರ್ಮಫಲವನು ಭುಜಿಪಬುದ್ಧಿಗು |
ಕರ್ಮಪಲನಿರ್ಲಿಪ್ತನೆನಿಸುತಮೆರೆವಪುರುಷನಿಗು ||
ಕೂರ್ಮೆಯಿಂಭೇದವನು ಬೋಧಿಪ |
ಮರ್ಮವಿಲ್ಲದೆ ಭಿನ್ನಭಾವನ |
ನಿರ್ಮಲಗೆಜೀವನಿಗೆ ಬೋಧಿಸದೆಂದನಾಯತಿಪ || ೮೦

ಆದೊಡಿದು ಜೀವೇಶಭೇದಸು |
ಬೋಧಕವು ತಾನಾಗದೀಜಡ |
ವಾದಬುದ್ಧಿಗೆ ಕರ್ಮಫಲಭೋಕ್ತೃತ್ವಪದವಿಯನು ||
ವಾದಿಸಲು ವಿಧಿವಾಕ್ಯದೊಳ್ಶ್ರುತಿ |
ಪಾದಿತಪ್ರತ್ಯಕ್ಷಭಾವವಿ |
ರೋಧದೋಷಪ್ರಾಪ್ತಿಯಾಗುವುದೆಂದನಜನಾಗ || ೮೧

"ದ್ವಾಸುಪರ್ಣಾ" ಯೆಂಬುವೀಶ್ರುತಿ |
ಗಾಸುವ್ಯಂಗ್ಯರಹಸ್ಯದೊಳು ತಾಂ |
ಭಾಸಮಪ್ಪುದು ಬುದ್ಧಿಜೀವಪರಾರ್ಥವಿವರಣೆಯು ||
ವಾಸಿಯೇತಕೆಬರಿದೆ ವರಜೀ |
ವೇಶರೈಕ್ಯವೆ ವೇದಸಮ್ಮತ |
ವಾಸುರವಲೇ ಭೇದಭಾವನೆಯೆಂದನಾಯತಿಪ ||

ಯತಿಪಕೇಳ್ಸೈ ಸತ್ವಶಬ್ದವು |
ಸತತ ಶಾರೀರಾತ್ಮವಾಚಕ |
ವತಿಶಯಕ್ಷೇತ್ರಜ್ಞಶಬ್ದವಿದಾತ್ಮವಾಚಕವು ||
ಮತಿಯುತನೆ ಜೀವೇಶಭೇದ |
ಸ್ಥಿತಿಯಬೋಧಿಪುದೈಸೆ ವ್ಯಂಗ್ಯ |
ಶ್ರುತಿರಹಸ್ಯವಿದೆನಲು ಮತ್ತಂತೆಂದನಾಯತಿಪ ||

ಉತ್ತಮನೆ ವರಸತ್ವಶಬ್ದಕೆ |
ವೃತ್ತಿಯನುಪೇಳುವುದು ವ್ಯಂಗ್ಯವು |
ಚಿತ್ತದೊಳ್ ಕ್ಷೇತ್ರಜ್ಞನೆಂಬುವಪದಕೆ ಭಾವಿಸಲು ||
ವೃತ್ತಿಶಾರೀರಕನೊಳದರಿಂ |
ಬಿತ್ತರಿಪುದೀ ವಾಕ್ಯಬುದ್ಧಿಯ |
ಮತ್ತೆ ಜೀವನವಿಷಯ ಮಾತ್ರವನೆಂದನಾಯತಿಪ ||

ಭಾವಿಸುವೊಡಾ ಸತ್ವಶಬ್ದವು |
ಜೀವಬೋಧಕವಲ್ಲದಿರೆ ಬಿಡ |
ಲಾವನೀದೇಹಾದಿ ಭೌತಿಕಸರ್ವಗತನಹನೊ ||
ಆವಿಮಲನೀಶನೊಳುವೃತ್ತಿಯ |
ನಾವಗಂಶಾರೀರಶಬ್ದ |
ಕ್ಕೋವಿಬೋಧಿಸುತಿಹವು ವೇದಗಳೆಂದನಾಬ್ರಹ್ಮ ||

ಗಗನವೀದೇಹದಲಿ ತುಂಬಿರೆ ।
ಗಗನಶಾರೀರಕವೆ ಪೇಳ್ಕೆ ।
ಜಗದಖಿಳದೇಹದಲಿ ತುಂಬಿರೆಪರಮನಿರ್ಗುಣಗೆ ॥
ವಿಗಡ ಶಾರೀರಾಭಿಧೇಯವು ।
ಸೊಗಸುವುದೆ ಜೀವಾತ್ಮಗಲ್ಲದೆ ।
ಬಗೆಯಲದರಿಂ ನಿನ್ನವಾದವು ವಿಫಲವಾಯ್ತೆಂದ ॥ ೭೬

ಬಳಿಕ ಮಂಡನಮಿಶ್ರ ನುಡಿದನು ।
ನೆಳಲುಬಿಸಿಲಂದದಲಿ ಭಿನ್ನರು ।
ತಿಳಿಯಲಾಪರಮಾತ್ಮಜೀವರೆನುತ್ತ ಬೋಧಿಪುದು ॥
ಬಲುಮೆಯಿಂದಾ ಕಾಟಕಶ್ರುತಿ ।
ಯುಲಘುಮತಿಯತಿಕೇಳು ಪರಿಕಿಸೆ ।
ಬಲುವಿರೋಧವಿದ್ಯೆಸೆ ಜೀವೇಶೈಕ್ಯಭಾವನೆಗೆ ॥ ೭೭

ವಾದಿಕೇಳ್ವ್ಯವಹಾರಸಿದ್ಧಿಗೆ ।
ಭೇದವನುಬೋಧಿಸುವ ವಾಕ್ಯವ ।
ನಾದಿಸಿದ್ಧದಪೂರ್ವಮಹದರ್ಥವನು ವಾಚಿಸುವ ॥
ಭೇದವಿರಹಿತ ತತ್ವಮಸಿಮೊದ ।
ಲಾದ ವರವೇದಾಂತವಾಕ್ಯವ ।
ಬಾಧೆಗೊಳಿಸಲಶಕ್ತ ವಾಗಿಹುದೆಂದನಾಯತಿಪ ॥ ೭೮

ಚಂಡತರವಾದದೊಳಗಿಂತಾ ।
ಖಂಡಲಾದಿಸುರೌಘನತಪದ ।
ಪುಂಡರೀಕನು ವಿಶ್ವರೂಪನಪೂರ್ವಪಕ್ಷಗಳ ॥
ಖಂಡಿಸುತ ಸಿದ್ಧಾಂತಗೈಯಲು ।
ಪಂಡಿತರುಕಾಣುತ್ತ ಮಹಿಮೋ ।
ದ್ದಂಡಯತಿಪನಜಯವ ನಿಶ್ಚಯಿಸಿದರುಮನದೊಳಗೆ ॥ ೭೯

ಇರುತಿರಲು ವರವಿಶ್ವರೂಪನ |
ಕೊರಳೊಳಿಹ ಸುಮಮಾಲೆ ಕಂದುತ |
ಲಿರಲು ನಿರ್ಣಯವಾದುದಪಜಯವಜನಮನದೊಳಗೆ ||
ಸರಸವಾಣಿಯು ವಾಣಿ ಬಂದಳು |
ಹರವಿರಂಚಿಗಳಿರ್ಪ ಸಭೆಗಂ |
ದರಿದಳಾಕ್ಷಣ ಪತಿಪರಾಜಿತನಾದ ಸಂಗತಿಯ ||

ಸಾಕ್ಷಿಯಾಗಿರುತಿರ್ದ ಸರಸತಿ |
ಯಾಕ್ಷಣದೊಳೈತಂದು ಸಭೆಯೊಳ |
ಗೀಕ್ಷಿಸುತ ಯತಿಪತಿಗಳಿಬ್ಬರ ತಾರತಮ್ಯವನು ||
ಪಕ್ಷಪಾತವನುಳಿದು ಕಮಲದ |
ಳಾಕ್ಷಿನಮಿಸುತ ಕರೆದಳಿಬ್ಬರು |
ಭಿಕ್ಷುಕೈತಹುದೆನುತ ಮಂಡನಮಿಶ್ರ ಬೆರಗಾಗೆ ||

ಸರಸತಿಯು ಪೇಳಿದುದ ಸಭೆಯೊಳ |
ಗಿರುವ ಸಕಲರು ಕೇಳಿ ಮನದೊಳು |
ಹರುಷವನುತಾಳಿದರು ವಾದದಿ ಯತಿಯುಗೆದ್ದುದಕೆ ||
ಪರಮಹಂಸಶ್ರೇಷ್ಠ ಸಾಕ್ಷಾ |
ತ್ಪರಮಶಿವನೆಂದೆನುತ ಭಕ್ತಿಯೊ |
ಯೊಳೆರಗಿ ನುತಿಸುತ್ತಿರ್ದರಾ ಶ್ರೀಕಂಠದೇವನನು ||

ಸಂಧಿ ಇಪ್ಪತ್ತನಾಲ್ಕಕ್ಕೆ ಪದ್ಯ ೧೧೪೯ ಕ್ಕೆ ಮಂಗಳಂ.

# ಇಪ್ಪತ್ತೈದನೆಯ ಸಂಧಿ.

ಸೂಚನೆ॥ ವರಕಲಾಶಾಸ್ತ್ರದಲಿ ವಾಣಿಯು ।
ಹರನು ಜಯಿಸಲು ಮಾಸದವಧಿಯು ।
ನೆರೆಪಡೆದು ತೆರಳಿದನು ಶಿಷ್ಯರವೆರಸಿ ಹರ್ಷದಲಿ ॥

ಕೇಳು ಶೌನಕಮುನಿಪ ಯತಿಕುಲ ।
ಮೌಳಿ ವಾಗ್ವಾದದಲಿ ವಾಣೀ ।
ಲೋಲನನು ಜಯಿಸಿದುದ ಕಂಡು ಸುರೌಘವಭ್ರದಲಿ ॥
ಮೇಳವಿಸಿ ಸುರವನದ ಕುಸುಮವ ।
ಬಾಲಶಶಿಧರನುತ್ತಮಾಂಗದ ।
ಮೇಲೆವರ್ಷಿಸುತಿದ್ದರತಿಶಯ ಸಾಧುವಾದದಲಿ ॥ ೧

ಆಸಮಯದಲಿ ವಾಣಿ ಪಾಟಲ ।
ವಾಸನನು ಕುರಿತೆಂದಳಾದೂ ।
ರ್ವಾಸಮುನಿಪತಿ ಕೋಪದಿಂ ತನಗಿತ್ತ ಶಾಪವದು ॥
ದೇಶಿಗನೆ ಭವದೀಯ ವಾದವಿ ।
ಲಾಸದಿಂ ಪರಿಹರವು ಪೂರ್ವನಿ ।
ವಾಸಕೈದುವೆನಿನ್ನು ತಾನೆಂದೆನುತಲಾದರದೆ ॥ ೨

ಇಂತುಸಿರಿ ಬಳಿಕಾವಿಧಾತನ ।
ಕಾಂತೆ ಘನತರ ದಿವ್ಯರೂಪವ ।
ನಾಂತು ಹಸ್ತಚತುಷ್ಟಯಂಗಳ ತಳೆದುರಂಜಿಸುತ ॥
ಸಂತವಿಸಿ ಸಭ್ಯರನು ವಾಣೀ ।
ಕಾಂತಪುರವನು ಸೇರ್ವೆನೆಂದೆನು ।
ತಂತರಿಕ್ಷಕೆಗಮಿಸ ಸಾರುತಲಿರ್ದಳತಿಮುದದೆ ॥ ೩

ಪದ್ಮಕೈದುವೆನೆಂಬವರಸಿತ |
ಪದ್ಮಪದ್ಮೆಯ ಕಂಡು ಮುನಿಹೃ |
ತ್ಪದ್ಮಸದ್ಮನು ದಿವ್ಯವನದುಗರ್ಾ ಸುಮಂತ್ರದಲಿ ||
ಪದ್ಮಪೀಠನ ಸತಿಯು ತಾನಿಹ |
ಸದ್ಮದೇಶಕೆ ಸೆಳೆಯಲಾಕ್ಷಣ |
ಪದ್ಮಜಾತನ ಜಾಯೆಬಂದಳು ಮತ್ತೆಭೂತಳಕೆ ||

ಬಂದು ಸಭೆಯಲಿ ನೆಲವಮುಟ್ಟದೆ |
ನಿಂದು ಮುದದಲಿ ಯತಿಯನೀಕ್ಷಿಸು |
ತೆಂದಳೆಲೆಯತಿವರ್ಯ ನಿನ್ನಯವಾಂಛಿತಾರ್ಥವನು ||
ಇಂದುಸಲಿಸುವೆ ಬೇಡುನೀನೆಲ |
ಲಂದುವಾಣಿಯ ಜಯಿಸುವಿಚ್ಛೆಗೆ |
ಸಂದನದ್ವೈತದ ಸುಸಿದ್ಧಾಂತವ ದೃಢೀಕರಿಸೆ ||

ಪರಮಪುರುಷಪರಾತ್ಮಶಿವನಿಗೆ |
ವರಸಹೋದರಿಯಾಗಿ ವೀಣ |
ಕ್ಷರಸುಮಾತೃಕೆಯಾಗಿ ಶುದ್ಧಜ್ಞಾನಘನೆಯಾಗಿ ||
ಪರವು ಪಶ್ಯಂತಿಯು ಸುಮಧ್ಯಮ |
ಮೆರೆವ ವೈಖರಿಯೆಂಬ ಪಾವನ |
ತರಚತುಷ್ಟಯದಿಂದ ರಂಜಿಪಮಾತೆಗಭಿನಮಿಪೆ ||

ತಾಯೆ ನೀನೀಜಗದೆ ಜೀವಿನಿ |
ಕಾಯವನು ಸೃಷ್ಟಿಪವಿರಿಂಚಿಯ |
ಜಾಯೆ ಸಿರಿಗಿರಿಜಾದಿ ರೂಪವತಳೆದುರಂಜಿಸುವ ||
ಮಾಯೆ ಮಾಯಾಮಯೆ ಜಗನ್ಮಯೆ |
ತೋಯಜಾಂಬಕಿ ಚರಣಶರಣನಿ |
ಕಾಯಸಂರಕ್ಷಕಿಯೆ ರಕ್ಷಿಪುದೆನ್ನ ಕರುಣದಲಿ ||



ಶ್ರೀ ಭಾಷ್ಯಕಾರಕೃತ ಸರಸ್ವತೀಬಂಧನಕ್ರಮಃ

ಶರಣಜನ ಸುರಧೇನು ಲಾಲಿಸು |
ಚರಣಭಕ್ತನು ನಾನು ನಿನಗಾಂ |
ತೆರಳುವುದಕಭಿಮತವ ನೀವನ್ನಬರಮಿಲ್ಲಿಂದ ||
ತೆರಳಲಾಗದೆನಲ್ಕೆ ಶಾರದೆ |
ಕರುಣದಿಂದ ತಥಾಸ್ತುವೆಂದೆನೆ |
ಹರನಿರೀಕ್ಷಿಸುತಿರ್ದ ಮಂಡನಮಿಶ್ರನುತ್ತರವ || ೮

ಇತ್ತ ಮಂಡನಮಿಶ್ರ ತನ್ನಯ |
ಮತ್ತಕಾಶಿನಿ ಯತಿಯ ಗೌರವಿ |
ಸುತ್ತ ನುಡಿದುದ ಕೇಳಿ ತನ್ನಪಜಯವನಿಶ್ಚಯಿಸಿ ||
ಚಿತ್ತದಾಗ್ರಹವೊಳಗಡಗೆ ತಾ |
ಮತ್ತೆ ಸಂಶಯಬಿಡದೆ ಯತಿಸ
ರ್ವೋತ್ತಮನಕುರಿತೆಂದ ನೀಪರಿಕರ್ಮಜಡನಾಗಿ || ೯

ವೇದವಿದ್ಯತಿವರನೆ ಲಾಲಿಸು |
ವಾದದೊಳಗಪಜಯವು ತನಗಿಂ |
ದಾದುದಕೆ ಮನದೊಳಗೆ ನೋವಿನಿತಿಲ್ಲ ನಿಶ್ಚಯವು ||
ಆದಯಾಂಬುಧಿ ಮುನಿಪಜೈಮಿನಿ |
ಯಾದರದಿ ಬೋಧಿಸಿದ ಸೂತ್ರಕ |
ನಾದರಣೆಯಾದುದಕೆ ಬಲುಕೃಶನಾದೆ ನಾನೆಂದ || ೧೦

ಅರಿತು ಭೂತಭವಿಷ್ಯವೆಲ್ಲವ |
ಧರೆಗೆ ಹಿತವನು ಬಯಸಿ ತಪವನು |
ಚರಿಸಿ ವರವೇದಾರ್ಥನಿಚಯಕೆ ಸೂತ್ರಗಳರಚಿಸಿ ||
ಪೊರೆದವರದಾತಾರ ಜೈಮಿನಿ |
ಯೊರೆದ ಸೂತ್ರವು ವಿತಥವಾಗುವ |
ತೆರನದೆಂತೈಪೇಳು ಯತಿಪತಿಯೆಂದನಜನಾಗ || ೧೧

ಎನಲದನು ಲಾಲಿಸುತ ಸಂಯಮಿ |
ಜನವರೇಣ್ಯನು ನಗುತ ನುಡಿದನು |
ಮುನಿಪತಿಯ ಸೂತ್ರಾರ್ಥದಾಂತರ್ಯವನು ಭಾವಿಸಲು ||
ಜನರುತಾವನಭಿಜ್ಞರಾದೊಡೆ |
ವಿನುತಸೂತ್ರವು ವಿತಥವಪ್ಪುದೆ |
ಘನಮಹಿಮ ಜೈಮಿನಿಯ ಸೂತ್ರವಭೇದ್ಯವಹುದೆಂದು ||

ಆದೊಡೆಲೆ ಯತಿನಾಥ ಜೈಮಿನಿ |
ಯಾದರದಿಪೇಳಿರ್ಪ ಸೂತ್ರವ |
ಮೇದಿನಿಯ ಕವಿಜನಗಳರಿಯದಪಾರ್ಥಗೈದಿಹರೊ ||
ವೇದನಿಚಯಕಪಾರ್ಥಕಲ್ಪನೆ |
ಯಾದುದೋ ಜೈಮಿನಿಯ ದೆಸೆಯಿಂ |
ನೀದಯಾಂಬುಧಿಯಿದನು ಕರುಣಿಪುದೆಂದನಾವಿಧಿಯು ||

ವಿದುಷವರ ನೀತೆರಡೆಬೇಡಲು |
ಮದನರಿಪು ನಸುನಗುತ ಜೈಮಿನಿ |
ಹೃದಯ ಪರಮಬ್ರಹ್ಮಭಾವದಿ ಪೂರ್ಣವಾದಡೆಯು ||
ಇದು ವಿಷಯಕಲುಷಿತರಚಿತ್ತಕೆ |
ವಿದಿತವಾಗಲಸಾಧ್ಯಮೆಂದಾ |
ಪದುಳವಹಸತ್ಕರ್ಮಮಾರ್ಗವನರುಹಿದನುದಯದೆ ||

ನೆರೆಸುದಾನವು ಯಜ್ಞತಪವೆಂ |
ಬುರುತರದ ಸತ್ಕರ್ಮಮಾರ್ಗದೆ |
ಕರಣನೈರ್ಮಲ್ಯವನುಪಡೆದಾ ಬಳಿಕ ಮನುಜನಿಗೆ ||
ದೊರೆಯುವುದು ವೈರಾಗ್ಯವದರಿಂ |
ಪರಮಸುಜ್ಞಾನವನು ಪಡೆಯಲು |
ಪರಮಪದ ಸೌಲಭ್ಯದಿಂದಲೆ ದೊರೆವುದೆಂದೊರೆದ || ೧೫

ಸತತಮಾವಿಷಯಪ್ರವಾಹೀ |
ಕೃತಮತಿಯನುಳ್ಳರಿಗೆ ತತ್ತ್ವವ |
ನತಿಶಯದೆ ಬೋಧಿಸಲು ತಿಳಿವೊಡಸಾಧ್ಯಮೆಂದೆನುತ ||
ಮತಿಯುತನು ನಿಶ್ಚಯಿಸಿ ಕರ್ಮವೆ |
ಹಿತಕರವು ಜನಕೆನುತ ಜೈಮಿನಿ |
ಯತಿಹಿತದಿ ಬೋಧಿಸಿದನೆಂಬುದು ಪರಮತತ್ತ್ವಾರ್ಥ || ೧೬

ಕರ್ಮಕರ್ತಂಗದರ ಫಲವನು |
ಕರ್ಮವೇತಂದೀವುದೆನ್ನುತ |
ಕೂರ್ಮೆಯಿಂ ಜೈಮಿನಿಯು ಪೇಳ್ದುದಕರ್ಥಪರಿಕಿಸಲು ||
ಕರ್ಮಗಳ ಮಹಿಮೆಯನು ಬೋಧಿಪ |
ಮರ್ಮವಲ್ಲದೆ ಬೇರೆಯಲ್ಲಿದ |
ಕರ್ಮಠನೆ ನೀನರಿವುದೆಂದನು ಮನ್ಮಥಾರಾತಿ || ೧೭

ಪರಿಕಿಸಲ್ಕನುಮಾನಸಿದ್ಧನು |
ಪರಮನೆನ್ನುತ ಕಾಣಭುಜರುಗ |
ಳೊರೆವಮತವನುಗೆಲ್ದು ತಾನನುಮಾನಖಂಡನೆಯ ||
ವಿರಚಿಸುತಲಾ ನಿಗಮಸಿದ್ಧನು |
ಪರಮನೆಂಬುದ ನೊರೆದ ಜೈಮಿನಿ |
ವರಮುನೀಶ್ವರನಂತರಂಗವ ನರಿವರಾರೆಂದ || ೧೮

ವಿವಿಧವಹ ಕರ್ಮಗಳನೆಲ್ಲವ |
ವಿವರಿಸುವವರಪೂರ್ವಮೀಮಾಂ !
ಸವನುರಚಿಸಿದ ಮಹಿಮ ಜೈಮಿನಿ ಮುನಿಕುಲಾಧಿಪನು ||
ಅವಿರಳದವೇದಾಂತತತ್ತ್ವವ |
ನವನಿಷೇಧಿಸಲಿಲ್ಲವದರಿಂ |
ದವನು ಸಮ್ಮತಿಸಿಹನು ಪರಮಾದ್ವೈತತತ್ತ್ವವನು || ೧೯

ತನಗೆ ಗುರುವಹ ಬಾದರಾಯಣ |
ಮುನಿಯು ಪೇಳ್ದಾ ಬ್ರಹ್ಮಸೂತ್ರವ |
ಮುನಿಪ ಜೈಮಿನಿಯೊಪ್ಪನೆಂದೊಡದೆಂತು ಗುರುವರಗೆ ||
ವಿನುತ ಶಿಷ್ಯನು ತಾನಹನು ಪೇ |
ಳೆನಘನೀನದರಿಂದ ಜೈಮಿನಿ |
ಮುನಿಗೆ ವರವೇದಾಂತಸಮ್ಮತವೆಂದನಾಯತಿಪ ||

ಯತಿಪನಿಂತೆನೆಕೇಳಿಸದಸ |
ತ್ಪತಿಗಳಾವರ ವಿಶ್ವರೂಪನ |
ಸತಿಯು ಮಂಡನಮಿಶ್ರಸಹಸಮ್ಮತಿಸೆ ಮನದೊಳಗೆ ||
ಯತಿಪತಿಯು ಕೊಂಡಾಡಿ ತನ್ನಯ |
ಮತಿಯೊಳಗೆ ಸಂಶಯವು ಬಿಡದಿರ |
ಲತಿಹಿತದಿ ಮಂಡನನು ನೆನೆಯುತ್ತಿರ್ದನಾ ಮುನಿಯ ||

ಮನದೊಳೀಪರಿನೆನೆಯಲಾಕ್ಷಣ |
ಮುನಿಪ ಜೈಮಿನಿಯೈದುತಲ್ಲಿಗೆ |
ವಿನಮಿತನು ತಾನಾಗಿ ಮಂಡನಮಿಶ್ರನನು ಕುರಿತು ||
ಘನಮಹಿಮನೀಭಾಷ್ಯಕಾರನು |
ಮನಸಿಜಾಂತಕರೂಪನಹನೆಲೆ |
ತನಯ ನನ್ನಯ ಮನವಬಲ್ಲವನೀತತಿಳಿಯೆಂದ ||

ಈತನೆರೆ ಸರ್ವಜ್ಞವರವಿ |
ಖ್ಯಾತನಹನಾಗಮದಸಾರವ |
ನೀತಬಲ್ಲನು ಸಕಲಶಾಸ್ತ್ರನೀಕಪಂಡಿತನು ||
ಪೂತಚರಿತನಪಾರಮಹಿಮೋ |
ಪೇತನೀತನ ಚರಣಪಂಕೇ |
ಜಾತದಾಶ್ರಯದಿಂದ ನೀಂ ಕೃತಕೃತ್ಯನಹೆಯೆಂದ ||

ಆದಿಯುಗದೊಳು ಕಪಿಲಮುನಿ ಬಳಿ |
ಕಾದಯುಗದೊಳು ದತ್ತಮುನಿಪತಿ |
ಬಾದರಾಯಣಮುನಿಪನಾ ದ್ವಾಪರದೆ ಕಲಿಯುಗದೆ ||
ಈದಯಾಂಬುಧಿಯತಿಪನಿವರೀ
ಮೇದಿನಿಗೆ ವೇದಾಂತತತ್ವವ |
ಬೋಧಿಸಿದಗುರುವರರು ನೀಂ ತಿಳಿಯೆಂದನಾ ಮುನಿಪ || ೨೪

ಎಂದು ಬೋಧಿಸಿ ಬಳಿಕಲಾ ಬಾ |
ಲೇಂದುಮೌಳಿಯನುತ್ತಿಸಿ ವರಪೂ |
ರ್ಣೇಂದುಮುಖಿಭಾರತಿಯ ಗೌರವಿಸಿದನು ಭಕ್ತಿಯಲಿ ||
ನಿಂದನಂತರ್ಧಾನದೊಳು ತಾ |
ನಂದು ಜೈಮಿನಿಮುನಿಪ ಬಳಿಕರ |
ವಿಂದಸಂಭವನಾಗನುತಿಸಿದನಾದಿಶಂಕರನ || ೨೫

ಸುರರುಸಂಪ್ರಾರ್ಥಿಸಲು ಧರ್ಮವ |
ಪೊರೆಯಲೋಸುಗಧರೆಗೆಬಂದೀ |
ಪರಮಹಂಸಾಶ್ರಮವನೊಂದುತ ಜಗಕೆಗುರುವೆನಿಸಿ ||
ಕರುಣದಿಂದದ್ವೈತತತ್ವವ |
ಧರೆಗೆಬೋಧಿಪನೀನು ಸಾಕ್ಷಾ |
ತ್ಪರಮಶಿವನಹೆ ನಿನ್ನಚರಣದ್ವಂದ್ವಕಭಿನಮಿಪೆ || ೨೬

ನನ್ನ ಗುರುವರ ಭಟ್ಟಪಾದಂ |
ಗುನ್ನತದ ತಾರಕದ ಮಂತ್ರವ |
ನಿನ್ನಿಯಿಂಬೋಧಿಸುತಲಾತಂಗತುಲಮೋಕ್ಷವನು ||
ಸನ್ಮತನೆ ಕರುಣಿಸಿದೆಯದರಿಂ |
ದೆನ್ನಗುರುವಿಗೆ ಗುರುವುನೀನಹೆ |
ಯೆನ್ನಗುಣದೋಷಗಳನೆಣಿಸದೆ ಕಾಯಬೇಕೆಂದ || ೨೭

ಪರಮಕರುಣಾಕರನೆ ನಿನ್ನನು |
ಪರುಷವಾಕ್ಯಗಳಿಂದದಟ್ಟಿಸಿ |
ಕೆರಳಿಸುತ ನಾನೆಸಗಿದಾ ಸರ್ವಾಪರಾಧವನು ||
ಮರೆದುಪೊರೆವುದೆನುತ್ತ ಶಂಕರ |
ಚರಣಕಾನತನಾಗಿ ಭಕ್ತಿಯು |
ಭರದಿನಮಿಸಿವಿರಂಚಿ ಬೇಡುತಲಿರ್ದ್ದನಾಯತಿಯು ||

ಶಾಂತರೂಪನು ಕಂಜಭವನನು |
ಸಂತವಿಸುತುಪಚರಿಸಿ ಬಳಿಕ |
ತ್ಯಂತಸಂಭ್ರಮದಿಂದ ವಾಣೀಮುಖವ ನೋಡುತಿರೆ ||
ಕಂತುಹರನಿಂಗಿತವನರಿದಳು |
ಕಾಂತೆಭಾರತಿ ಹರುಷವಾನುತ |
ಲಿಂತುನುಡಿದಳು ತನ್ನ ಪೂರ್ವಾಪರದಸಂಗತಿಯ ||

ಲಾಲಿಪುದು ನೆರೆದಖಿಳಸಭಿಕರು |
ಲಾಲಿಸೈಯತಿವರನೆ ಬಾಲ್ಯದ |
ಲೀಲೆಯಲಿ ನಾನಿರಲು ಪಿತೃಮಂದಿರದಿ ಪೂರ್ವದಲಿ ||
ಶೀಲಗುಣ ಸಂಪನ್ನಪರಮವಿ |
ಶಾಲಮತಿ ಯೋಗೀಂದ್ರನೊಬ್ಬನು |
ಲೀಲೆಯಿಂದೈತಂದನೆನ್ನಯ ಜನಕನಿದ್ದೆಡೆಗೆ ||

ಬಂದಯೋಗಿಯನತುಲಸಂಭ್ರಮ |
ದಿಂದ ಗೌರವಿಸುತ್ತಲೆನ್ನಯ |
ತಂದೆಯಾತಗೆ ನಮಿಸಿ ದಿವ್ಯಾಸನದಿಕುಳ್ಳಿರಿಸಿ ||
ಸಂದಮಧುಪರ್ಕಾದಿ ಪೂಜೆಯ |
ನಂದಮಿಗೆ ವಿರಚಿಸುತ ತನ್ನಯ |
ನಂದನೆಯ ಮುಂದೆಂತುಬಾಳುವಳೆದನು ಪೇಳೆಂದ ||

ಕ ವರಿಗೆನಿತಾಯುಷ್ಯವವಳಿಗೆ |
ಧನನದಾರಹನೆನಿಬರಪ್ಪರು |
ಕುವರರಾಕೆಯಭಾಗ್ಯವೆನಿತೆಂಬುದನು ನೀನೊಲಿದು ||
ವಿವರಿಸುವುದೆಂದೆನುತ ದೈನ್ಯದ |
ಲವನಬೇಡಲು ಯೋಗಿವರ್ಯನು |
ವಿವರಿಸಿದನೀತೆರದೊಳೆನ್ನ ಭವಿಷ್ಯವಿಷಯವನು || ೩೨

ಈಕೆ ವಾಗ್ದೇವೀಸ್ವರೂಪಿಣಿ |
ಸೋಕಲರಿಯದು ಸಿನ್ನಮಗಳನು |
ಭೀಕರಾಂಗದ ಮೃತ್ಯುವೆಂಬುದು ಸುಪ್ರಸಿದ್ಧವಲೆ ||
ಈಕೆ ಸಹಜೋತ್ಪನ್ನ ಪರಮವಿ |
ವೇಕದಿಂ ಸರ್ವಜ್ಞೆಯಾಗುವ |
ಳೀಕೆ ವರಿಸುವ ವರನಪರಿಯನು ಕೇಳುನೀನೆಂದ || ೩೩

ಕ್ಷಿತಿಯೊಳಗೆ ಕಲಿದೋಷದಿಂ ಜನ |
ವಿತತಿಯಾವಿಧಿವಿಹಿತ ಕರ್ಮ |
ಪ್ರತತಿಯನು ವರ್ಜಿಸುತ ದುರ್ಮಾರ್ಗದಲಿನಡೆಯುತಿರೆ ||
ಕ್ಷತವನಾಂತಿಹ ವೇದಮಾರ್ಗವ |
ಪತಿಕರಿಸಲಜನೊಲಿದು ವಿಪ್ರಗೆ |
ಸುತನೆನಿಸಿ ಜನಿಸಿಹನು ಮಂಡನಮಿಶ್ರನಾಮದಲಿ || ೩೪

ಆತನನು ವರಿಸುತ್ತಲೀಕೆ ಮ |
ಹಾತಿಶಯಯಜ್ಞಗಳನೇಕವ |
ನಾತನೊಡನಾಚರಿಸಿ ಪಾತಿವ್ರತ್ಯಧರ್ಮದಲಿ ||
ಖ್ಯಾತಿಯನು ತಾಂ ತಳೆದು ಸುಗುಣ |
ವ್ರಾತದಿಂ ಶೋಭಿಸುತ ಜಗದೀಸ |
ನಾತನ ಸುಧರ್ಮವನು ರಕ್ಷಿಪಳೆಂದನಾಯೋಗಿ || ೩೫

ಇಂತಿರಲು ಜಗದೊಳಗೆ ವರವೇ |
ದಾಂತಮಾರ್ಗವು ನಶಿಸುತಿರಲಾ |
ಕಂತುಮಥನನು ಧರೆಯೊಳವತರಿಸುತ್ತ ಲೀಲೆಯಲಿ ||
ಆಂತುತುರ್ಯಾಶ್ರಮವ ಸುಜನರ |
ಸಂತತಿಯಪಾಲಿಸುತ ಯತಿವಿ |
ಶ್ರಾಂತ ಶಂಕರನೆಂಬನಾಮದಿಚರಿಪನತಿಮುದದಿ ||

ಇಂತೆಸೆವ ಸನ್ಯಾಸಿರೂಪಿನ |
ಕಂತುವೈರಿಯಕೂಡೆ ಮತಿವಿ |
ಶ್ರಾಂತನಹ ನಿನ್ನಳಿಯನಾದಿಸುತಪಜಯಪಡೆದು ||
ತಾಂ ತಿಳಿದು ತತ್ವವನು ಬಳಿಕ |
ತ್ಯಂತವೈರಾಗ್ಯದಲಿ ಪಾದಾ |
ಕ್ರಾಂತನಾಗುತ ಯತಿಗೆ ತೆರಳುವನುಳಿದು ನಿಜಗೃಹವ ||

ಕೇಳಿರೈ ಕವಿಜನರು ಯೋಗಿಯು |
ಪೇಳುತೀಪರಿಯೆನ್ನ ವರಪಿತ |
ನಾಲಯವಪೊರಮಟ್ಟು ತೆರಳಿದನಧಿಕಹರ್ಷದಲಿ ||
ಶೀಲಗುಣಸಂಪನ್ನಯೋಗಿಯು |
ಪೇಳಿದುದು ನಿಜವಾದುದಿನ್ನಾಂ |
ಪೇಳುವುದನೀವೊಲಿದು ಲಾಲಿಪುದೆಂದಳಾವಾಣೀ ||

ಯಾಯಜೂಕನಕರವಪಿಡಿದಿಹ |
ಜಾಯೆಯಾ ವರಯಜ್ಞದೀಕ್ಷಿತ |
ಕಾಯದೊಳು ತಾನರ್ಧವೆಂಬುದು ವೇದಮತವೈಸೆ ||
ನ್ಯಾಯ ಸಮ್ಮತವಾಗಿ ವಿಜಯವ |
ದೀಯತಿಪಗರ್ಧಾಂಶವಾದುದ |
ಜೇಯನಾದೊಡೆ ತನ್ನಜಯಿಸುವುದೆಂದಳಬುಜಾಕ್ಷೀ ||

ಸತಿಗೆ ನಾನರ್ಧಾಂಗಿಯಾಗಿರ |
ಲತಿಶಯದವಾದದಲಿ ಪತಿಯನು |
ಯತಿಯು ಜಯಿಸಿಲಕರ್ಧಮಾತ್ರವೆ ಜಯವು ಲಭಿಸಿದುದು ||
ಸತಿಯನೆನ್ನನು ವಾದದೊಳಗೀ |
ಯತಿಪಜಯಿಸಲು ಜಯವು ಸಂಪೂ |
ರ್ಣತೆಯನೈದುವುದೆಂದುನುಡಿದಳು ನಗುತ ಶಶಿವದನೆ || ೪೦

ಉಭಯಭಾರತಿಯೆಂದವಾಕ್ಯವ |
ನಭವಕೇಳುತಲಾಗ ವಾದ |
ಕ್ಕುಭಯವಾದಿಗಳೊಂದುಸಮನಾಗಿರಲು ರಂಜಿಪುದು ||
ಸಭೆಯೊಳಲ್ಲದೆ ಯತಿಗೆ ವಾದವಿ |
ದಿಭಗಮನೆಯೊಡನೆಂತುಸಲ್ಲುವು |
ದಭಿಮತವಿದಲ್ಲೆನಲು ಮತ್ತಿಂತೆಂದಳಾವಾಣೀ || ೪೧

ಯತಿಗೆ ವಾದವದೇಕೆ ತನ್ನಯ |
ಮತವಸಂಸ್ಥಾಪಿಸುತ ಜಗಕತಿ |
ಹಿತವನೆಸಗಲು ಯತಿಯು ವಾದಕೆನಿಂದೊಡಾಬಳಿಕ ||
ಸತಿಪುರುಷರೆಂದೆಂಬಭೇದವ |
ಮತಿಗೆತಾರದೆ ವಾದದಲಿ ನಿಜ |
ಮತವನುದ್ಧರಿಸುವುದು ವಿಹಿತವಿದೆಂದಳಾವಾಣೀ || ೪೨

ಸಮಯರಕ್ಷಣಕಾಗಿ ಸಭೆಯೊಳು |
ವಿಮಲಮಾನಸಯತಿಯು ವಾದವ |
ಕಮಲನೇತ್ರೆಯರೊಡನೆ ವಿರಚಿಸೆ ದೋಷಮೆಂತಹುದು ||
ವಿಮಲಯತಿಯಾಯಜ್ಞ್ಯವಲ್ಕ್ಯನು |
ಸುಮತಿಗಾರ್ಗಿಯಕೂಡೆ ವಾದಿಸಿ |
ದಮಲಚರಿತೆಯನೆನೆವುದೆಂದಳು ಭಾರತೀದೇವೀ || ೪೩

ಸುಲಭೆಯೆಂಬಾಸುದತಿಯೊಡನಂ |
ದಲಘುಮತಿಜನಕಕ್ಷಿತೀಶ್ವರ |
ನೊಲುಮೆಯಿಂ ಸಂವಾದಗೈದುದನೆನೆಯಬೇಕೆನಲು ||
ಜಲಜಪೀಠನ ಸತಿಯನುಡಿಗಳಿ |
ಗೊಲಿದು ಶಿರವನು ಯತಿವರೇಣ್ಯನು |
ಕುಳಿತನಾಪಂಡಿತರ ಸಮ್ಮತಿಯಿಂದವಾದಿಸಲು ||

ಸಕಲವಿದ್ಯೇಶ್ವರಿಯು ಮತ್ತಾ |
ಸಕಲವಿದ್ಯಾದಾತರಿವರಾ |
ಸಕಲಲೋಕವಪೊರೆಯಲೆಂದೇ ಮನುಜರೂಪಿನಲಿ ||
ಸಕಲಸಂಶಯಗಳ ನಿವಾರಿಸಿ |
ಸಕಲಸಿದ್ಧಾಂತಗಳ ವಿವರವ |
ಸಕಲಜನರರಿವಂತೆ ಬೋಧಿಸುತಿರ್ದರೊಲವಿನಲಿ ||

ನೆರೆನಿರರ್ಗಳವಾದ ಗಂಗಾ |
ವರನದೀಪುಣ್ಯಪ್ರವಾಹದ |
ತೆರದೊಳಾಭಾರತಿಯು ಮತ್ತಾಯತಿಯವಾದದಲಿ ||
ಭರಿತ ಯುಕ್ತಿನ್ಯಾಯ ವಾಗ್ವೈ |
ಖರಿಗಳಾಶ್ರೋತ್ರುಗಳಮನಕತಿ |
ಹರುಷವನು ಬೀರುತ್ತಲಿರ್ದವು ಬಹುಳವಿಭವದಲಿ ||

ಕೇಳು ಶೌನಕಮುನಿಪ ದಿನಹದಿ |
ನೇಳುಕಳೆವನ್ನಬರವೀಪರಿ |
ಫಾಲನೇತ್ರಗು ಭಾರತಿಗು ವಾಗ್ವಾದನಡೆಯುತಿರೆ ||
ಬಾಲಶಶಿಶೇಖರನು ನಿಜವಾ |
ಗ್ಜಾಲದಿಂ ಭಾರತಿಯಮನಕೆ ವಿ |
ಶಾಲದಾಶ್ಚರ್ಯವನು ಬೀರುತಲಿರ್ದನಡಿಗಡಿಗೆ ||

ಕಂಡಳಾವಾಗ್ದೇವಿ ಶಾಸ್ತ್ರೋ |
ದ್ದಂಡಪಂಡಿತ ಯತಿವರೇಣ್ಯನ |
ಖಂಡಚಾತುರ್ಯದಲಿ ತನ್ನಯಪೂರ್ವಪಕ್ಷಗಳ ||
ಖಂಡಿಸುತ ಸಿದ್ಧಾಂತಗೈವುದ |
ಚಂಡಕರಸಮತೇಜನಾಗಿಹ |
ದಂಡಿಯನು ತಾಂ ಗೆಲಲುಪಾಯವಕಂಡಳಾಕ್ಷಣದೆ || ೪೮

ವರಕಲಾಶಾಸ್ತ್ರದಲಿ ಯತಿಪತಿ |
ಪರಿಚಿತನು ತಾನಲ್ಲವದರಿಂ |
ನೆರೆಗೆಲುವೆನೀತನನು ತಾನೆಂದೆನುತಚಿತ್ತದಲಿ ||
ಸರಸವಾಣಿಯು ವಾಣಿ ತಿಳಿದತಿ |
ಹರುಷವಾನುತ ಬಳಿಕ ಯತಿಶೇ |
ಖರನ ಕುರಿತಿಂತೆಂದುನುಡಿದಳು ಮಧುರವಚನದಲಿ || ೪೯

ಎಲೆಯತಿಪ ನೀಪೇಳು ಕಾಮದ |
ಕಲೆಗಳೆಷ್ಟವಕೆಲ್ಲಿಯಾಶ್ರಯ |
ನೆಲಸಿಹವು ತಾವೆಲ್ಲಿ ಪುರುಷಸ್ತ್ರೀಯರಂಗೆದಲಿ ||
ಸಲೆಸಿತಾಸಿತವೆಂಬ ಪಕ್ಷಂ |
ಗಳಲಿ ವರ್ತಿಪದಿನದಿ ಕಾಮದ |
ಕಲೆಗಳೆಲ್ಲಿಹವೆಂಬುದನು ಹೇಳೆಂದಳಬುಜಾಕ್ಷೀ || ೫೦

ಕಾಲಕಾಲನು ಸತಿಯನುಡಿಗಳ |
ಕೇಳುತಾಶ್ಚರ್ಯವನು ಮನದೊಳು |
ತಾಳಿ ತನ್ನೊಳು ತಿಳಿದನಾನೀಪ್ರಶ್ನೆಗುತ್ತರವ ||
ಪೇಳದಿರಲಲ್ಪಜ್ಞನಪ್ಪೆನು |
ಪೇಳಿದೊಡೆ ಸನ್ಯಾಸಧರ್ಮಕೆ |
ಹಾಳುಹೊರುವುದು ತಾನುಪಾಯದಿ ಗೆಲಲುಬೇಕೆಂದು || ೫೧

ಎನುತಹರ ನಿಶ್ಚೈಸಿ ಬಳಿಕಾ |
ವನಿತೆಗೆಂದನು ಮಾಸದವಧಿಯು |
ತನಗೆ ಕೊಟ್ಟೊಡೆ ಮತ್ತೆಬಂದೀಪ್ರಶ್ನೆಗುತ್ತರವ ||
ಬಿನದದಿಂದೀಯುತ್ತ ನಿನ್ನಯ |
ಮನಕೆ ಸಂತಸವೀವೆಯೆನೆವಾ |
ಗ್ವನಿತೆಯನುಮೋದಿಸಲು ಸದಸಸ್ಪತಿಗಳೊಪ್ಪಿದರು ||

ವರವನಿತೆಯುತ್ತರವನಾಲಿಸಿ |
ಪರಮಸಂಭ್ರಮದಿಂದ ಶಿಷ್ಯರ |
ನೆರವಿಯಿಂದೊಡಗೂಡಿ ಕಮಲಜನಿಂದಬೀಳ್ಕೊಂಡು ||
ನೆರೆದ ಸಭಿಕರನೆಲ್ಲಮನ್ನಿಸಿ |
ಹರಿಪದದ ಮಾರ್ಗವನುಸೇರುತ |
ಸುರನುತ ಶ್ರೀಕಂಠದೇವನು ತೆರಳಿದನು ಜವದಿ ||
ಸಂಧಿ ೨೫ಕ್ಕೆ ಪದ್ಯ ೧೨೦೨ಕ್ಕೆ ಮಂಗಳ.

# ಇಪ್ಪತ್ತಾರನೆಯ ಸಂಧಿ.

ಸೂಚನೆ|| ವಿಮಲಮತಿಯತಿವರ್ಯತಾನಂ |
ದಮರಕನ ಮೃತದೇಹದೊಳು ನಿ |
ರ್ಮಮತೆಯಿಂದಿರುತಿರ್ದು ರಾಜ್ಯಂಗೈದನೊಲವಿನಲಿ ||

ಕೇಳು ಶೌನಕ ವರಸುಧಾಕರ |
ಮೌಳಿಯಾಕಮಲಜನಗೃಹವನು |
ಬೀಳುಕೊಂಡಲ್ಲಿಂದಹೊರಟನು ಗಗನಮಾರ್ಗದಲಿ ||
ಮೇಳವಿಸಿಕೊಂಡಿರಲು ಶಿಷ್ಯರ |
ಜಾಲವಾಬ್ರಹ್ಮಾಂಡವೆಲ್ಲವ |
ಲೀಲೆಯಿಂದೀಕ್ಷಿಸುತಲಿರ್ದನು ಯೋಗಶಕ್ತಿಯಲಿ ||

ನೆರೆ ಚತುರ್ದಶಭುವನವೆಲ್ಲವು |
ಕರತಲಾಮಲಕದವೊಲಿರಲಾ |
ಹರನು ಕಂಡನದೊಂದು ಕಾಡೊಳಗಮರಕಾಖ್ಯನೃಪ ||
ಮರಣವೊಂದಿರಲವನಸತಿಯರು |
ನೆರೆದು ಸುತ್ತಲು ಬಹುಳದುಃಖಾ |
ತುರದಿ ಮರುಗುತ ಬಳಸಿಕೊಂಡಿರೆ ಮೃತಕಳೇಬರವ || ೨

ಬಳಿಕಲಾಶಂಕರನು ಗಗನದಿ |
ನಿಳಿದು ಗಿರಿತುದಿಯೊಂದನೇರುತ |
ನಳಿನಪಾದನಕರೆದು ನುಡಿದನು ಮಧುರವಚನದಲಿ ||
ಎಲೆಸನಂದನ ಕೇಳು ಭೂಮಿಪ |
ತಿಲಕನಮರಕನೀಗ ತನ್ನಯ |
ಲಲನೆಯರನೊಡಗೂಡಿಬಂದನು ಬೇಂಟೆಗೆಂದೆನುತ || ೩

ಬಂದುವನದೊಳು ಮೃಗವನೇಕವ |
ಕೊಂದು ಬಳಲುತ ವೃಕ್ಷದಡಿಯಲಿ |
ನಿಂದು ಕಾಲಾಧೀನನಾದನು ವಿಧಿವಿಲಾಸದಲಿ ||
ಸುಂದರಿಯರಾಶವದಸುತ್ತಲು |
ನಿಂದು ತಮ್ಮಯ ಪತಿಯಮರಣದಿ |
ನೊಂದು ದುಃಖಿಸುತಿಹರು ಬಹುವಿಧದಿಂದಹಂಬಲಿಸಿ || ೪

ಸಂದನೃಪತಿಯದೇಹದೊಳು ನಾ |
ನಿಂದು ಪರಕಾಯಪ್ರವೇಶದ |
ಬಂಧುರದಮಾರ್ಗದಲಿ ಸೇರುತಲವನು ಮೂರ್ಛೆಯಲಿ ||
ನಿಂದು ಬಳಿಕೆಚ್ಚೆತ್ತನೆಂದೆಂ |
ಬಂದವನು ತೋರಿಸುತಲಾಪೂ |
ರ್ಣೇಂದುಮುಖಿಯರುಸಹಿತ ಪೋಗುವೆನು ರಾಜಧಾನಿಯನು || ೫

ಅಲ್ಲಿ ನಾನಿರುತಿರ್ದು ವಸುಧಾ |
ವಲ್ಲಭಾತ್ಮಜನನ್ನು ರಾಜ್ಯದಿ |
ನಿಲ್ಲಿಸುತಲಧಿರಾಜ್ಯಪಟ್ಟವಕಟ್ಟಿ ವಿಭವದಲಿ ||
ಫುಲ್ಲನಯನೆಯರೊಡನೆ ನಾನು |
ತ್ಫುಲ್ಲಬಾಣನಬಲೆಗೆ ಸಿಲುಕದೆ |
ಸಲ್ಲಲಿತವಹ ಕಾಮಕಲೆಗಳನರಿವೆನತಿಮುದದೆ || ೬

ಆವನಜನೇತ್ರೆಯರು ತೋರುವ |
ಹಾವಭಾವವಿಲಾಸವೆಲ್ಲವ |
ಭಾವಿಸುತ ಸಾಕ್ಷಿಸ್ವರೂಪದೊಳಿರ್ದು ನಾಂಬಳಿಕ ||
ಈ ವಿಪಿನಕೈತಂದು ಮತ್ತೆ ನಿ |
ಜಾವಯವಸೇರುತ್ತ ವರವಾ |
ಗ್ದೇವಿಯನು ಜಯಿಸುವೆನು ಸರ್ವಜ್ಞತ್ವವನುತೋರಿ || ೭

ವರಯತಿಪನಿಂತೆನಲು ಪಂಕಜ |
ಚರಣನತಿಭಕ್ತಿಯಲಿ ಗುರುವರ |
ಚರಣಕಾನತನಾಗಿ ಕೈಗಳಮುಗಿದು ವಿನಯದಲಿ ||
ಗುರುವೆ ನೀಂ ಸರ್ವಜ್ಞನಿನಗಾ |
ನೊರೆಯುವುದಕಸಮರ್ಥನಾಗಿಹೆ |
ಗುರುಚರಣಭಕ್ತಿಯಲಿ ತಿಳಿದುದನೊರೆವೆನೀಗೆಂದ || ೮

ಪೂರ್ವದಲಿ ಮತ್ಸ್ಯೇಂದ್ರನೆಂಬುವ |
ನೋರ್ವಯೋಗಿಯು ತನ್ನ ಶಿಷ್ಯರೊ |
ಳೋರ್ವನನು ಗೋರಕ್ಷನೆಂಬನ ಕರೆಯುತಾತನಿಗೆ ||
ಪೂರ್ವದೇಹದರಕ್ಷಣೆಯು ನೀ |
ನಿರ್ವಹಿಪುದೆಂದೆನುತ ನೇಮಿಸು |
ತೋರ್ವನೃಪತಿಯ ಮೃತಶರೀರವಪೊಕ್ಕನತಿಮುದದೆ || ೯

ಬಂದು ನೃಪತಿಯು ಮೃತಶರೀರದೆ |
ನಿಂದು ಸಿಂಹಾಸನವನೇರುತ |
ಬಂಧುರದರಾಜ್ಯವನು ಸದ್ಧರ್ಮದಲಿ ಪಾಲಿಸುತ ||
ಅಂದಮಾದಾರಾಜಧರ್ಮಕೆ |
ಕುಂದದ್ವೈತರದಂತೆ ನಿತ್ಯ |
ನಂದದಿಂ ಪ್ರಜೆಗಳನು ಸಲಹಿದನಮಳತರಯೋಗಿ || ೧೦

ಪಾಲಿಸುತ್ತಿರಲಿಂತುರಾಜ್ಯವ |
ನಾಲಸನ್ಮುನಿ ನೃಪತಿಯಂದದೆ |
ಕಾಲಕಾಲಕೆ ವೃಷ್ಟಿಯಾದುದು ಫಲಸಮೃದ್ಧಿಯನು ||
ತಾಳಿದುದು ಧರೆ ಸಕಲಸಂಪದ |
ದೇಳಿಗೆಯು ಕಂಗೊಳಿಸೆ ಸಜ್ಜನ |
ಜಾಲವತಿ ಸಂಭ್ರಮದಲಿರ್ದುದು ಪೊಗಳುತಾನೃಪನ || ೧೧

ಇಂತು ರಾಜ್ಯವು ಸಕಲಸಂಪದ |
ನಾಂತು ರಂಜಿಸೆ ಕಂಡು ಮಂತ್ರಿಗೆ |
ಳಂತರಂಗದಿ ತಿಳಿದರಾಗೆ ಮಹಾತ್ಮನಹಯೋಗಿ ||
ನಿಂತಿಹನು ಮೃತಿಯಾಂತ ಧರಣೀ |
ಕಾಂತ ದೇಹದೊಳಲ್ಲದಿರ್ದೊಡ |
ದೆಂತುಟೀಮಹಿಮೆಗಳು ಬರ್ಪವು ನೃಪತಿಗೆಂದೆನುತ || ೧೨

ಲೀಲೆಯಿಂದಿಹನೀತ ಮುಂದೆ ನೃ |
ಪಾಲನಂಗವನುಳಿದುಪೋಗೆ ವಿ |
ಶಾಲಭಾಗ್ಯಗಳನಿತು ಕಾಳಹುದೆಂದುನಿಶ್ಚೈಸಿ ||
ಬಾಲೆಯರ ಕಂದರ್ಪಸೌಖ್ಯವಿ |
ಲೋಲೆಯರ ವರರಸಿಕಜನರನು |
ಕೂಲೆಯರಮೋಳವಿಸಿ ಕಳುಹಿದರರಸನಿದ್ದೆಡೆಗೆ || ೧೩

ಬಂದುದಾನೃಪನೆಡೆಗೆ ನಾರೀ |
ವೃಂದ ನರ್ತನ ಗೀತವಾದ್ಯವ |
ನೊಂದುಗೂಡಿಸಿ ಭೂಪನಂತಃಕರಣವ್ಯಗಚಯುವ ||
ಆಂದಮೆನಿಪಾಪಾಂಗವೀಕ್ಷಣೆ |
ಯಿಂದ ಬಂಧಿಸೆ ಮೋಹಜಾಲದೊ |
ಳಂದುಸಿಲುಕಿದನರರೆ ಸಾಹಸಮೆನಿಸಿತೊವನಿತೆಯಿರ ||

ಜಾರಿ ತಗ್ಗದ ಯೋಗ ಬಲಿದುದು |
ನಾರಿಯರ ಸಂಯೋಗ ನೃಪತಿಯು |
ಮಾರುಪೋದನು ಚಂಚಲಾಕ್ಷಿಯರತುಲವಿಭ್ರಮಕೆ ||
ಮಾರಶರಕುರಿಬೆದರಿ ಭೂಪತಿ |
ನಾರಿಯರಮರೆಯೊಗುತ ಘನಶ್ರಂ |
ಗಾರಶರಧಿಯೊಳಾಳುತಿರ್ದನು ಮರೆದು ನಿಜತಪವ ||

ಇತ್ತಲೀಪರಿಯಾಗೆ ವನದೊಳ |
ಗೆತ್ತಲಾಗೋರಕ್ಷ ಗುರುವರ |
ನುತ್ತಮದದೇಹವನು ರಕ್ಷಿಸೆ ಜನಗಳನು ನಿಲಿಸಿ ||
ಪತ್ತನಂಗಳಪೊಕ್ಕು ತಾನರ |
ಸುತ್ತಲಾಮತ್ಸ್ಯೇಂದ್ರಯೋಗಿಯು |
ಮತ್ತಕಾಶಿನಿಯರಿಗೆ ಮರುಳಾಗಿರಲು ತಾನರಿದು ||

ಧರಿಸಿದನು ವೇಷವನು ತಾನಾ |
ಭರತ ವಿದ್ಯೆಯುಬಲ್ಲನೆನ್ನುತ |
ಲರಮನೆಯಪೊಗುತಲ್ಲಿಕಂಡನು ತನ್ನಗುರುವರನ ||
ಅರಿದು ಸಮಯವ ತತ್ವವಿಷಯವ |
ನೊರೆದು ವರಯೋಗಾನುಪೂರ್ವಿಯ |
ನರುಹಿ ಮರಳಿಚಲಾದುದಧಿಕಾಯಾಸ ಶಿಷ್ಯನಿಗೆ ||

ಗಮಿಸಿದೊಡೆ ವಸಿತಃದಿವಿಷಯ |
ಭ್ರಮೆಯೊಳಗೆ ನರನೊಮ್ಮೆ ಬಹುದು |
ರ್ಗಮವು ನಿರ್ಗಮವೆಂಬುದಿದು ತಾಂ ಸುಪ್ರಸಿದ್ಧವಲೆ ||
ವಿಮಲಮತಿಗಾಧೇಯ ಮೊದಲಾ |
ದಮಿತಮಹಿಮರು ವಿಷಮವಿಷಯ |
ಭ್ರಮೆಯೊಳಗೆ ನೆರೆಸಿಲುಕಿ ನೊಂದರು ಪೂರ್ವಕಾಲದಲಿ || ೧೮

ಚಾರುಮತಿಯತಿ ತನ್ನ ಸೂಕ್ಷ್ಮಶ |
ರೀರದಿಂದಾದಡೆಯು ಪರರ ಶ |
ರೀರವನು ತಾಂ ಪ್ರೊಕ್ಕು ಬಳಿಕಾದೇಹಧರ್ಮದಲಿ ||
ನಾರಿಯುರಸೇರುತ್ತ ರಮಿಪ ವಿ |
ಚಾರ ಯುಕ್ತಾಯುಕ್ತವೆಂಬುದು |
ತೋರಲರಿಯದು ತನ್ನ ಜಡಮತಿಗೆಂದನಾಶಿಷ್ಯ || ೧೯

ಕಲಿಯುಗದೆ ಯತ್ಯಾಶ್ರಮವು ತಾಂ |
ಸಲೆ ನಿಷಿದ್ಧವೆನಿಪ್ಪುದನು ನೀಂ |
ಬಲುತೆರದ ವಿಧಿವಾಕ್ಯದಿಂ ಖಂಡಿಸುತ ಯತಿತನವ ||
ನೆಲೆಗೊಳಿಸುತುದ್ಧರಿಸಿ ಕೀರ್ತಿಯ |
ತಳೆದಬಳಿಕಾಯತಿಸುಧರ್ಮವ |
ನೊಲಿದು ಪಾಲಿಸದಿರಲು ಧರ್ಮವದೆಂತುನಿಲ್ಲುವುದು || ೨೦

ಎಂದು ನುಡಿದಾಮುಖ್ಯಶಿಷ್ಯಸ |
ನಂದನನ ನುಡಿಗೇಳ್ದು ಶಂಕರ |
ಮಂದಹಾಸಮುಖಾಬ್ಜನಾಗುತ ನುಡಿದನಿಂತೆಂದು ||
ಕಂದ ನಿನ್ನುಕ್ತಿಗಳು ನಿಜವಹ |
ವಿಂದು ಪರಮಾರ್ಥವನು ನಿನಗತಿ |
ಚೆಂದದಿಂ ವಿವರಿಪೆನು ಕೇಳುವುದೆಂದನಾಯತಿಪ || ೨೧

ಆವನಿಸ್ಸಂಗಾತ್ಮನೆಂಬೀ |
ಭಾವನಾಸಂಸಿದ್ಧನಾತಗೆ |
ಭಾವಿಸಲು ದಿಟನುಲ್ಲವೀಕಾಮುಗಳು ಲೋಕದಲಿ ||
ಶ್ರೀವರನು ಗೋಪೀಕದಂಬದೊ |
ಳಾವಗಂ ಕ್ರೀಡಿಸಿದನೆಂದೆನೆ |
ದೇವವರಗಾಬ್ರಹ್ಮಚರ್ಯವು ತಪ್ಪಿತೆಂತೆಂದ ||

ಸುಲಭದಿಂ ವಜ್ರೋಲಿಯೋಗದ |
ಬಲವನಾಶ್ರಯಿಸಿರಲು ವೀರ್ಯ |
ಸ್ಖಲನೆಯಾಗುವುದಿಲ್ಲವದರಿಂ ಬ್ರಹ್ಮಚರ್ಯವಿದು ||
ಸ್ಖಲಿತವಾಗದು ಸೂಕ್ಷ್ಮದೇಹದೆ |
ಸಲೆ ಜಗನ್ಮಿಥ್ಯಾತ್ವನಿಶ್ಚಯ |
ದಲಘುಮಹಿಮಂಗೆತ್ತ ಲೇಪವು ಕರ್ಮಫಲಸಂಗ ||

ತೋರುವೀದೇಹದಲಿ ಸಾಹಂ |
ಕಾರಿಗಳು ತಾವಾದಜನರನು |
ಸೇರಬಲ್ಲವು ವಿಧಿನಿಷೇಧಗಳೆಂಬಶಾಸ್ತ್ರಗಳು ||
ಮೂರುಗುಣಗಳ ಪಥವನೊಲ್ಲದ |
ಧೀರನಿರ್ಜಿತಕಾಮರಾದರ |
ಸೇರಲರಿದಾವ್ರತವು ಮೇಣಾವ್ರತದಲೋಪಗಳು ||

ಏತಕೀಸಂಶಯವು ಕೇಳ್ಕೊ |
ಶೀತಕೀಬ್ರಾಹ್ಮಣದಿ ಪೇಳಿಹು |
ದಾತುಮನ ನೆರೆತಿಳಿದ ವರವಿಜ್ಞಾನಸಿದ್ಧನಹೆ ||
ಪೂತನನು ಸಲೆ ಸೋಂಕಲರಿಯವು |
ಪಾತಕದ ಮೇಣ್ಪುಣ್ಯಕರ್ಮ |
ದ್ಭೂತ ಫಲಗಳವೆಂದು ವಿಸ್ತರವಾಗಿ ಪಠಿಕಿಸಲು ||

ಜನಕರಾಜನನೇಕಯಜ್ಞಾವ |
ನನುವಿನಿಂ ವಿರಚಿಸಲು ಕರ್ಮ |
ಕ್ಕನುಗುಣದ ಫಲವವನಸಾರಿದುದಿಲ್ಲವೆಂಬುದನು ||
ವಿನುತವಹ ವರಕಾಣ್ವಶಾಖೋ |
ಪನಿಷತು ಮೋಕ್ಷೈತ್ರೀಯವು |
ಘನತೆಯಿಂ ಸಾರುತ್ತಲಿಹವಿವು ಸುಪ್ರಮಾಣಗಳು || ೨೬

ಪರಿಕಿಸಲು ವೇದಾಂತವಾಕ್ಯಗೆ |
ಳೊರೆವವಾವಿಜ್ಞಾನಸಿದ್ಧನ |
ಪೆರೆಯಲರಿಯವು ಪುಣ್ಯಪಾಪದಕರ್ಮಫಲವೆಂದು ||
ಗುರುಜನಂಗಳಮತವು ಮೋಕ್ಷಾ |
ಹಿರಿಯರನುಭವವೆಲ್ಲವಿದ ಪತಿ |
ಕರಿಸುತಿಹವದರಿಂದ ಕಾರಣವಿಲ್ಲ ಶಂಕಿಸಲು || ೨೭

ಒಂದುದೇಹದ ಕರಣಚಯ ಮ |
ತ್ತೊಂದುದೇಹವಸೇರಿ ಕರ್ಮವ |
ನಂದದಿಂದೆಸಗಿದೊಡೆ ಕರ್ಮದಫಲವು ತಪ್ಪುವುದೆ ||
ಎಂದೊಡಬ್ಜದಪತ್ರ ನೀರೊಳು |
ನಿಂದು ನೀರನು ಮುಟ್ಟದಿರುತಿಹ |
ಚೆಂದದಿಂ ಕರಣಕ್ಕೆ ಕರ್ಮದಲೇಪವಿಲ್ಲೆಂದ || ೨೮

ಧೀರನಹಸುಜ್ಞಾನಿ ಮೊದಲ ಶ |
ರೀರದಿಂ ಬಹುಕರ್ಮವೆಸಗಲು |
ಸೇರಲರಿಯದು ಕರ್ಮಫಲವಿದು ಸಹಜವಾದೊಡೆಯು ||
ಮೀರಲಾಗದು ಜಗದ ಶಿಷ್ಟಾ |
ಚಾರಮಾರ್ಗವನೆಂದು ರಾಜ ಶ |
ರೀರವನು ಪೊಕ್ಕಿರ್ದು ತಿಳಿವೆನು ಕಾಮುಕಲೆಗಳನು || ೨೯

ಎಂದು ತನ್ನಯ ಮುಖ್ಯಶಿಷ್ಯ ಸ|
ನಂದನಂಗರುಹುತ್ತ ಸನಿಹದ |
ಲೊಂದುದುರ್ಗಮವೆನಿಪ ಭೂಭೃದ್ವರವ ಕಾಣಿಸಲು ||
ಬಂದು ಯೋಗದಬಲದಿ ಶಿಖರದೆ |
ನಿಂದು ಬಳಿಕಾ ತನ್ನ ಶಿಷ್ಯರ |
ವೃಂದದೊಡನಿಂತೆಂದನಾಯತಿವರಕುಲಾಧಿಪನು ||

ಇತ್ತ ನೋಡೀಸ್ಥಳವ ಗಹ್ವರ |
ದೊತ್ತಿನಲಿ ವಿಸ್ತರದಬಂಡೆಯು |
ಸುತ್ತ ಪರಿಯುತ್ತಿಹುದು ನಿರ್ಮಲಜಲದತೊರೆಯೊಂದು ||
ಇತ್ತಡಿಯಫಲಭರಿತತರುಗಳ |
ವೊತ್ತದಿಂ ಬಹುಕುಸುಮನಿಚಯವ |
ಪೊತ್ತ ರಮ್ಯಲತಾವಿಶೇಷದಿ ರಾಜಿಸುತ್ತಿಹುದು ||

ಗಿರಿಯನಿಕಟದೊಳೆನ್ನ ದೇಹವ |
ಪೊರೆಯುತಿರಿ ನೀವಿಲ್ಲಿ ನಾನಾ |
ಚರಿಸಿಬರುವೆನು ತನ್ನ ಕಾರ್ಯವನೆನುತ ಶಂಕರನು ||
ಅರುಹಿ ಬಳಿಕಾಯೋಗಬಲದಿಂ |
ವರಶರೀರಬ್ರಹ್ಮರಂಧ್ರದೆ |
ಪೊರಟನಂತಃಕರಣಚಯದೊಡಗೂಡಿ ಹರುಷದಲಿ ||

ಯತಿಪನಮರಕನೆಂಬ ಭೂಪನ |
ಮೃತಶರೀರಬ್ರಹ್ಮರಂಧ್ರದೆ |
ಹಿತದಿ ಪೊಕ್ಕನು ಸೇರ್ದನಂಗೋಪಾಂಗವೀಧಿಯಲಿ ||
ಮೃತಿಯನೊಂದಿದ ತಮ್ಮ ಧರಣೀ |
ಪತಿಯೆ ಜೀವವಪಡೆದನೆನ್ನುತ |
ಲತಿಶಯದ ಸಂಭ್ರಮವತಾಳ್ದರು ಸತಿಯರಾನೃಪನ || ೩೩

ಮೃತಿಯನೊಂದಿದ ನೃಪತಿ ಗಿರಿಜಾ |
ಪತಿಯುದಯದಿಂ ಮತ್ತೆ ಜೀವವ |
ನತಿಶಯದಿ ತಾಂ ಪಡೆದನೆಂದೇ ಸಕಲಪರಿಜನರು ||
ಮತಿಯೊಳಗೆ ನಿಶ್ಚಯಿಸಿ ವರಭೂ |
ಪತಿಗೆ ವಂದಿಸುತಿರಲು ವಾದ್ಯ |
ಪ್ರತತಿ ಮೊಳಗುತಲಿರ್ದುದಾನರಪತಿಯಸಮ್ಮುಖದೆ || ೩೪

ಬಳಿಕಲಾ ಸಚಿವರುಗಳೆಲ್ಲರು |
ಕಲೆತು ಪೌರೋಹಿತರಮುಖದಿಂ |
ದೊಲಿದು ಮಂಗಳಶಾಂತಿಕರ್ಮವನೆಸಗೆ ವಿಭವದಲಿ ||
ಲಲನೆಯರನೊಡಗೊಂಡು ಭೂಪತಿ |
ತಿಲಕರಥವೇರುತ್ತ ತನ್ನಯ |
ನಿಳಯಕೈತರುತಿರ್ದನಾಪುರಜನರು ಸಂಭ್ರಮಿಸೆ || ೩೫

ವರವರೂಥದಿ ಬಂದು ತನ್ನಯ |
ಪುರವರವ ಸಂಭ್ರಮದಿ ಸೇರುತ |
ದರುಶನಕೆಬರುತಿರ್ಪ ಪೌರರ ಪರಿಜನಂಗಳನು ||
ಹರುಷಮಿಗೆ ಸಂತೈಸಿ ನರಪತಿ |
ಯರಮನೆಯಪೊಗುತಲ್ಲಿ ವರಕೇ |
ಸರಿಯಪೀಠವ ನಡರಿ ಸುರಪನತೆರದೆ ರಾಜಿಸಿದ || ೩೬

ಮೃತ್ಯುವನು ನೆರೆಗೆಲಿದ ಭೂವರ |
ನತ್ಯಧಿಕಸಂಭ್ರಮದಿ ಪುರದೊಳು |
ನಿತ್ಯದೇವೋತ್ಸವವನೆಸಗುತಲಖಿಳವಿಭವದಲಿ ||
ಭೃತ್ಯವರ್ಗಕೆ ಮುದವನೆಸಗುತ |
ನೃತ್ಯ ಗಾನಸುವಾದ್ಯ ವರಸಾ |
ಹಿತ್ಯಲೋಲುಪನಾಗಿ ಸುಖದಿಂದಿರ್ದನಾಪುರದೆ || ೩೭

ಫಾಲಲೋಚನಯುತಿಪ ಯೋಗದ |
ಲೀಲೆಯಿಂ ರಾಜ್ಯವನು ಧರ್ಮದಿ |
ಪಾಲಿಸುತ್ತಿರೆ ಧರೆಯು ತೃಣಜಲಫಲಸಮೃದ್ಧಿಯನು ||
ತಾಳುವಂದದಿ ಮಳೆಯುಬೆಳೆಗಳು |
ಕಾಲಕಾಲಕೆ ಲಭಿಸಿ ಸಜ್ಜನ |
ಜಾಲ ನೆರೆಸಂಭ್ರಮಿಸುತಿರ್ದುದು ಪೊಗಳುತಾನೃಪನ ||

ಸಕಲಧರ್ಮವನರಿದು ಭೂಪತಿ |
ಸಕಲವರ್ಣಾಶ್ರಮದಧರ್ಮವ |
ಸುಕರಮೆನೆ ಪಾಲಿಸುತಲೊಲವಿಂ ಪ್ರಜೆಗಳನು ಪೊರೆಯೆ ||
ವಿಕಳಮತಿಗಳು ಸುಜನರಾದರು |
ಸಕಲವಿಧಸೌಖ್ಯವು ಸುಭಿಕ್ಷವು |
ಸಕಲಜನಕಾರೋಗ್ಯವೆರ್ಚಿತು ರಾಮರಾಜ್ಯದೊಲು ||

ಆಧಿಗಳಭಯವಿಲ್ಲ ದುರ್ಜನ |
ಬಾಧೆ ಸಜ್ಜನಕಿಲ್ಲ ದುರ್ಭಿ |
ಕ್ಷಾದಿಗಳು ತಲೆದೋರಲಮ್ಮವು ನೃಪನರಾಜ್ಯದಲಿ ||
ವ್ಯಾಧಿಗಳು ಬಾಧಿಸವು ಜನಸಂ |
ಮೋದವೆರ್ಚಿತು ಸಕಲದೆಶೆಯೊಳು |
ಭೂದವಾಗ್ರಣಿಯೊಲಿದು ರಾಜ್ಯಂಗೈಯೆ ವಿಭವದಲಿ ||

ಈತೆರದಿ ಭೂಮಿಾಶ ಧರ್ಮದ |
ರೀತಿಯಲಿ ರಾಜ್ಯವನು ಸಂತತ |
ಭೂತಳಾಧಿಪಪಾಲಿಸುತ್ತಿರಲಖಿಳವಿಭವದಲಿ ||
ಖ್ಯಾತಿಯನು ತಳೆದಿರ್ಪ ಮಂತ್ರಿ
ವ್ರಾತವೊಂದೆಡೆಯಲ್ಲಿ ಸೇರುತ |
ಲೀತೆರದಲಾಲೋಚಿಸಿದರಂದೊಲಿದು ತಮ್ಮೊಳಗೆ ||

ನ್ಯುತಿಯನಾಂತಿರ್ದೆವ್ಮೆ ಭೂಮೀ |
ಪತಿಯು ಜೀವವಪಡೆದ ಮತ್ತೀ |
ಸ್ಥಿತಿಯು ಬಹುಳಾಶ್ಚರ್ಯವಾಗಿಹುದ್ಯೆಸೆ ಭಾವಿಸಲು ||
ಕ್ಷಿತಿಪತಿಯ ಕುಶಲತೆಯು ಪೂರ್ವ |
ಸ್ಥಿತಿಯುಪೋಲದು ಮತಿಯು ವರಗೀ |
ಸ್ತುತಿಯ ಮತಿಗೆಣೆಯಾಗಿ ರಾಜಿಸುತಿಹುದು ಭೂಪತಿಯ || ೪೨

ಮರಣವನು ಕೆಡೆಯೊದೆದ ಬಳಿಕೀ |
ನರಪತಿಯರಾಜ್ಯದಲಿ ಗೋವ್ಗಳ |
ನೆರಪಿಯಧಿಕಕ್ಷೀರವಂ ಕರೆಯುತ್ತ ರಾಜಿಪುದು ||
ಧರೆಯು ಸಸ್ಯಸಮೃದ್ಧಿಯಿಂದಲೆ |
ತರುಗಳೆಲ್ಲವು ಪುಷ್ಪಫಲದಿಂ |
ಭರಿತವಾಗುತ ಸಾರ್ವಕಾಲದಿ ರಾಜಿಸುತ್ತಿಹವು || ೪೩

ನ್ಯಾಯಧರ್ಮದ ನಿರ್ಣಯದೊಳಾ |
ತೋಯಜಾಕ್ಷನಪೋಲ್ವನೆಮ್ಮೀ |
ರಾಯನೀತನ ಸುಗುಣನಿಕರಮಪೂರ್ವವಾಗಿಹುದು ||
ತಾಯಿ ಮಕ್ಕಳ ಪೊರೆವತೆರದಿಂ |
ದೀಯಶೇಷಪ್ರಜೆಯ ವರಕಾಂ |
ತೇಯನಂದದಿ ಪಾಲಿಸುತ್ತಿಹನೀತ ಕರುಣದಲಿ || ೪೪

ಧರೆಯಿದುವೆ ವರರಾಮರಾಜ್ಯಕೆ |
ಸರಿಯೆನಿಸಿಕೊಂಡಿಹುದು ಪಾಪದ |
ನೆರವಿಯಹ ಕಲಿಯುಗವು ಕೃತಯುಗಧರ್ಮವನುಪಡೆದು ||
ನೆರೆವಿರಾಜಿಸುತಿಹುದು ಕಾಲಕೆ |
ನರಪತಿಯು ಕಾರಣನದೆಂಬೀ |
ಹಿರಿಯರುಕ್ತಿಗಳಂತೆ ನಮ್ಮೀನೃಪನಧರ್ಮದಲಿ || ೪೫

ನರಪತಿಯ ಕರಣಗಳು ಪೂರ್ವದ |
ಪರಿಯಪೋಲುವುದಿಲ್ಲವೀತನು |
ಮರಣ ಮುಖದಿಂ ಬದುಕಿಬಂದಾಬಳಿಕಲೀತನಲಿ ||
ಪರಮತೇಜವು ಸುಪ್ರಭಾವವು |
ಭರಿತವಾಗಿಹವಿದಕೆ ಕಾರಣ |
ಕರಣನಿಚಯದ ಭೇದವೆಂಬುದೆ ಪರಮಸಿದ್ಧಾಂತ ||

ಮರಣವಡಸಿರಲಮರಕಾಖ್ಯನ |
ವರಶರೀರವ ಪುಗುತಲಾರೋ |
ಪರಮಯೋಗಿಶ್ರೇಷ್ಠನುರುತರ ಲೀಲೆಯಲಿಸಿಂದು ||
ಧರೆಯ ಪಾಲಿಸುತಿಹನಿದಲ್ಲದೆ |
ಮರಣವಡಸಿದನೃಪನು ಬದುಕುವ |
ಪರಿಯು ದಿಟವಲ್ಲೆಂದು ನಿಶ್ಚೈಸಿದರು ಮಂತ್ರಿಗಳು ||

ಇಂತು ಪರಕಾಯಪ್ರವೇಶದಿ |
ನಿಂತ ಯೋಗಿಯು ಪೂರ್ವದೇಹವ |
ಸಂತಸದಿ ತಾಂ ಪುಗಲು ನಮ್ಮೀಧರೆಯಸಂಪದಕೆ ||
ಅಂತವಹುದದರಿಂದ ವರ ವಿ |
ಕ್ರಾಂತ ಯೋಗಿಯದೇಹಕಾವ |
ತ್ಯಂತಸಾಹಸದಿಂ ವಿನಾಶವನೆಸಗಬೇಕೆನುತ ||

ಚರರ ಕರೆದರು ನಮ್ಮದೇಶದೊ |
ಳರಸುತಿಹುದಾವಪ್ರದೇಶದಿ |
ನರಕುಣಪಗಳೆನಿತು ದೊರೆತರು ಸುಡುವುದವನೆನುತ ||
ನಿರವಿಸಲು ಮಂತ್ರಿಗಳು ಬಳಿಕಾ |
ಚರರದೇಕ್ರಮದಿಂದ ಶವಗಳ |
ನರಸಿ ದೊರೆತುದ ಸುಡುತಲಿರ್ದರನಾತ್ಯರಾಜ್ಞೆಯಲಿ ||

ರಾಜಗೃಹದೊಳಗಿತ್ತಲಮರಕ |
ರಾಜ ತನ್ನಯ ಮಗನಿಗೊಲಿದಾ |
ರಾಜಪದವಿಯನಿತ್ತು ಸಚಿವೋತ್ತಮರ ತಾಂ ಕರೆಸಿ ||
ರಾಜಕಾರ್ಯವ ವಹಿಸಿ ತಾನಾ |
ರಾಜವದನೆಯರೊಡನೆ ಸುಖದಿಂ |
ರಾಜಿಸುತಲಿರುತಿರ್ದನಂತಃಪುರದ ವಿಭವದಲಿ || ೫೦

ಆ ವನಜವದನೆಯರು ತೋರುವ |
ಹಾವಭಾವವಿಲಾಸ ಬಿಬ್ಬೋಕ |
ಠಾವಳಿಯ ಭಾವಿಸುತ ಕೇವಲಸಾಕ್ಷಿರೂಪಿನಲಿ ||
ಆ ವಿಮಲ ಸುಬ್ರಹ್ಮಚರ್ಯವ |
ನೋವಿಕೊಂಡಿರುತಿರ್ದನಾವರ |
ದೇವವಂದಿತಚರಣಶಂಕರ ನೃಪತಿರೂಪಿನಲಿ || ೫೧

ಎಲ್ಲಿರವ್ಯೋದ್ಯಾನ ಸರಸಿಗ |
ಳೆಲ್ಲಿ ಪುಷ್ಪಲತಾಗೃಹಂಗಳ |
ವೆಲ್ಲಿ ಶಶಿಶಾಲಾಪ್ರದೇಶಗಳೆಲ್ಲಿ ಕೌಮುದಿಯು ||
ಅಲ್ಲಿಗಲ್ಲಿಗೆ ಗಮಿಸಿ ಹಸಿತೋ |
ತ್ಫುಲ್ಲವದನೆಯರೊಡನೆ ಭೂಪತಿ |
ಯುಲ್ಲಸಿತನಾಗುತ್ತ ವಿಹರಿಸುತಿರ್ದನುತ್ಸವದೆ || ೫೨

ವಾಸುದೇವನು ಗೋಪಿಯರ ಸಹ |
ವಾಸದೊಳಗಿರುತಿರ್ದನೆಂದೇ |
ಭಾಸನಾಗುತಲೂರ್ಧ್ವರೇತಸನಾಗಿ ಸಂತತವು ||
ಭಾಸುರದ ಸುಬ್ರಹ್ಮಚರ್ಯವ |
ಲೇಸುಮಿಗೆ ಪೊರೆದಂತೆ ನರಪತಿ |
ವಾಸವನು ಸುಬ್ರಹ್ಮಚರ್ಯವ ರಕ್ಷಿಸುತಲಿರ್ದ || ೫೩

ಕಾಂತೆಯರು ತಾವೆಂತು ಲಕ್ಷ್ಮೀ |
ಕಾಂತಪದಸಂಸ್ಪರ್ಶಮಾತ್ರದಿ |
ಕಂತು ಸುಖಸಂತೃಪ್ತಮಾನಸರಾದರಾತೆರಂದೆ ||
ಶಾಂತಮಾನಸನಾದ ವರ ವಿ |
ಕ್ರಾಂತ ಭೂಪನ ಕಾಣುತಾತನ |
ಕಾಂತೆಯರು ಸಲೆತೃಪ್ತಿಯಾಂತರು ಕಂತುಕೇಳಿಯಲಿ ||

ಈ ಪರಿಯೊಳಾಭೂಪ ದೇಹ |
ವ್ಯಾಪಕನು ತಾನಾಗಿ ಯತಿಕುಲ |
ದೀಪನಾಸುದತಿಯರ ಕಾಮುಕಲಾಪಚೇಷ್ಟೆಗಳ ||
ಲೇಪವಿಲ್ಲದೆ ಕಾಮುಕಲೆಗಳ |
ರೂಪಮಾತ್ರದೊಳರಿತು ಸದಸ |
ದ್ರೂಪನಂದದೆ ಸಕಲಚೇಷ್ಟೆಗೆ ಸಾಕ್ಷಿಯಾಗಿರ್ದ ||

ವರಮುನಿಪ ವಾತ್ಸ್ಯಾಯನನು ನೆರೆ |
ವಿರಚಿಸಿದ ವರಕಾಮಸೂತ್ರದ |
ಸುರುಚಿರದ ಶೃಂಗಾರರಸಪೂರಿತದಭಾಷ್ಯವನು ||
ಪರಿಕಿಸುತ ಶೃಂಗಾರರಸದಿಂ |
ಭರಿತಮಾದಾಗ್ರಂಥಗಳ ತಾಂ |
ವಿರಚಿಸಿದನಂದೊಲಿದು ನೃಪವರರೂಪನಾಯತಿಪ ||

ಕಾಮಶಾಸ್ತ್ರವದಾದಿಯಾಗು |
ದ್ದಾಮ ವರವೇದಾಂತಶಾಸ್ತ್ರವ |
ನಾ ಮಹಾಪರಮಾರ್ಥದೊಳಗೆ ಸಮನ್ವಯವಗೈದು ||
ಧಾಮನಿಧಿ ಭೂಮಿಪನು ನೆರೆ ಸಿ |
ಸ್ಕಾಮಮಾನಸನಾಗಿ ಸಂತತ |
ಕಾಮಿನೀಜನದೊಡನೆ ವಿಹರಿಸುತಿರ್ದನೊಲವಿನಲಿ ||

ಇಂತು ಭೂಪನ ವರಶರೀರದೆ |
ನಿಂತು ತಾನಾಕಾಮುಕಲೆಗಳ |
ನಂತವನು ಭಾವಿಸುತ ನೃಪ ಕಾರ್ಯದಲಿ ವರ್ತಿಸುತ ||
ಸಂತಸಂಗೊಳಿಸುತ್ತ ಭೂಪನ |
ಕಾಂತೆಯರ ನೆರೆಪೊರೆಯುತಿರ್ದನು |
ಸಂತತಂ ಶ್ರೀಕಂಠದೇವನ ಪಾರಕರುಣದಲಿ || ೫೮

ಸಂಧಿ ೨೬ಕ್ಕೆ ಪದ್ಯ ೧೨ ೦ಕ್ಕೆ ಮಂಗಳ.

# ಇಪ್ಪತ್ತೇಳನೆಯ ಸಂಧಿ.

ಸೂಚನೆ|| ನರಪತಿತ್ವವನುಳಿದು ಪೂರ್ವದ |
ವರಶರೀರವಪೊಕ್ಕು ಮುದದಿಂ |
ಪರಮಯತಿಯೈದಿದನು ಮಂಡನಮಿಶ್ರಮಂದಿರಕೆ ||

ಕೇಳು ಮುನಿಪತಿ ಯತಿಪಸೀಪರಿ |
ಲೀಲೆಯಿಂದಿರಲಿತ್ತಲತ್ತಲು |
ಶೈಲ ಶಿಖರದೊಳಿರ್ದ ಶಿಷ್ಯರು ಗುರುಶರೀರವನು ||
ಪಾಲಿಸುತಲಿರುತಿರ್ದು ತಿಂಗಳ |
ಕಾಲಕಳೆಯಲು ಬರವಕಾಣದೆ |
ತಾಳಿದತಿಚಿಂತೆಯಲಿ ಮರುಗುತಲಿರ್ದರಡಿಗಡಿಗೆ || ೧

ಪರಮಕರುಣಾವನಧಿ ಶಂಕರ |
ಗುರುವು ನಮ್ಮನು ತೊರೆದದೆಲ್ಲಿಗೆ |
ತೆರಳಿದನೊ ಗುರುಕೃಪೆಯು ನಮಗತಿದೂರವಾದುದಲೆ ||
ಅರಸುವೆವು ನಾವೆಲ್ಲಿಯಾತನ |
ಚರಣಪಂಕಜ ದರ್ಶನಾಮೃತ |
ದೊರೆವುದೆಂತೆಮಗೆನುತ ಮರುಗಿತು ಶಿಷ್ಯ ಸಂದೋಹ || ೨

ಇಂತು ತನ್ನ ಸತೀರ್ಥ್ಯರೆಲ್ಲರು |
ಚಿಂತಿಸುತ್ತಿರೆ ನಿಜವನರಿತಿಹ |
ಕಂತುಪಿತನಂಶಜ ಸನಂದನನಾಗಲವದಿರಸು ||
ಸಂತವಿಸಿ ಗುರುವರನ ನಿಜ ವೃ |
ತ್ತಾಂತವನು ತಾನವರಿಗೆರುಹದ |
ಲಿಂತುನುಡಿದನು ಮನದದುಗುಡವಬಿಡಿಸಿ ಕರುಣದಲಿ || ೩

ಮರುಗಿ ಫಲವೇನಹುದು ಕೇಳಿರಿ |
ಗುರುವರನದೇಹವನು ರಕ್ಷಿಸು |
ತಿರಲಿ ಗಿರಿಶೃಂಗದಲಿ ಕೆಲಬರು ಗುರುವನರಸುವೊಡೆ ||
ತೆರಳಿ ಕೆಲಬರು ಬರಲಿ ಜನಗಳ |
ನೆರವಿಯಿಹನಗರಪ್ರದೇಶದೊ |
ಳರಸಿಬಹೆವಾವೆನುತಲೊಡಬಡಿಸಿದನು ಸಕಲರನು || ೪

ಬಳಿಕಲಾಜನನಿವಹ ತಮಗಾ |
ಜಲಜಪಾದನು ಪೇಳ್ದತೆರದೊಳು |
ಕೆಲರು ನಿಂದರು ಗುರುಕಳೇವರರಕ್ಷಣಾರ್ಥದಲಿ ||
ಉಳಿದರಂಭೋಜಾತಪಾದನ |
ಬಳಿಪಿಡಿದು ನಡೆತರುತಲಿರ್ದರು |
ಹಲವುಪತ್ತನಗಳಲಿ ಹುಡುಕುತಲಾದಿಶಂಕರನ || ೫

ಅಲ್ಲಿಗಲ್ಲಿಗೆ ದೊರೆವಪುರಗಳ |
ನೆಲ್ಲ ಶೋಧಿಸಿ ಗುರುವರೇಣ್ಯನ |
ಸೊಲ್ಲಕಾಣದೆ ವಿಪುಲಚಿಂತಾಕ್ರಾಂತಮಾನಸರು ||
ನಿಲ್ಲದೈತಂದಮರಕಾಖ್ಯ ನೃ |
ಪಲ್ಲಭನ ಪುರಕ್ಕೈದಿ ಧರಣೀ |
ವಲ್ಲಭನು ಮೃತಿಯಾಂತು ಬದುಕಿದಕಥೆಯ ಕೇಳಿದರು || ೬

ಒಂದುತಿಂಗಳಹಿಂದೆ ನೃಪತಿಯು |
ಹೊಂದಿದನು ಮರಣವನು ವರ ಬಾ |
ಲೇಂದುಮೌಳಿಯ ಕರುಣದಿಂದಲಿ ಮತ್ತೆಬದುಕಿದನು ||
ಅಂದಿನಿಂದೀರಾಜ್ಯ ದಶರಥ |
ನಂದನನರಾಜ್ಯನನು ಪೋಲ್ದಿಹು |
ದೆಂದು ಪುರಜನ ಪೊಗಳುತಿರ್ದರು ನೆರವಿನೆರವಿಯಲಿ || ೭

ಸತ್ಯಸಂಧನೆನಿಪ್ಪ ನೃಪತಿಯು |
ಮೃತ್ಯುವನು ನೆರೆಗೆಲಿದ ಬಳಿಕೀ |
ನೃತ್ಯಗಾನವಿನೋದ ಮೊದಲಾದಮಿತಕಲೆಗಳಲಿ ||
ಅತ್ಯಧಿಕ ಸಂಪ್ರೀತಿಯಾಂತಾ |
ಮಾತ್ಯರಲಿ ರಾಜ್ಯವನು ವಹಿಸುತ |
ನಿತ್ಯವಂತಃಪುರದೆ ಸುಖಿಸುವನೆಂದರಾ ಜನರು || ೮

ಸಂತಸದಿ ನೃಪವರನ ಪುರಜನ |
ರಿಂತುಪೊಗಳುತಲಿರಲು ಕೇಳ್ದಾ |
ಕಂತುಪಿತನಂಶಜ ಸನಂದನನಾಗಸಂಭ್ರಮಿಸಿ ||
ಅಂತರಂಗದೊಳರಿದ ನಾಕಾ |
ಲಾಂತಕನು ಲೀಲೆಯಲಿ ವರ ಭೂ |
ಕಾಂತನಾಗಿಹನಿದಕೆ ಸಂಶಯವಿಲ್ಲ ದಿಟವೆಂದು || ೯

ಕರೆಸಿದನು ಬಳಿಕಖಿಳಶಿಷ್ಯರ |
ನೆರವಿಯನು ಗಾಯಕರವೇಷವ |
ಧರಿಸಿ ತತ್ಸಾಧನಸುವಸ್ತುವನೆಲ್ಲ ಮೇಳವಿಸಿ ||
ಅರಮನೆಗೆ ನಡೆತಂದು ಗಾಯಕ |
ನೆರವಿ ಬಂದಿಹುದೆಂಬವಾರ್ತೆಯ |
ನರುಹಿಸುತ ನೃಪನಾಜ್ಞೆಪಡೆದಾಸ್ಥಾನಕೈತಂದ || ೧೦

ಸುರುಚಿರದ ರತ್ನಗಳಲೆಸಗಿದ |
ಪರಿಪರಿಯ ಶೃಂಗಾರದಿಂದಾ |
ಸುರಪತಿಯ ಸಭೆಯಂತೆ ಮೆರೆದುದು ರಾಜನಾಸ್ಥಾನ ||
ಮೆರೆವ ತಾರಾನಿವಹಮಧ್ಯ |
ಸ್ಫುರಿತ ಪೂರ್ಣಶಶಾಂಕನಂದದೊ |
ಳರಸನಿರ್ದನು ಸಿಂಹಪೀಠದೆ ತರುಣಿಯರನಡುವೆ ||

ಬಂದು ನೃಪತಿಗೆ ನಮಿಸಿ ಬಳಿಕರ |
ವಿಂದಪಾದನು ನೃಪನನೇಮದಿ |
ಮುಂದಿಸಹ ಕುಳ್ಳಿರ್ದನುಚಿತಾಸನದಿ ಹರ್ಷದಲಿ ||
ಇಂದುಮೌಳಿಯತೆರದಿ ಶಾಂತತೆ |
ಯೊಂದಿ ರಾಜನು ರಾಜಿಸುತ್ತಿರ |
ಲಂದು ತಿಳಿದನು ಯತಿಯಲೀಲೆಯಿದೆಂದು ಮನದೊಳಗೆ ||

ಬಳಿಕಲವನೀಪತಿಯನೇಮವ |
ತಳೆದು ಗಾನಾರಂಭಗೈದಾ |
ನಳಿನಪಾದನು ಕೋಮಲಿತಶಾರೀರರಂಜಿಸಲು ||
ಒಲಿದು ರಾಗಾಲಾಪಗೈಯುತ |
ಲಲಿತ ಮೂರ್ಛನೆಗಳಲಿ ಸುಖಮಯ |
ಜಲಧಿಯಲಿ ಮುಳುಗಿಸಿದನಂದಾಸಭ್ಯರೆಲ್ಲರನು ||

ಸುರುಚಿರದ ಸಪ್ತಸ್ವರಂಗಳ |
ಸರಿಗಮಪಧನಿಗಳಲಿ ತೋರುತ |
ಪರಿಪರಿಯ ತಾಳಪ್ರಭೇದದಗತಿಯ ವಿರಚಿಸುತ ||
ಅರಸನಿಂಗಿತವರಿತು ಪಾಡುತ |
ನೆರೆದ ಸಭ್ಯರನೆಲ್ಲ ಸಲೆ ಮೈ |
ಮರೆಸಿದನು ಗಾನದಲಿ ಸಾರಸ ಚರಣನಂದೊಲಿದು ||

ಮೆರೆಯುತಿಹಸಪ್ತಸ್ವರಂಗಳ |
ಉರುತರದಷಡ್ಜವು ಸುಮಧ್ಯಮ |
ಸುರುಲಿವ ಗಾಂಧಾರವೆಂಬೀಸ್ವರವು ಮೂರರಲಿ ||
ಅರಿಯೆ ನಂದಾನರ್ತಷಡ್ಜದೆ |
ಮೆರೆವಜೀಮೂತಕವು ಮಧ್ಯಮ |
ಸರದೆ ಗಾಂಧಾರದೆ ಸುಭದ್ರಗ್ರಾಮಮೂರಹವು || ೧೫

ಅಂದವೆನಿಪೀಗ್ರಾಮಕದೊಳೊಂ |
ದೊಂದರೊಳಗೇಳೇಳುಮೂರ್ಛನೆ |
ಸಂದಿಹವು ಮೂರ್ಛನೆಗಳಿಪ್ಪತ್ತೊಂದುಜಗವರಿಯೆ ||
ಸಂದರಾಗ ವಿಶೇಷಮೂರ್ಛನೆ |
ಯಿಂದಕೂಡಿಹತೆರದೆಪಾಡಿ ಸ |
ನಂದನನು ಸೆಳೆಯುತ್ತಲಿರ್ದನಃ ಚಿತ್ತವನು ನೃಪನ || ೧೬

ವಿರಹಿಗಳು ಷಟ್ಚರಣನಿಚಯ |
ಕ್ಕೊರೆವತೆರದಿಂ ಗೀತವಾಕ್ಯವ |
ವಿರಚಿಸುತ ಧ್ವನ್ಯರ್ಥದಿಂದನ್ಯಾಪದೇಶದಲಿ ||
ಪರಿಕಿಸಲು ತತ್ವಮಸಿ ಮೊದಲಾ |
ದುರುತರದ ವೇದಾಂತವಾಕ್ಯವು |
ನರಪಗರಿವಹತೆರದೆ ಪಾಡಿದನಾಸನಂದನನು || ೧೭

ಸುಮರಸಾಸ್ವಾದನವಿಲೋಲ |
ಭ್ರಮರ ಸೀಶ್ರೈಲಾಗ್ರದಲ್ಲಿಹ |
ವಿಮಲತರಭವದೀಯಗೇಹವನುಳಿದು ಬಂದೀಗ ||
ಭ್ರಮಿಸುತಿರುತಿಹೆ ನಿನ್ನಗೇಹವ |
ಮಮತೆಯಿಂಕಾದಿರ್ಪ ಮಧುಕರ |
ಸಮಿತಿ ತೊಳಲುತಲಿಹುದು ನಿನ್ನುವನರಸಿ ವಿಭ್ರಮಿಸಿ || ೧೮

ಮಿಂಚಿನಂದದೆ ತೋರಿಹಾರುವ |
ಪಂಚಶರಕಲೆಗಳನು ನೀನೆರೆ |
ಸಂಚಿಸುವ ಕಾರ್ಯಾರ್ಥದಿಂದ್ವೈತಂದು ವಿಹರಿಸುತ ||
ಮುಂಚಿನಾಗೇಹವನು ಮರೆದತಿ |
ವಂಚಿಸಿದೆ ನೀನೆಮ್ಮನೆಂತೆಲೆ |
ಪಂಚಜನಮುಖ ಜಗದೊಳತ್ಯಾಶ್ಚರ್ಯಮಾದುದಿದು || ೧೯

ಪರ್ವಶಶಿಮುಖಕೇಳು ಪೂರ್ವದ |
ಸರ್ವವನು ನೀಮರೆದಪೂರ್ವದ |
ಗರ್ವದಿಂ ಮೆರೆದಿಹುದು ಯುಕ್ತಮಿದಲ್ಲಪರಿಕಿಸಲು ||
ಸರ್ವಮುಖದಿಂದೆಮ್ಮನುಡಿಗಳ |
ಸರ್ವಹಿತವೆನೆಕೇಳ್ದು ನೀನೆರೆ |
ಸರ್ವಕುತ್ತಮವೆನಿಪ ಪರವಂಸ್ಮರಿಪುದಸ್ಮರನೆ || ೨೦

ಆವುದಪರಮುಗಂಧಮವ್ಯಯ |
ಮಾವುದರಸಮನಾದ್ಯನಂತಮ |
ದಾವುದಸ್ಪೃಶ ಮೃತ್ಯುಮುಖದಿಂದೂರವಹುದೆಂದು ||
ಕೋವಿದರು ವರನಿಗಮಮುಖದಿಂ |
ಭಾವಿಸುತ್ತಿಹರಾತ್ಮರೂಪದೊ |
ಳಾವಿಗಡವೆಂದೆನಿಪ ತತ್ವಂತ್ವಮಸಿರಾಜೇಂದ್ರ ||

ಅನ್ನಮಯವೆಂದೆನಿಪಕೋಶದೆ |
ಸನ್ನಿಹಿತಮಾತತ್ವಮೆನ್ನುತ |
ಮುನ್ನತೋರುತ ಬಳಿಕ ತತ್ಕೋಶದೊಳನಿತ್ಯತೆಯು ||
ಸನ್ನಿಯಿಂ ತಾಂತೋರೆ ಬಳಿಕ ತ |
ದನ್ನಮಲ್ಲೆಂದೆನಿಸಿತೋರುವ |
ಭಿನ್ನ ಸುರುಚಿರ ಪರಮತತ್ವಂತ್ವಮಸಿರಾಜೇಂದ್ರ || ೨೨

ಪ್ರಾಣಮಯವೆಂದೆನಿಸಿ ಬಳಿಕಾ |
ಪ್ರಾಣಮಯಕೋಶದೆ ಜಡತ್ವವ |
ಜಾಣತನದಿಂದರಿತಬಳಿಕಾಕೋಶವಲ್ಲೆನಿಸಿ ||
ಊಣಯವನಾವಗೆಲು ಪೊರ್ದದ |
ಜಾಣರೂಹೆಗೆ ಸಿಲುಕದಿರ್ಪ |
ಕ್ಷೇಣ ಪರಮಬ್ರಹ್ಮತತ್ವಂತ್ವಮಸಿರಾಜೇಂದ್ರ || ೨೩

ವರಮನೋಮಯನಾತ್ಮನೆಂದೇ |
ಭರದಿ ತೋರಿ ತದೀಯಮನಕಾ |
ವರಿಸಿಕೊಳಲು ವಿಕಾರ ಮನತಾನಾತ್ಮನಲ್ಲೆನಿಪ ||
ಅರಿವುತೋರಲದಾವವಸ್ತುವ |
ಪರಿಣತರು ತಮ್ಮೊಳಗೆತಾವ್ನರಿ |
ಯರಿವರಾಪರತರಸುತತ್ವಂತ್ವಮಸಿರಾಜೇಂದ್ರ || ೨೪

ಪರಿಕಿಸಲ್ವಿಜ್ಞಾನಮಯ ನಾ |
ಪರಮನೆನ್ನುತ ತೋರಿ ಬಳಿಕಾ |
ಪರಮವಿಜ್ಞಾನದಲಿ ವಿಲಯಾವಸ್ಥೆಯನುಕಂಡು ||
ಪರಮನಾಕೋಶಸ್ವರೂಪದೆ |
ಬೆರೆವನಲ್ಲೆಂದೆನುತಲಾಬುಧ |
ವರರುಭಾವಿಪ ದಿವ್ಯತತ್ವಂತ್ವಮಸಿರಾಜೇಂದ್ರ || ೨೫

ಹೃದಯದೊಳಗಾನಂದಮಯನೆಂ |
ದುದಿತವಾಗುತ ಮತ್ತೆಯಾನಂ |
ದದಲಿಭಾಸಿತಮಪ್ಪಕಾದಾಚಿತ್ಕತೆಯಕಂಡು ||
ಹದನನರಿದಾನಂದಮಯನಾ |
ಸದಮಲನು ತಾನೆಲ್ಲವೆನ್ನುತ |
ಬುಧರು ಭಾವಿಪ ವಿಮಲತತ್ವಂತ್ವಮಸಿರಾಜೇಂದ್ರ || ೨೬

ತೋರಿದಂಡದೆ ವಿಷಯಮಾರ್ಗದೆ |
ಸಾರುವಿಂದ್ರಿಯಗಡಣವೆಂಬೀ |
ವಾರುವಂಗಳ ದೋಷದರ್ಶನವೆಂಬಕಶೆಯಿಂದ ||
ಧೀರರಾಘಾತಿಸುತ ಬಂಧಿಸಿ |
ತೋರುವರು ತಾವಾವಶಂಕುವಿ |
ಗಾರಯಿಲಿಕಾ ಪರಮತತ್ವಂತ್ವಮಸಿರಾಜೇಂದ್ರ || ೨೭

ಭ್ರಮಿಸುವಿಂದ್ರಿಯನಿಕರ ಚೇಷ್ಟಾ |
ಕ್ರಮದ ಜಾಗ್ರದವಸ್ಥೆಯೊಳು ಮೇ |
ಣಮಿತಕರಣವಿಕಾರವೆಂಬೀ ಸ್ವಪ್ನವೀಧಿಯುಲಿ ||
ತಮವನಳಿದ ಸುಷುಪ್ತಿಯೊಳಗಾ |
ಸುಮನಿವಹವನುತಾಳ್ದ ಸೂತ್ರ |
ಕ್ರಮದೆ ರಂಜಿಪ ವಿಮಲತತ್ವಂತ್ವಮಸಿರಾಜೇಂದ್ರ || ೨೮

ಹಾರ ಪದಕ ಕಿರೀಟವೆಂಬಾ |
ಕಾರ ಹಲವನುತಾಳ್ದು ವರಭಂ |
ಗಾರವೊಂದೇ ರಾಜಿಸುತ್ತಿಹತೆರದೊಳೀಜಗದೆ ||
ತೋರುತಿಹ ಬಹುವಿಧದ ತತ್ವಾ |
ಕಾರದಲಿ ನೆರೆ ತೋರ್ಪವಿಗತವಿ |
ಕಾರ ಪರಮಬ್ರಹ್ಮತತ್ವಂತ್ವಮಸಿರಾಜೇಂದ್ರ || ೨೯

ವರಶರೀರದೊಳಿರ್ಪ ನಾನೇ |
ತರಣಿಮಂಡಲಮಧ್ಯವರ್ತಿಯು |
ತರಣಿಯೊಳಗಿಹ ನಾನು ಹೃದಯಾಕಾಶದೊಳಗಿಹೆನು ||
ನಿರುತವೆಂದೇ ನಿಗಮವೇತ್ತಿಗ |
ಳರಿತು ಯತ್ನದಿ ಜಾನಿಸುವರಾ |
ಪರಮಪರತರ ದಿವ್ಯತತ್ವಂತ್ವಮಸಿರಾಜೇಂದ್ರ




ಅಮರಕರಾಜಾಸ್ಥಾನದಲ್ಲಿ ವೇಶಧಾರಿಗಳಾದ ಪದ್ಮಪಾದಾದಿಗಳು ಗಾನಮಾಡುತ್ತಿರುವುದು.

ಶ್ರುತಿನುತವನನುಸರಿಸಿ ಮುದದಿಂ |
ಸತತಸದ್ಧ್ಯಾನಗಳನೆಸಗುತ |
ಲತಿಶಯದ ಧರ್ಮಗಳಭಕ್ತಿಯೊಳಾಚರಿಸುತಿರುವ ||
ಮತಿ ಸುನಿಶ್ಚಲರಾದ ವಿಪ್ರರು |
ಹಿತದೊಳಾವಬ್ರಹ್ಮವಸ್ತುವ |
ನುತಿಸುತಿಹರಾಬ್ರಹ್ಮತತ್ವಂತ್ವಮಸಿರಾಜೇಂದ್ರ || ೩೧

ಶಮದಮಾದಿಸುಲಕ್ಷಣಂಗಳ |
ನಮಿತ ಸಾಧನೆಯಿಂದಪಡೆದಿಹ |
ವಿಮಲಮತಿಗಳದಾವತತ್ವವನೊಮ್ಮೆತಾವ್ತಿಳಿದು ||
ಅಮಲಮೋಕ್ಷವಪಡೆದಬಳಿಕೀ |
ಭ್ರಮೆಯಭವದಲಿ ಸಿಲುಕದಿಹರಾ |
ವಿಮಲತರ ಸುಬ್ರಹ್ಮತತ್ವಂತ್ವಮಸಿರಾಜೇಂದ್ರ || ೩೨

ಈಪರಿಯೊಳಾಪದ್ಮಪಾದನು |
ಭೂಪತಿಯ ಸಭೆಯೊಳಗೆ ರಾಗಾ |
ಲಾಪದಿಂ ಸಭ್ಯರಿಗೆ ಪರಮಾನಂದವನುರಚಿಸಿ ||
ಆಪರಮವೇದಾಂತವಾಕ್ಯವು |
ಭೂಪರೂಪಿನ ಯತಿಯಚಿತ್ತಕೆ |
ಲೇಪಮಪ್ಪಂದದಲಿ ಪದ್ಯವರಚಿಸಿಪಾಡಿದನು || ೩೩

ಇಂತು ಪಾಡುತಲಿರಲು ವರವಿ |
ಕ್ರಾಂತಭೂಪನ ರೂಪವಾಂತಿಹ |
ಕಂತುಮಥನನು ಮನದೆ ಸಾಹಿತ್ಯಾರ್ಥವಂಗ್ರಹಿಸಿ ||
ಸಂತಸವತಾಳುತ್ತ ಶಿಷ್ಯರ |
ನಂತಬುದ್ಧಿಗೆ ನಲಿದು ಬಳಿಕಾ |
ಶಾಂತರೂಪ ಭವಿಷ್ಯಕಾರ್ಯವನೊಲಿದು ಚಿಂತಿಸಿದ || ೩೪

ತಾನು ಬಂದೀರಾಜದೇಹವ |
ಸಾನುರಾಗದಿ ಸೇರುತಿಲ್ಲಿಯು |
ಮಾನಿನಿಯರೊಡನಿರ್ದು ತಿಳಿದೆನು ಕಾಮಕಲೆಗಳನು ||
ಆನಳಿನಸಂಭವನಗೇಹವ |
ನಾನು ಸೇರುತಲಲ್ಲಿಯಾತನ |
ಮಾನಿನಿಯ ವಾದದಲಿ ಗೆಲುವೆನೆನುತ್ತ ಮನದಂದ ||

ಎಂದು ನೆರೆನಿಶ್ಚಯಿಸಿ ಗಾನಾ |
ನಂದದಲಿಮುಳುಗುತ್ತ ಮೂರ್ಛೆಗೆ |
ಸಂದನೆಂಬಂದದಲಿ ಮೈಮರೆದೊರಗಿ ಭೂಪತಿಯು ||
ಸಂದದೇಹವನುಳಿದು ಯೋಗದೊ |
ಳಿಂದು ಮೌಳಿಯು ತೆರಳುತಲ್ಲಿಂ |
ಬಂದನಾಗಲೆ ತನ್ನಪೂರ್ವದದೇಹವಿದ್ದೆಡೆಗೆ || ೩೬

ಗಿರಿಯಶಿಖರದೊಳಿದ್ದ ತನ್ನಯ |
ವರಶರೀರಬ್ರಹ್ಮರಂಧ್ರದೆ |
ಹರನುಪೊಕ್ಕನು ಸುಳಿದನಂಗೋಪಾಂಗವೀಧಿಯಲಿ ||
ವರಸಚಿವರಾಜ್ಞೆಯಲಿ ಬಂದಾ |
ಚರರು ಪೊತ್ತಿಸಿದಗ್ನಿಯಾಗಿರಿ |
ವರವನಾವರಿಸಿರ್ದುದಾಗಲು ಬಹುಳರಭಸದಲಿ || ೩೭

ಅನಲನಾವರಿಸುತ್ತ ತದ್ಗಿರಿ |
ವನದ ತರುಗಳನುರುಹಿ ಧೂಮದ |
ಘನತೆನಭಕಾವರಿಸೆ ಗಹ್ವರದೊಳಗೆ ಭುಗುಭುಗಿಸಿ ||
ಘನನಿನಾದವತೋರಿ ಖಗಮೃಗ |
ವನು ವಿಭಾಡಿಸಿ ತೃಣದರಾಶಿಯು |
ನನುವಿನಿಂದುರುಹಿದುದು ಭಯವಾವರಿಸೆ ದಿಕ್ತಟಕೆ || ೩೮

ಇಂದು ಮೌಳಿಯು ಪೂರ್ವದೇಹವ |
ನೊಂದಿ ಗುಹೆಯನು ಬಿಟ್ಟು ಹೊರಗೈ |
ತಂದು ದಾವಾನಲನಪರಿಯನು ಕಂಡು ನಸುನಗುತ ||
ಅಂದು ವಜ್ರಸ್ತಂಭದಿಂದೈ |
ತಂದು ದೈತ್ಯನಕೊಲ್ಲುತಾತನ |
ಕಂದನನುಪಾಲಿಸಿದ ದೇವನೃಸಿಂಹನನು ನೆನೆದ || ೩೯

ವರಪಯೋಧಿನಿವಾಸ ಕರಧೃತ |
ವರಸುದರ್ಶನ ವಾಸುಕೀಧೃತ |
ವರಶರೀರಸುತೇಜ ಯೋಗೀಶ್ವರಕೃಪಾವನಧಿ ||
ವರದ ನಿತ್ಯಶರಣ್ಯಬಹುದು |
ಸ್ತರಭವಾಂಬುಧಿಪೋತ ಲಕ್ಷ್ಮೀಶ |
ವರನೃಸಿಂಹನೆ ನೀಡುತನಗೆಕರಾವಲಂಬನವ || ೪೦

ಅಜಹರೇಂದ್ರಾದಿತ್ಯಯಕ್ಷ |
ವ್ರಜಸುರತ್ನಕಿರೀಟಮಂಡಿತ |
ನಿಜಚರಣಪಂಕೇರುಹಾಮಲಕಾಂತಿರಂಜಿತನೆ ||
ದ್ವಿಜಪತಿಸಹೋದರಿಯ ಹೃದಯಾಂ |
ಬುಜಯುಗಳ ವರರಾಜಹಂಸನೆ |
ವಿಜಯನರಹರಿ ನೀಡುತನಗೆ ಕರಾವಲಂಬನವ || ೪೧

ಘೋರತರವೆಂದೆನಿಪಬಲು ಸಂ |
ಸಾರಕಾನನದೊಳಗೆ ಚರಿಸಿ ವಿ |
ಕಾರಕಾಮಾದ್ಯಖಿಳ ಮೃಗಮಧ್ಯದಲಿನೆರೆಸಿಲುಕಿ ||
ಕ್ರೂರತರಮತ್ಸರ ನಿದಾಘದಿ |
ಮೀರಿನೊಂದಿಹೆ ದೇವಕರುಣವ |
ತೋರಿ ನರಹರಿ ನೀಡು ತನಗೆ ಕರಾವಲಂಬನವ || ೪೨

ಆಳವಹ ಸಂಸಾರವೆಂಬೀ ।
ಪಾಳುಬಾವಿಗೆ ಬಿದ್ದು ದುಃಖ ।
ವ್ಯಾಳಸಂಕುಲವೊದಗಿ ಪೀಡಿಸುತಿರಲು ಬಲುನೊಂದು ॥
ಶೂಲಪಾಣಿಯು ಸಖನೆ ದೈನ್ಯದಿ ।
ಗೋಳಿಡುತಲಿಹೆ ನಾನು ಪರಮದ ।
ಯಾಳುನರಹರಿ ನೀಡು ತನಗೆ ಕರಾವಲಂಬನವ ॥

ಪಾರುಗಾಣಲಸಾಧ್ಯಹವ ಸಂ ।
ಸಾರಸಾಗರದೊಳಗೆ ಮುಳುಗಿ ಶ ।
ರೀರವಿದಕಾಲಾಖ್ಯನಕ್ರಗ್ರಹವು ಬಾಧಿಸಲು ॥
ಭೀರುವಾಗಿಹೆ ರಾಗರಸದವಿ ।
ಕಾರಭಂಗದಿನೊಂದೆ ಪರಮೋ ।
ದಾರನರಹರಿ ನೀಡುತನಗೆ ಕರಾವಲಂಬನವ ॥ ೪೪

ದುರಿತಬೀಜದಿಪುಟ್ಟಿ ನಾನಾ ।
ಪರಿಯುಕರ್ಮವು ಶಾಖೆಯಾಗಿರೆ ।
ಕರಣಪತ್ರದೆ ಕಾಮಪುಷ್ಪದೆ ದುಃಖಫಲದಿಂದ ॥
ಭರಿತಮಹ ಸಂಸಾರವೆಂಬೀ ।
ತರುವನಡರುತ ಬೀಳುತಿರ್ಪೆನು ।
ಕರುಣಿನರಹರಿ ನೀಡುತನಗೆ ಕರಾವಲಂಬನವ ॥ ೪೫

ಭೀಳಸಂಸಾರಾಖ್ಯಭೀಕರ ।
ಕಾಳಸರ್ಪನವಕ್ತ್ರದುಗ್ರಕ ।
ರಾಳವಿಷಸಂದಗ್ಧಮಾನಶರೀರನಾಗಿಹೆನು ॥
ವ್ಯಾಳರಿಪುವಾಹನ ಮುರಾಂತಕ ।
ನೀಲಮೇಘಶ್ಯಾಮನಿರ್ಜಿತ ।
ಕಾಲನರಹರಿನೀಡುತನಗೆ ಕರಾವಲಂಬನವ ॥ ೪೬

ಈ ವಿಗಡಸಂಸಾರರೂಪದ |
ದಾವದಹನೋದ್ಭೂತ ಬಹು ಧೂ |
ಮಾವಳಿಯೊಳರಿಬೆಂದುದೆನ್ನ ತನೂರುಹಂಗಳಿವು ||
ನೋವನಿದಪರಿಹರಿಸುತೆನ್ನನು |
ಕಾವರನ್ಯರಕಾಣೆ ದೇವರ |
ದೇವ ನರಹರಿನೀಡು ತನಗೆ ಕರಾವಲಂಬನವ || ೪೭

ವಿಷಯವೈದರ ಬಯಕೆಯಿಂದೀ |
ವಿಷಮಸಂಸಾರದಲಿಮುಳುಗುತ |
ಝಷವು ಜಾಲಕೆಸಿಲುಕಿದಂದದಿ ನಾನುನೊಂದಿಹೆನು ||
ವಿಷಮಕಷ್ಟಕೆಸಿಲುಕಿದೆನ್ನೀ |
ವಿಷಯವನು ಮನದಂದು ಕರುಣಾ |
ವಿಷಧಿ ನರಹರಿನೀಡು ತನಗೆ ಕರಾವಲಂಬನವ || ೪೮

ಕಷ್ಟತರ ಸಂಸಾರವೆಂಬೀ |
ದುಷ್ಟಮದಗಜದಿಂದ ನೆರೆ ನಿ |
ಕ್ಲಿಷ್ಟವಪುನಾನಾದೆನ್ಯೈ ಸಕಲಾರ್ತಿಭಂಜಕನೆ ||
ಶಿಷ್ಟಪಾಲನೆ ಮರಣವೆನಿಸುವ |
ನಿಷ್ಟಭವಭೀತನಿಗೆ ಸರ್ವೋ |
ತ್ಕೃಷ್ಟ ನರಹರಿನೀಡು ತನಗೆ ಕರಾವಲಂಬನವ || ೪೯

ಕುರುಡನಾನೆನ್ನಯ ವಿವೇಕದ |
ಸಿರಿಯನಿಂದ್ರಿಯವೆಂಬ ಕಳ್ಳರ |
ನೆರಪಿಯುಪಹರಿಸಿರಲು ಬಹುವಿಧಮೋಹಕೂಪದಲಿ ||
ನೆರೆ ಪತಿತನಾಗಿಹೆನು ಕೇಳ್ವೈ |
ಪರಮಕರುಣಾಕರನೆ ಲಕ್ಷ್ಮೀ |
ನರಸೃಸಿಂಹನೆ ನೀಡು ತನಗೆ ಕರಾವಲಂಬನವ || ೫೦

ಕಮಲನಾಭ ಸುರೇಶ ಕೇಶವ |
ವಿಮಲಚರಿತರಮೇಶ ಸುರಪ |
ಪ್ರಮುಖವಂದಿತಚರಣ ಸುಬ್ರಹ್ಮಣ್ಯ ವೈಕುಂಠ ||
ಕಮಲನಯನ ಸಮಸ್ತಮುನಿಕುಲ |
ವಿಮಲಮಾನಸಹಂಸ ಲಕ್ಷ್ಮೀ |
ರಮಣ ನರಹರಿನೀಡು ತನಗೆ ಕರಾವಲಂಬನವ ||

ಇಂತು ಶಂಕರಯತಿಪನಾ ದೈ |
ತ್ಯಾಂತಕಶ್ರೀನಾರಸಿಂಹನ |
ನಂತವಿಧದಿಂಬೇಡುತಿರಲು ಕರಾವಲಂಬನವ ||
ಶಾಂತಿಯಾಂತುದುದಾವಶಿಖಿಬಳಿ |
ಕಂತಕಾಂತಕನಾಗ ಗುಹೆಯಿಂ |
ಸಂತಸದಿನಡೆತಂದನೀಚೆಗೆ ಸುರರುನಲಿದಾಡೆ ||

ತಮಸಮೂಹವನೊದೆದ ವಿಮಲ |
ದ್ಯುಮಣಿಮಂಡಲದಂತೆ ಯತಿಕುಲ |
ಕಮಲಭಾಸ್ಕರನಾಗ ಶೋಚಿಷ್ಕೇಶನುಪಟಳವ ||
ಅಮರವಂದಿತಚರಣ ಲಕ್ಷ್ಮೀ |
ರಮಣ ಪರತರನಾರಸಿಂಹನ |
ವಿಮಲನಾಮಸ್ಮರಣೆಯಿಂ ತಾಂ ಗೆಲಿದು ರಂಜಿಸಿದ ||

ಅತ್ತಲಮರಕನಾಮ ಭೂಪನ |
ಮತ್ತ ಕಾಶಿನಿಯುರುಗಳಾ ರಾ |
ಜೋತ್ತಮನು ವ್ಯಾತಿಯಾಂತಭಾವವ ತಿಳಿಯುತಾಬಳಿಕ ||
ಚಿತ್ತದುತ್ಸಾಹದಿಂದಲಮರಕ |
ಗುತ್ತರಕ್ರಿಯೆಗಳನು ವಿರಚಿಸ |
ಲಿತ್ತಬಂದರು ಪದ್ಮಪಾದಾದಿಗಳು ನಲವಿಂದ ||

ಬಂದು ಗಿರಿಗುಹೆಯಿಂದ ಹೊರಗೈ |
ತಂದು ನಿಂದಿಹ ಗುರುವರೇಣ್ಯಗೆ |
ಬಂಧುರದಭಕ್ತಿಯಲಿನಮಿಸೆ ಸನಂದನಾದಿಗಳ ||
ಇಂದುಮೌಳಿಯು ಬಹುಳಸಮ್ಮುದ |
ದಿಂದ ಮನ್ನಿಸಿ ಸಕಲಶಿಷ್ಯರ |
ವೃಂದದಿಂದೊಡಗೂಡಿ ಗಿರಿಶಿಖರವನು ಬೀಳ್ಕೊಂಡ || ೫೫

ತೆರಳುತಲ್ಲಿಂ ಬಳಿಕ ವರಖೇ |
ಚರರ ಸರಣಿಯಲೈದುತವನೀ |
ಸುರವರೇಣ್ಯನ ವಿಶ್ವರೂಪನ ಪುರವಸಾರುತಲಿ ||
ವರಗೃಹವನೊಳಪೊಕ್ಕು ವಾಗೀ |
ಶ್ವರಿಗೆ ತದ್ವಲ್ಲಭಗೆ ಮುದದಿಂ |
ದರುಶನವನೊಲಿದಿತ್ತು ನಿಂದನು ದಿವ್ಯಪೀಠದಲಿ || ೫೬

ಯತಿವರೇಣ್ಯನ ಕಂಡು ತದ್ಗೃಹ |
ಪತಿಯು ಮಂಡನಮಿಶ್ರ ತನ್ನಯ |
ಸತಿಯೊಡನೆ ನಡೆತಂದು ದಿವ್ಯಾಸನದೆ ರಂಜಿಸುವ ||
ಯತಿಪದಾಂಬುಜಕೆರಗಿ ಕೈಮುಗಿ |
ಯುತಲೆ ಬಿನ್ನವಿಸಿದನು ವರಯತಿ |
ಪತಿಯೆ ತನ್ನೀಗೇಹ ದೇಹ ಪವಿತ್ರವಾಯ್ತೆನುತ || ೫೭

ಸರಸತಿಯು ನಡೆತಂದಳಾ ಯತಿ |
ವರನು ಪರಕಾಯಪ್ರವೇಶದ |
ಲರಿದುಬಂದನು ಕಾಮಕಲೆಗಳನೆಂದುಮನದೊಳಗೆ ||
ಅರಿತು ತತ್ಪಾದಾಬ್ಜಯುಗ್ಮದೊ |
ಳೆರಗಿ ಭಯಭಕ್ತಿಯಲಿ ಬಳಿಕಾ |
ಹರಗೆ ನುಡಿದಳು ವಿನಯ ಮಧುರವಚೋವಿಲಾಸದಲಿ || ೫೮

ಸಕಲವಿದ್ಯೇಶಾನ ಮತ್ತಾ ।
ಸಕಲಭೂತೇಶ್ವರನೆನುತ್ತಲಿ ।
ಸಕಲನಿಗಮಾಗಮಗಳಿಂ ಸಂಸ್ತೂಯಮಾನನಹ ॥
ಸಕಲಲೋಕಾಧೀಶ್ವರೇಶ್ವರ ।
ಸಕಲಶೋಕಾಪಹ ಮಹೇಶ್ವರ ।
ಸಕಲಲೋಕಾಧ್ಯಕ್ಷ ಶಿವನೀನೆಂದಳಾವಾಣೀ ॥ ೫೯

ಕಾಮಕಲೆಗಳನರಿಯಲೋಸುಗ ।
ಕಾಮಿಸುತಲವಧಿಯನು ಭೂಪನ ।
ಕಾಮಿನಿಯರೊಡನಿರ್ದು ಕಲೆಗಳನರಿವರೀತಿಯದು ॥
ಕಾಮಿತವೆ ನಿನಗಿಂದು ಕೇಳ್ವೈ ।
ಕಾಮರಿಪು ವೃಂದಾರಕವ್ರಜ ।
ಕಾಮಿತಾರ್ಥವನೀವ ನರಲೀಲಾವಿನೋದವಲಿ ॥

ಯತಿವರೇಣ್ಯನೆ ಕೇಳು ಜಾಯಾ ।
ಪತಿಗಳನೆನಿಸುವ ನಾವು ನಿನ್ನೊಡ ।
ನತಿಶಯದಿವಾದಿಸುತ ಪಡೆದೆವು ನೆರೆಪರಾಜಯವ ॥
ಹಿತಮಿದಲ್ಲದೆ ಮನಕೆ ಭಂಗ ।
ಸ್ಥಿತಿಯೆ ತಾನಿದು ನಮಗೆ ಮಹದು ।
ನ್ನತದ ಗೌರವವಾಯ್ತು ಗುರುವರನಿಂಪರಾಜಯವು ॥

ಮುನಿವರನ ಶಾಪದಲಿ ಧರೆಯೊಳು ।
ಜನಿಸಿದೆನಗೆ ವಿಶಾಪ ಕೇಳ್ವೈ ।
ಘನಮಹಿಮ ನಿನ್ನಿಂದಲೊದಗಿತು ನಾಂ ಕೃತಾರ್ಥೆಯಲಿ ॥
ಅನುಗಮಿಪೆ ನಾನೆನ್ನನಿಳಯ ।
ಕ್ಕೆನುತಲಂತರ್ಧಾನೆಯಾದಳು ।
ವಿನುತೆ ಶಾರದೆಯಾಗ ಸಭ್ಯರನೆರವಿ ಬೆರಗಾಗೆ ॥ ೬೩

ಬಳಿಕಲಾಶಂಕರನು ಯೋಗದ ।
ಬಲದೊಳಾಕೆಯನೋಡಿ ಹರುಷದ ।
ಲುಲಿದನೀಪರಿ ದೇವಿ ಸದ್ಯೋಜಾತ ಸೋದರಿಯೆ ॥
ಜಲಜಸಂಭವನರಸಿ ನೀನಿ ।
ಸ್ಸಲಘುಮಹಿಮೆಯನರಿದೆ ನೀನೆನ ।
ಗೊಲಿದು ನೀಡುವುದಖಿಳಮನಸಾಭೀಷ್ಟಸಂಪದವ ॥ ೬೩

ಭಂಗಬಾರದತೆರದೆ ವರ ಧ ।
ರ್ಮಂಗಳನು ನೆರೆ ಪೊರೆಯಲೋಸುಗ ।
ಶೃಂಗಗಿರಿಮೊದಲಾದ ಸುಕ್ಷೇತ್ರಂಗಳಲಿನಾನು ॥
ವಿಂಗಡದಲಾಮ್ನಾಯ ವರ ಪೀ ।
ಠಂಗಳನು ವಿರಚಿಪೆನು ನೀನು ।
ತ್ತುಂಗಕರುಣದಲಲ್ಲಿನಿಲುವುದು ಶಾರದಾಖ್ಯೆಯಲಿ ॥ ೬೪

ಎಂದು ಯತಿಪತಿ ಬೇಡುತಿರಲರ ।
ವಿಂದಸಂಭವನರಸಿ ನಸುನಗೆ ।
ಯಿಂದನುಡಿದಳು ತನ್ನಲೀಲಾಭೂತಿಯೆಂದೆನಿಪ ॥
ಸಂದಕಲೆಯೊಂದರಲಿ ಧರೆಯೊಳು ।
ನಿಂದು ನಿನ್ನಿಷ್ಟವನು ಸಲಿಸುವೆ ।
ನೆಂದೆನುತಲಾಬಳಿಕ ತೆರಳಿದಳಜನಿಕೇತನಕೆ ॥ ೬೫

ಪತಿಯು ವರಯತಿಯಾದಬಳಿಕೀ ।
ಕ್ಷಿತಿಯೊಳಿರೆ ವೈಧವ್ಯದೋಷವು ।
ಸತಿಗೆ ಬಪ್ಪುದೆನುತ್ತ ಶಂಕಿಸಿ ಭೂತಳವನುಳಿದು ॥
ಸತಿಯು ಗಮಿಸಲು ಕಂಡು ಹರ್ಷೋ ।
ನ್ನತಿಯೊಳಿರ್ದನು ವಿಶ್ವರೂಪನು ।
ಯತಿಪನನುಮೋದಿಸಿದನಿದನಾಸಭ್ಯರೂಪ್ಪಿದರು ॥ ೬೬

ಬಳಿಕ ಮಂಡನಮಿಶ್ರ ತನ್ನಯ ।
ನಿಳಯದೊಳಗುಳ್ಳಖಿಳಧಾನ್ಯಂ ।
ಗಳನು ಧನವನು ವಿಪ್ರನಿಕರವ ಕರೆದು ಮನ್ನಿಸುತ ॥
ಒಲಿದು ದಾನವನೀಯುತಿಷ್ಟಿಯು ।
ಸಲೆರಚಿಸಿ ವರಗಾರ್ಹಪತ್ಯಾ ।
ನಲನನಾತ್ಮಾರೋಪಣೆಯನೆಸಗಿದನು ಭಕ್ತಿಯಲಿ ॥

ತದುಪರಿಯೊಳಾಕಮಲಸಂಭವ ।
ನುದಿತ ವೈರಾಗ್ಯದಲಿ ಬಹುಸಂ ।
ಪದವನೆಲ್ಲವತೊರೆದು ಕಾಮಾದ್ಯಖಿಳರಿಪುಗಳನು ॥
ಒದೆದು ಕೆಡಹಿ ಮುಮುಕ್ಷುವಾಗಿಯೆ ।
ಮುದದಿಬಂದಾಪರಮಹಂಸನ ।
ಪದಯುಗಳಪಂಕೇರುಹಂಗಳಿಗೆರಗಿ ನಿಂದಿರ್ದ ॥

ಸುರುಚಿರದ ತುರ್ಯಾಶ್ರಮಾಂಗೀ ।
ಕರಣ ವಿಧಿಪೂರ್ವಕದಿ ವಿದ್ವ ।
ದ್ವರನು ವಿರಚಿಸಿ ಸಕಲಕರ್ಮವನಾಗ ಗುರುವರಗೆ ॥
ಎರಗಿ ನಿಲ್ಲಲು ಬಳಿಕ ಕರುಣಾ ।
ಕರನು ವರತತ್ವಮಸಿವಾಕ್ಯವ ।
ನೊರೆದನಂದಾವಿಶ್ವರೂಪನಬಲದಕಿವಿಯೊಳಗೆ

ಇಂತು ತಾನು ಗುರೂಪದೇಶವ ।
ನಾಂತು ವಿಧ್ಯುಕ್ತದಲಿ ಭಿಕ್ಷವ ।
ಸಂತಸದಿ ಯಾಚಿಸಿಯೆ ಬರಲಾವಿಶ್ವರೂಪಕನು ॥
ಕಂತುರಿಪುಕಾಣುತ್ತ ವಿಮಲ ।
ಸ್ವಾಂತನಿಗೆ ಬೋಧಿಸಿದನಾಗ ।
ತ್ಯಂತದಯೆಯಿಂ ತತ್ವಮಸಿವಾಕ್ಯಾರ್ಥವಿವರಣೆಯ ॥ ೭೦

ದಿನದಿನದೊಳಾವಿಶ್ವರೂಪನ |
ಮನದೆ ಪೆರ್ಚಿತು ಶಾಂತಿದಯೆಯಿಂ |
ಬನಿತು ಸದ್ಗುಣನಿವಹಮೋಕ್ಷಾಪೇಕ್ಷೆವೈರಾಗ್ಯ ||
ಜನಿಸಿ ನಿತ್ಯಾನಿತ್ಯವಸ್ತುವ |
ನನುವಿನಿಂ ಭಾವಿಪ ವಿವೇಕವು |
ಘನತೆಯಾನಲಿಕಿದ ಪರಿಕ್ಷಿಸಿ ತಿಳಿದನಾಹರಸು || ೭೧

ನಿವಡಿಸಿದ ವೇದಾಂತತತ್ತ್ವಾ |
ರ್ಥವನು ಮೇಣಾಬ್ರಹ್ಮಸೂತ್ರಾ |
ರ್ಥವನು ಬೋಧಿಸುತಾತನಿಗೆ ತಾಂ ಸ್ವಾನುಭವಗೊಳಿಸಿ ||
ಅವನಿಗಾಪ್ರಸ್ಥಾನ ಮೂರರ |
ವಿವರವನು ನೆರೆತಿಳುಹಿ ಕರುಣಾ |
ರ್ಣವನು ಧನ್ಯನಗೈದನಾಪರಮೇಷ್ಠಿಯನು ಮುದದೆ || ೭೨

ಪರಿಪರಿಯ ವಾಕ್ಯಾರ್ಥದನುಭವ |
ವರಿಕೆಯಾಗುತ ಬುದ್ಧಿದೋಷಗ |
ಳಿರದೆ ಪಾಪನಿವೃತ್ತಿಯಾಗಿಯೆ ತತ್ವಮಾರ್ಗದಲಿ ||
ಕರಣಶುದ್ಧಿಯನೀವ ವರಗುರು |
ಚರಣಸೇವಾಲಕ್ಷಣಂಗಳ |
ಪರಮಹಂಸನು ಕರುಣದಿಂದಾತನಿಗೆ ಬೋಧಿಸಿದ || ೭೩

ವರಯತಿಪನಾಬಳಿಕಲಾತಗೆ |
ವಿರಚಿಸುತ ಘನಯೋಗಪಟ್ಟವ |
ವರಸುರೇಶ್ವರನೆಂಬ ನಾಮವನಿತ್ತು ಕರುಣಿಸಲು ||
ಪರಶಿವನಮುಖದಿಂದ ತತ್ವದ |
ಪರಿಯನೆಲ್ಲವನರಿದು ಶಿಷ್ಯರ |
ನೆರವಿಯಲಿ ತಾಂ ಪ್ರಮುಖನಾದನು ಕಮಲಸಂಭವನು || ೭೪

ಈತೆರದೊಳಾಕರ್ಮವಾದಿಯ ।
ಭೂತನಾಥನುಗೆಲಿದು ಶಿಷ್ಯ ।
ವ್ರಾತದೊಳಗಾತನನು ಮುಖ್ಯನಮಾಡಿಕೊಂಡಿರಲು ॥
ಈತೆರನಕಾಣುತ್ತ ವಿಪ್ರರ ।
ಜಾತಕಾಮುಂಗೆರಗಿ ವಿನಯೋ ।
ಪೇತರಾಗುತ ಯತಿಯಸೇವಿಸುತಿರ್ದರನವರತ ॥

ನೆರವಿನೆರವಿಯಲ್ಲೈದಿ ವಿಪ್ರರು ।
ವರಯತಿಯ ಪಾದಾರವಿಂದದ ।
ವರುಶನದಿ ಧನ್ಯತೆಯನೈದುತ ಸೇವಿಸುತ್ತಿರಲು ॥
ಪರಿಪರಿಯದುರ್ಮತವ ಖಂಡಿಸಿ ।
ಸುರುಚಿರಾದ್ವೈತಾಖ್ಯ ಚಂದ್ರಮ ।
ಕಿರಣವನು ಪಸರಿಸುತಲಿರ್ದನು ಬಾಲಶಶಿಮೌಳಿ ॥

ಇಂತು ರೇವಾನದಿಯತೀರದೆ ।
ನಿಂತು ಸಂಭ್ರಮದಿಂದ ಶಿಷ್ಯರ ।
ಸಂತತಿಗೆ ತತ್ವಾರ್ಥವಿವರವನೊಲಿದು ಬೋಧಿಸುತ ॥
ಅಂತವಿಲ್ಲದ ಪರಮಸುಖವ ನಿ ।
ರಂತರದಿ ಕರುಣಿಸುತ ವರ ವೇ ।
ದಾಂತವಿದನಿರುತಿರ್ದನಾಶ್ರೀಕಂಠ ಯತಿವರನು ॥

ಸಂಧಿ ೨೭ ಕ್ಕೆ ಪದ್ಯ ೧೩೩೭ ಕ್ಕೆ ಮಂಗಳ.

# ಇಪ್ಪತ್ತೆಂಟನೆಯ ಸಂಧಿ.

ಸೂಚನೆ। ಗುರುಶಿರವ ಕೊಂಡೊಯ್ವನೆಂದೈ।
ತರಲು ಕಾಪಾಲಿಕನ ಕೊಂದನು।
ನರಹರಿಯರೂಪವನು ತಾಳುತಲಾ ಸನಂದನನು॥

ಕೇಳು ಶೌನಕಮುನಿಪ ರೇವಾ।
ಕೂಲದಲಿ ಕೆಲದಿನವಕಳೆದಾ।
ಬಾಲಶಶಿಧರ ಬಳಿಕಲಲ್ಲಿಂ ತೆರಳಿ ಹರುಷದಲಿ॥
ಕಾಲಪಾಲಿತದೆಶೆಯನೈದಿ ವಿ।
ಶಾಲವಹ ಮಹರಾಷ್ಟ್ರವಿಷಯ ವ।
ನಾಳಿಯನು ಪರಿಕಿಸುತಬಂದನು ಶಿಷ್ಯಜನವೆರೆಸಿ॥ ೧

ಈಶನಾ ಬಂಧುರದ ದಕ್ಷಿಣ।
ದೇಶದೊಳು ಸಂಚರಿಸಿ ನೆರೆಯುಪ।
ದೇಶಿಸಲು ಭಾಷ್ಯಾದಿ ಶಾಂತಿಗ್ರಂಥನಿಚಯವನು॥
ಕ್ಲೇಶವರ್ಜಿತರಾಗಿ ಗುರು ಸಂ।
ದೇಶದಿಂದದ್ವೈತತತ್ವಾ।
ಭ್ಯಾಸಿಗಳು ತಾವಾದರಲ್ಲಿಯ ಜನರು ಭಕ್ತಿಯಲಿ॥ ೨

ಯತಿಪನೀಪರಿ ಸಕಲಸುಜನ।
ಪ್ರತತಿಗಾ ವೇದಾಂತತತ್ವವ।
ನತಿಹಿತದಿ ಬೋಧಿಸುತ ಮುಂದೈತರಲು ಮಾರ್ಗದಲಿ॥
ಹಿತದಿ ಯಾತ್ರಿಕನಿಕರಕುನ್ನತ॥
ಗತಿಯ ಕರುಣಿಪೆನೆಂಬ ಮಹಿಮೋ।
ನ್ನತಿಯಲಾ ಶ್ರೀಶೈಲನಾಮಕ್ಷೇತ್ರ ರಂಜಿಸಿತು॥ ೩

ಜನನಿವಹದೊಡಗೂಡಿ ಬಂದನು |
ಘನಗಿರಿಯ ತಪ್ಪಲಲಿ ಹರಿಯುವ |
ಧುನಿಯ ನಾ ಪಾತಾಳಗಂಗೆಯ ಕಂಡನೊಲವಿನಲಿ ||
ಮನದೊಳಘಮರ್ಷಣದ ಮಂತ್ರವ |
ನೆನೆದು ತಾಂ ಸ್ನಾನವನು ವಿರಚಿಸು |
ತನಘಯತಿಯೈದಿದನು ಶ್ರೈಲಾಗ್ರದ ಶಿವಾಲಯವ ||

ಮಲ್ಲಿಕಾರ್ಜುನನೆಂಬ ಪೆಸರಿಂ |
ದಲ್ಲಿ ನೆಲಸಿಹ ವಿಮಲಗಿರಿಜಾ |
ವಲ್ಲಭಶ್ರೀಮೂರ್ತಿದರ್ಶನದಿಂದ ಹರ್ಷಿಸುತ |
ಸಲ್ಲಲಿತಭಕ್ತಿಯಲಿ ನಮಿಸುತ |
ಫುಲ್ಲಬಾಣಾಂತಕನು ಮನದ ಮು |
ಹೋಲ್ಲಸದಲೈತಂದನಾ ಭ್ರಮರಾಂಬಿಕಾಲಯಕೆ ||

ಗಿರಿಜೆಯಂಘ್ರಿದ್ವಯಕೆ ಶಿಷ್ಯರ |
ನೆರವಿಯಿಂದೊಡಗೂಡಿ ನಮಿಸುತ |
ವಿರಚಿಸಿದನಂದಮಲ ದುರ್ಗಾಸ್ತವವನೇಕಗಳ ||
ಹರನು ವರವೇದಾಂತ ವಿದ್ಯೆಯ |
ಪರಿಯ ಶಿಷ್ಯವ್ರಜಕೆ ಬೋಧಿಸು |
ತಿರಲು ಬಂದುದು ವಾದಕೋಸುಗ ವಾದಿಗಳ ನೆರವಿ ||

ವೀರಶ್ರೈವರ ನೆರವಿ ಮತ್ತಾ |
ವೀರವೈಷ್ಣವ ಪಡೆಯು ಬಂದಾ |
ಸಾರಸಾಂಘ್ರಿದ್ವಯ ಸನಂದನಮುನಿಯುಸಮ್ಮುಖದೆ ||
ಘೋರವಾದವಗೈದು ಸೋಲುತ |
ಸಾರತರದದ್ವೈತತತ್ವವಿ |
ಚಾರಪರರಾಗುತ್ತ ಶಂಕರಶಿಷ್ಯರೆನಿಸಿದರು ||

ಪಾಶುಪತ ಮತವಾದಿಗಳು ಬಂ ।
ದಾ ಸುರೇಶ್ವರನೊಡನೆ ವಾದವ ।
ನಾಸುರವಲೆಸಗುತ್ತಲಪಜಯವಾಂತರಾಕ್ಷಣದೆ ॥
ಆಶೆಯಿಂದ್ವೈತರುತಲಾ ಮಾ ।
ಹೇಶಮತಯಾಯಿಗಳು ಪರಲೋ ।
ಕೇಶನೊಳು ವಾದಿಸುತ ಸೋತರು ನಿಮಿಷಮಾತ್ರದಲಿ ॥ ೮

ಈತೆರದೆ ವಾದಿಗಳು ಬಂದಾ ।
ಭೂತನಾಥನ ಮುಖ್ಯಶಿಷ್ಯ ।
ವ್ರಾತದೊಡನೆ ವಿವಾದಗೈದು ಪರಾಜಯುವಪಡೆದು ॥
ವೀತರಾಗದ್ವೇಷದಿಂದ ।
ದ್ವೈತವನು ನೆರೆ ನಂಬಿ ವರ ವಿ ।
ಖ್ಯಾತ ಯತಿಪಗೆ ಶಿಷ್ಯರಾದರು ತೊರೆದು ದುಗುಡವನು ॥ ೯

ಕ್ಲೇಶಮಾನಸರಾಗಿ ಕೆಲರಾ ।
ಕ್ರೋಶದಿಂ ಚಲಗೊಳ್ಳುತಾತ್ಮವಿ ।
ನಾಶನವನೊಂದಿದರು ಧರ್ಮದ್ರೋಹ ದೋಷದಲಿ ॥
ವಾಸುದೇವನ ಕೆಣಕಿ ಪೌಂಡ್ರಕ ।
ವಾಸುದೇವನು ಕುಟಿಲವೇಷದಿ ।
ನಾಶವಾದಂದದಲಿ ದೈವದ್ರೋಹ ದೋಷದಲಿ ॥ ೧೦

ಇಂತು ಪರವಿಜ್ಞಾನ ದಾನವ ।
ಕಂತುರಿಪುವೆಸಗುತ್ತ ಜಗಕ ।
ತ್ಯಂತಸುಖವನು ನೀಡುತಜ್ಞಾನವನು ಪರಿಹರಿಸಿ ॥
ಭ್ರಾಂತಿವಿರಹಿತರಾದ ಶಿಷ್ಯರಿ ।
ಗಂತವಿಲ್ಲದಸುಖವ ಕರುಣಿಸಿ ।
ಶಾಂತಮಾನಸನಿರ್ದನಾಶ್ರೀಶೈಲದಗ್ರದಲಿ ॥ ೧೧

ಇರುತಿರಲು ಬಳಿಕೊಂದುದಿನವಾ |
ವರಯತಿಯ ಸಭೆಗಾಗಿ ಬಂದನು |
ಧರಣಿಜೆಯನಪಹರಿಸಲ್ಕೈದಿದ ದಶಶಿರನ ತೆರದೆ ||
ಪರಮಸಾಧುವಿನಂತೆ ವೇಷವ |
ಧರಿಸಿ ಕಾಪಾಲಿಕನದೋರ್ವನು |
ದುರಿತ ಭಾಜನನುಗ್ರಭೈರವನೆಂಬ ದುಷ್ಟಾತ್ಮ ||

ಬಂದು ಯತಿಪತಿಗೆರಗಿ ಸಮ್ಮುದ |
ದಿಂದ ಸಂಸ್ತುತಿಗೈದು ಶಿಷ್ಯರ |
ವೃಂದದೊಳು ತಾಂ ಸೇರಿ ಕುಹಕೋಪಾಯ ಮಾರ್ಗದಲಿ
ಸಂದಭಕ್ತಿಯ ತೋರಿ ಬಹುವಿಧ |
ದಿಂದ ಸೇವಿಸುತಿರ್ದು ಸಂತತ |
ದಂದುಗವ ನೆನೆಯುತ್ತಲಿರ್ದನು ತನ್ನಮನದೊಳಗೆ ||

ಇಂತಿರಲು ಮತ್ತೊಂದುದಿನವಾ |
ಕಂತುರಿಪು ತನ್ನಖಿಳ ಶಿಷ್ಯರ |
ಸಂತತಿಗೆ ವೇದಾಂತಪಾಠವ ಬೋಧಿಸಿದ ಬಳಿಕ ||
ಸಂತಸದಿ ಕುಳಿತಿರಲು ತಾನೇ |
ಕಾಂತದಲಿ ಗುರುವರನ ಪಾದಾ |
ಕ್ರಾಂತನಾಗುತಲುಗ್ರಭೈರವನಾಗಲಿಂತೆಂದ ||

ಗುರುವೆ ನೀಂ ಸರ್ವಜ್ಞಮೂರ್ತಿಯು |
ಧರೆಯಜನರನು ಪೊರೆಯಲೋಸುಗ |
ಧರಿಸಿ ಯತಿರೂಪವನು ಪರಮಾದ್ವೈತಸುಧೆಯಿಂದ ||
ಹರಿಸುತಾಧ್ಯಾತ್ಮಿಕವೆ ಮೊದಲಾ |
ದುರುತರದ ತಾಪವನು ಜನರಿಗೆ |
ಕರುಣಿಸುತ್ತಿಹೆ ಪರಮವಿಮಲಜ್ಞಾನಸಿದ್ಧಿಯನು ||

ನಿನ್ನ ವೊಲು ದೇಹಾಭಿಮಾನವ ||
ನಿನ್ನು ತೊರೆದವರುಂಟೆ ಜಗದೊಳ |
ಗುನ್ನತೋನ್ನತಮಹಿಮ ನೀಂ ಸಾಕ್ಷಾತ್ಪರಬ್ರಹ್ಮ ||
ಎನ್ನಭೀಷ್ಟವ ಸಲಿಸಬೇಹುದು |
ನನ್ನಿಯಿಂ ಭವದೀಯ ಕೃಪೆಯಿಂ |
ಮುನ್ನತದ ಸತ್ಕರ್ಮಸಿದ್ಧಿಪುದೆನಗೆ ಕೇಳೆಂದ || ೧೬

ನಾನು ಕಾಪಾಲಿಕನು ಕೇಳ್ಮ |
ನ್ನಾನು ರಚಿಸಿದೆನುಗ್ರತಪವ ಕೃ |
ಶಾನುನೇತ್ರನ ಕುರಿತು ಬಳಿಕಾ ರುದ್ರನೈತಂದು ||
ಸಾನುರಾಗದೆ ವರವ ಬೇಡೆನ |
ಲಾನುಬೇಡಿದೆ ಕಾಯಸಹಿತ ಮ |
ಹಾನುಭಾವನೆ ನಿನ್ನಲೋಕಕೆಬರುವೆನೆಂದೆನುತ || ೧೭

ವರವನೀಪರಿ ಕೇಳಲೆನಗಾ |
ಹರನು ನುಡಿದನು ಸಾರ್ವಭೌಮನ |
ಶಿರವನಾಗಲಿ ಪರಮಹಂಸಶ್ರೇಷ್ಠನೆಂದೆನಿಪ ||
ವರಯತೀಶನ ಶಿರವನಾಗಲಿ |
ತರಿದು ಪೂರ್ಣಾಹುತಿಯ ವೈಶ್ವಾ |
ನರನ ಮುಖದಿಂದಿತ್ತೆಯಾದೊಡಭೀಷ್ಟವಹುದೆಂದು || ೧೮

ಎನುತ ಪೇಳುತದೃಶ್ಯನಾದನು |
ಘನಮಹಿಮಶಂಕರನು ಕೇಳೈ |
ವಿನುತ ಯತಿಪತಿ ರಾಜಶಿರವನು ತರಲು ದುರ್ಲಭವು ||
ತನುವನಿತ್ತು ದಧೀಚಿ ಧರೆಯೊಳು |
ಘನಯಶವ ತಾಳಿದನು ನಾಗನ |
ತನುವ ರಕ್ಷಿಸಲಳಿದನಾ ಜೀಮೂತವಾಹನನು || ೧೯

ತೊರೆದಿರುವೆ ದೇಹಾಭಿಮಾನವ |
ಪರಯುತಿಪ ನೀ ನಿನ್ನ ಶಿರವನು |
ಕರುಣಿಸಿದೊಡಾನಗ್ನಿಮುಖದಿಂದಾಹುತಿಯನಿತ್ತು ||
ಹರನ ಕರುಣವಪಡೆವೆನದರಿಂ |
ಶಿರವನೀವುದೆನುತ್ತ ಬೇಡಲು |
ಪರಮಹಂಸನು ನುಡಿದನಾ ಕಾಪಾಲಿಕಂಗೊಲಿದು || ೨೧

ಕೇಳು ಕಾಪಾಲಿಕನೆ ತನ್ನೀ |
ಮೌಳಿಯನು ನೀಂ ಕಡಿದು ಮೃಗಧರ |
ಮೌಳಿಗಾಹುತಿಯಿತ್ತು ನಿನ್ನಮನೋಭಿವಾಂಛಿತವ ||
ಶೂಲಿಯಿಂ ಪಡೆವುದಕೆ ನಾನನು |
ಕೂಲನಾಗಿದ್ದಡೆಯು ತಾವ್ಪ್ರತಿ |
ಕೂಲರಾಗಿಹರೈಸೆ ನಿನಗೆ ಸನಂದನಾದಿಗಳು || ೨೨

ನಳಿನಪಾದಾದಿಗಳು ತಿಳಿದೊಡೆ |
ಮುಳಿದು ನಿನಗುಪಹತಿಯ ಮಾಳ್ಪರು |
ಬಳಿಯೊಳವರಿಲ್ಲದಿಹ ಕಾಲವನರಿದು ನೀಂ ಬಂದು ||
ತಲೆಯನಿದ ಕೊಂಡೊಯ್ಯುತನಲಗೆ |
ಬಲಿಯ ಕೊಡಬಹುದೆನಲು ಹರ್ಷವ |
ತಳೆದು ಕಾಪಾಲಿಕನು ತೆರಳಿದನಾ ನಿಜಾಶ್ರಮಕೆ || ೨೩

ಇರುತಿರಲು ಬಳಿಕೊಂದುದಿನವಾ |
ಹರನ ಶಿಷ್ಯಸಮೂಹ ಗಂಗಾ |
ವರನದಿಯತೀರವನು ಸೇರುತ ತಮ್ಮ ಕಾರ್ಯದಲಿ ||
ನಿರತರಾಗಿರಲಿತ್ತಲಾ ಯತಿ |
ವರನು ಯೋಗಾಸಕ್ತನಾಗಿರ |
ಲರಿದು ಬಂದನು ಯತಿಪನೆಡೆಗೆಂದುಗ್ರಭೈರವನು || ೨೪

ಶೂಲಖಡ್ಗವ ಕರದೆ ಪಿಡಿದು ಕ |
ರಾಳಮತಿಯ್ಯೆತಂದು ಯತಿಕುಲ |
ಮೌಳಿಯಂತರ್ಮುಖದ ಯೋಗದೊಳಿರಲು ನೆರೆ ನೋಡಿ ||
ಕಾಲವಿದು ತನಗೀಗ ಶಿರವನು |
ಬೀಳಗೆಡಹುವೆನೆನುತ ಬರೆ ಪಾ |
ತಾಳಗಂಗೆಯೊಳಿರ್ದ ಹರಿಯಿದನರಿದನಾಕ್ಷಣದೆ || ೨೪

ಕ್ರೂರಕಾಪಾಲಿಕನ ಕರ್ಮವ |
ಸಾರಸಾಂಘ್ರಿಯು ತಿಳಿದು ಮನದೊಳು |
ನಾರಸಿಂಪನ ಚರಣಕಮಲವ ನೆನೆಯುತಾಕ್ಷಣದೆ ||
ನಾರಸಿಂಹನರೂಪವಾನುತ |
ಘೋರನಿನದವಮಾಡುತಾ ಮದ |
ನಾರಿಯಿರ್ಪೆಡೆಗಾಗಿ ಬಂದನು ನಿಮಿಷಮಾತ್ರದಲಿ || ೨೫

ಉಗ್ರಭೈರವನೆಡೆಗೆ ತಾನ |
ಭ್ಯಗ್ರದಲಿ ನಡೆತರುತಲವನ ಕ |
ರಾಗ್ರದಲಿ ರಂಜಿಸುವ ಖಡ್ಗವಕಂಡು ಮನದೊಳಗೆ ||
ಉಗ್ರಕೋಪವತಳೆದುಬಂದು ಮ |
ಹೋಗ್ರದಿಂದಾರ್ಭಟಿಸೆ ಕಂಡು ಕ |
ರಾಗ್ರದಿಂದಾಖಡ್ಗಬಿದ್ದುದು ಬಿರಿದುದವನೊಡಲು || ೨೬

ಭೀಳಕರ್ಮವೆನೆಸಗಿದಾ ಕಾ |
ಪಾಲಿಕನು ತನ್ನಸುವಿನಂತ್ಯದ |
ಕಾಲದಲಿ ನರಹರಿಯ ದಿವ್ಯಾಕಾರದರ್ಶನವು ||
ತಾ ಲಭಿಸಲದರಿಂದಲಾ ಶಿಶು |
ಪಾಲ ಮೊದಲಾದಸುರರಂತೆ ವಿ |
ಶಾಲಮುಕ್ತಿಯಪಡೆದನಾ ಯತಿಪತಿಯು ಕರುಣದಲಿ || ೨೭

ಘೋರನರಸಿಂಹಾಟ್ಟಹಾಸದೆ ।
ಮಾರವೈರಿಗೆ ತಪದೊಳಿಚ್ಚರ ।
ತೋರೆ ಬಳಿಕುನ್ಮೀಲಿತಾಕ್ಷನು ನೋಡಿ ಕೆಲಬಲನ ॥
ಕ್ರೂರಕಾಪಾಲಿಕನು ಮರಣಕೆ ।
ಸೇರಿದುದುದನಾಬಳಿಕಲಾ ದೈ ।
ತ್ಯಾರಿ ಘರ್ಜಿಸುವನುವ ಕಂಡನು ನಗೆಯುಮೂನೆಮಿಸುಗೆ ॥

ಜಲಜಪಾದನೆ ನಿನಗಿದೆಂತ್ತೈ ।
ಜಲಜಸಂಭವಜನಕ ಕರುಣಾ ।
ಜಲಜನಿಧಿಶ್ರೀನಾರಸಿಂಹನ ಮೋಕ್ಷದಾಯಕನ ॥
ಜಲಧಿಶಯನನ ದಿವ್ಯರೂಪವು ।
ಸುಲಭದಿಂ ಲಭಿಸಿದುದು ಪೇಳೆನು ।
ತಲಘುಮುಹಿಮ ಯತೀಶ ಕೇಳಿದನಾ ಸನಂದನನ ॥

ಎಂದಮಾತನುಕೇಳಿ ಬಳಿಕ ಸ ।
ನಂದನನು ನಸುನಗುತ ಗುರುವರ ।
ಗೆಂದ ಕೇಳ್ಳೈ ನಾನಹೋಬಲವೆಂಬ ಶೈಲದಲಿ ॥
ಹಿಂದೆ ತಪವನು ರಚಿಸುತಿರಲು ಪು ।
ಳಿಂದನೊಬ್ಬನು ಬಂದು ತನಗಿಂ ।
ತೆಂದನೇತಕೆ ಘೋರತಪವನು ಚರಿಸುತಿಹೆಯೆಂದು ॥

ಮಾತನದನಾಲಿಸುತ ಬಳಿಕ ಕಿ ।
ರಾತಗೆಂದೆನು ನಾನು ಬಹು ಸಂ ।
ಪ್ರೀತಿಯಿಂದ ನೃಸಿಂಹದೇವನ ದರ್ಶನವ ಬಯಸಿ ॥
ಈ ತಪವ ರಚಿಸುತ್ತಲಿರ್ಪೆನ ।
ದೇತಕೆನ್ನಯ ಚಿಂತೆ ನಿನಗೆನ ।
ಲಾತನಲ್ಲಿಂ ತೆರಳಿಪೋದನು ಘೋರಕಾನನಕೆ ॥

[48]

ಅಡವಿಯನುಸೇರಿದನು ಮತ್ತಾ |
ವ್ರೂಡನೆಬಂದನು ತನ್ನಕರದಿಂ |
ಪಿಡಿಮತಂದನು ಶಬರನಡವಿಯಲತೆಗಳಿಂಬಿಗಿದು ||
ಮೃಡಸಖನ ಮೂರ್ತಿಯನು ತಾನಿ |
ದ್ದೆಡೆಯೊಳಗೆ ನಿಲ್ಲಿಸುತ ತನ್ನೊಳು |
ನುಡಿದನೀಕ್ಷಿಸು ವಿಪ್ರ ದೇವನನೆನುತಲಾವ್ಯಾಧ || ೩೨

ಕಂಡೆನಾನಿದಿರಿನಲಿ ಮಹಿಮೋ |
ದ್ದಂಡಮೂರ್ತಿ ನೃಸಿಂಹದೇವನ |
ಚಂಡಕಿರಣ ಸಹಸ್ರತೇಜನ ನಮಿತಗುಣಗಣನ ||
ದಿಂಡುಗೆಡಹುತ ತನುವನಾಪದ |
ಪುಂಡರೀಕದೆ ಕರವನುಗಿದಾ |
ಖಂಡಲಾರ್ಚಿತಪದನ ನುತಿಸಿದೆನತುಲಭಕ್ತಿಯಲಿ || ೩೩

ನುತಿಸಲುರೆಮೆಚ್ಚುತ್ತ ಲಕ್ಷ್ಮೀ |
ಪತಿಯು ವರವನು ಬೇಡುನೀನೆಂ |
ದತಿಹಿತದೊಳಾಜ್ಞಾಪಿಸಲು ಮತ್ತೆರಗಿಚರಣದಲಿ ||
ಶ್ರುತಿತತಿಗೆ ಗೋಚರಿಸದಗ್ಗದ |
ಪತಿತಪಾವನ ಚರಣನಖದೀ |
ಧಿತಿಯದರ್ಶನಲಾಭವೇ ವರವಾಯ್ತುತನಗೆನುತ || ೩೪

ಅರುಹಿಭಯಭಕ್ತಿಯಲಿ ಬಳಿಕಾ |
ನರಹರಿಗೆಕೈಮುಗಿದು ಕೇಳ್ದೈ |
ಪರಮಪಾವನನಾದ ನಿನ್ನೀಪಾದಕಮಲಗಳ ||
ದರುಶನವುದುರ್ಲಭವು ಯೋಗೀ |
ಶ್ವರರಿಗೆನೆ ನೀನೀಪುಳಿಂದಗೆ |
ವರದನಾದೆಯದೆಂತು ಪೇಳುವುದೆನುತಬೇಡಿದೆನು || ೩೫

ಅದಕೆ ಹರಿಯಿಂತೆಂದನೆನ್ನೊಳು ।
ಸದುಳವಿಪ್ರನೆ ತನ್ನ ನಿರ್ಮಲ ।
ಹೃದಯದೊಳಗೀಶಬರ ನೆನೆವಂದದಲಿ ಲೋಕದಲಿ ॥
ಪದುಮಸಂಭವ ಸುರಪಮುಖ್ಯ ।
ತ್ರಿದಶಮುನಿಗಳು ನೆನೆಯಲಮ್ಮರು ।
ಸದುಹೃದಯಗದರಿಂದ ತನ್ನನು ತಾನೆತೆತ್ತಿಹೆನು ॥

ಎಂದುವಿಸ್ತರದಿಂದಲಾಗ ಪು ।
ಳಿಂದಕನ ವಿಷಯವನು ತನಗೆರ ।
ವಿಂದನಾಭನು ಪೇಳಿ ಮತ್ತಿಂತೆಂದನೆನ್ನೊಡನೆ ॥
ಕಂದನೀನೆನೆದಾಗ ತನ್ನೀ ।
ಬಂಧುರದ ಘನರೂಪು ನಿನಗಹು ।
ದೆಂದೆನುತ ನರಸಿಂಹನಂತರ್ಧಾನಪರನಾದ ॥

ವರಯತಿಪ ಗೀವಿವರವೆಲ್ಲವ ।
ನರುಹಿಬಳಿಕಾ ನೃಹರಿರೂಪಿನ ।
ಸರಸಿಜಾಂಘ್ರಿಯು ಮತ್ತೆ ಕಾಪಾಲಿಕನದೇಹವನು ॥
ಪರಿಕಿಸುತ ಕೋಪಾಗ್ನಿಪೆರ್ಚುತ ।
ಲಿರಲು ಹೂಂಕರಿಸುತ್ತಜಗವಿದ ।
ನುರುಹುವಂದಿನ ಕಾಲರುದ್ರನ ತೆರದೆಗರ್ಜಿಸಿದ ।

ಇಂತು ನರಪಂಚಾಸ್ಯರೂಪವ ।
ನಾಂತು ಘುಡುಘುಡಿಸುತ್ತ ಕೋಪಾ ।
ಕ್ರಾಂತನಾಗಿಹ ಜಲಜನಾಭನಪರಿಯತಾನರಿದು ॥
ಕಂತುಮಥನನು ಕೋಪಶಾಂತಿಯ ।
ನಿಂತು ರಚಿಸುವೆನೆನುತ ಹರುಷ ।
ಸ್ವಾಂತನಾಗುತಲಾಗ ನುತಿಸಿದನೊಲಿದು ನರಹರಿಯ ॥

ಭೂರಮಾವರ ಲೋಕವಂದಿತ |
ಚಾರುಚರಣಾಂಭೋಜಯುಗ್ಮ ಸು |
ರಾರಿಕುಲಸಂಹಾರ ಭಕ್ತಪ್ರಿಯಸದಾಧಾರ ||
ಮಾರಪಿತಕಂಸಾರಿ ಭವಭಯ |
ದೂರ ಪರಮವಿಚಾರಪಾರಾ |
ನಾರ ನರಹರ್ಯಕ್ಷ ರಕ್ಷಿಪುದೆಂದನಾಯತಿಪ || ೪೦

ನಾರಸಿಂಹನೆ ನಿನ್ನ ನಾಮೋ |
ಚ್ಚಾರಣೆಯ ಮಾತ್ರದಲಿ ಬಹುವಿಧ |
ಘೋರ ಭೂತಪ್ರೇತಪೈಶಾಚಾದಿಬಾಧೆಗಳು ||
ಸೇರಲಮ್ಮವುಸನಿಹಕೆನಲು ಸು |
ರಾರಿಗಳು ಮತ್ತಾರುನಿನ್ನಯ |
ವೈರದಲಿ ನಿಲಬಲ್ಲರೆಂದನು ಯತಿಕುಲೇಶ್ವರನು || ೪೧

ವರರಜೋಗುಣದಿಂದ ಜಗವಿದ |
ವಿರಚಿಸುತ ಸಲಿ ಸತ್ವಗುಣದಿಂ |
ಪೊರೆದು ಲೋಕವನುರುತಮೋಗುಣದಿಂದ ಸಂಹರಿಸಿ ||
ಬೆರೆದುಬೆರೆಯದೆ ನಾಮರೂಪವ |
ಧರಿಸಿಧರಿಸದೆ ಸಗುಣನಿರ್ಗುಣ |
ಪರನಪರನೆಂದೆನಿಪ ಪರತರವಸ್ತುನೀನೆಂದ || ೪೨

ದೇವದೇವ ನೃಸಿಂಹರೂಪಿನೊ |
ಳೀವಿಗಡ ಕಾಪಾಲಿಕನ ನಿ |
ರ್ಜೀವಿಯನು ನೀಮಾಡುತೆನ್ನ ಕಳೇಬರವನಿದನು ||
ಓವಿದೈ ಕೃಪೆಯಿಂದ ವರರಾ |
ಜೀವಲೋಚನಕೃಷ್ಣ ಭಕ್ತಜ |
ನಾವಳಿಯನುದ್ಧರಿಸು ಶಾಂತಿಯನಾಂತುಕರುಣದಲಿ || ೪೩

ಎಂದುನುತಿಸುತ್ತಿರಲು ದೇವನು |
ಕುಂದನಾಕ್ಷಣ ತನ್ನಪೂರ್ವಸ |
ನಂದನಾಕಾರವನು ತಾಳುತಬಂದುಶಂಕರಗೆ ||
ವಂದಿಸಲು ತಕ್ಕೈಸುತಾತನ |
ನಂದಮಿಗೆ ಕೊಂಡಾಡಿ ಶಿಷ್ಯರ |
ವೃಂದದಿಂದೊಡಗೂಡಿ ಹರ್ಷಿಸುತಿದ್ದನಾಯತಿಪ ||

ಇದುಮಹಾಧಿವ್ಯಾಧಿಹರಪಿಂ |
ತಿದು ಮಹಾಪಾಪಪ್ರಭಂಜನ |
ವಿದುಸಕಲ ಪುರುಷಾರ್ಥಸಾಧನವಿದು ಶುಭಪ್ರದವು ||
ಇದನು ಭಕ್ತಿಯಲೋದಿಕೇಳುವ |
ಸದಮಲರಿಗಿಷ್ಟಾರ್ಥವೆಲ್ಲವ |
ಮುದದೆಕರುಣಿಸಿ ಪೊರೆವನಾಶ್ರೀಕಂಠನೊಲವಿನಲಿ ||

ಸಂಧಿ ಇಪ್ಪತ್ತೆಂಟಕ್ಕೆ ಪದ್ಯ ೧೩೮೨ ಕ್ಕೆ ಮಂಗಳ.

## ಇಪ್ಪತ್ತೊಂಭತ್ತನೆಯ ಸಂಧಿ.

ಸೂಚನೆ|| ಪರಮಪಾವನಪವನ ಧರಣೀ |
ಸುರಗೆಸುತನಾಗಿರ್ದು ಶಂಕರ |
ಚರಣಕಮಲಾಶ್ರಯದೆ ಹಸ್ತಾಮಲಕನೆನಿಸಿದನು ||

ಕೇಳುಶೌನಕಮುನಿಪ ನಿಜಶಿ |
ಷ್ಯಾಳಿಯಿಂದೊಡಗೂಡುತಾ ಶ್ರೀ |
ಶೈಲದಿಂಹೊರವಂಟು ಬಹುವಿಧತೀರ್ಥದೇಶದಲಿ ||
ಫಾಲಲೋಚನ ಚರಿಸಿ ಸಜ್ಜನ |
ಜಾಲಕೊಲಿದದ್ವೈತ ತತ್ವವ |
ಪಾಲಿಸುತಲಾ ಪಶ್ಚಿಮಾಬ್ಧಿಯತೀರಕೈದಿದನು ||

ಬಂದುಬಳಿಕಲ್ಲಲ್ಲಿ ಚರಿಸುತ |
ಹಿಂದೆರಾವಣ ತಪವನೆಸಗಿದ |
ಬಂಧುರದ ಗೋಕರ್ಣವೆಂಬಾ ಕ್ಷೇತ್ರವನುಸೇರಿ ||
ಸಿಂಧುಜಲದಲಿಮಿಂದು ಶಿಷ್ಯರ |
ವೃಂದದಿಂದೊಡಗೂಡಿ ಯತಿಪತಿ |
ಯಂದು ದೇವಾಲಯಕೆಬಂದನು ಭಕ್ತಿಭಾವದಲಿ || ೨

ಅಲ್ಲಿತಪವನು ಗೈದರಾಕ್ಷಸ |
ವಲ್ಲಭನರಾವಣನ ವಾಂಛಿತ |
ವೆಲ್ಲವನುಕರುಣಿಸಿದ ಗೋಕರ್ಣೇಶಲಿಂಗವನು ||
ಸಲ್ಲಲಿತಭಕ್ತಿಯಲಿ ಪೂಜಿಸಿ |
ಫುಲ್ಲಬಾಣಾಂತಕನು ಹರ್ಷೋ |
ತ್ಫುಲ್ಲಮಾನಸನಾಗಿ ನುತಿಸಿದನಾ ಮಹೇಶ್ವರನ || ೩

ತೋರುವೀಮಹದಾದಿ ಭೂತಾ |
ಕಾರದಲಿತೋರುತ್ತ ಮತ್ತೀ |
ಧಾರಿಣಿಯಮೇಲಿಸೆವ ಸಚರಾಚರದರೂಪವನು ||
ಭೂರಿವಿಭವದೆತಳೆದು ಮಾಯಾ |
ಧಾರನಾಗಿಯೆ ಬೆಳಗುತೇಕಾ |
ಕಾರದಿಂ ರಾಜಿಸುವ ಪರಮಬ್ರಹ್ಮನೀನೆಂದ || ೪

ಈ ತೆರದೆ ಗೋಕರ್ಣನಾಥನ |
ಸಾತಿಶಯದಿಂಪೊಗಳುತಿರ್ದಾ |
ಭೂತನಾಥನು ಮೂರುದಿನ ಮಲ್ಲಿರ್ದುತಾಂಬಳಿಕ ||
ಖ್ಯಾತವಹ ಬಹುವಿಧದತೀರ್ಥ |
ವ್ರಾತದೇಶವಚರಿಸಿ ಮಹಿಮೋ |
ಪೇತವಹ ಹರಿಶಂಕರಕ್ಷೇತ್ರವನು ಸಾರಿದನು || ೫

ಹರುಷದಿಂದೈತರುತ ಶಂಕರ |
ಪರಮಯತಿಪುಂಗವನು ಬಳಿಕೀ |
ಧರೆಯೊಳಿರುತಿಹನಿಖಿಳ ಹರಿಹರಭೇದವಾದಿಗಳ ||
ಕರಣಕಶ್ಮಲ ಪಡಗುವಂದದೆ |
ನಿರತಹರಿಹರರೇಕದೇಹದೊ |
ಳಿರುವ ಪರಿಯನು ಕಂಡು ನುತಿಸಿದನಾಗ ಹರಿಹರರ ||

ಜಯನಮೋ ಶ್ರೀಕಂಠ ಹರಿಮಯ |
ಜಯನಮೋ ವೈಕುಂಠ ಶಿವಮಯ |
ಜಯನಮೋ ನಾಗಾರಿವಾಹನ ನಾಗಭೂಷಣನೆ ||
ಜಯನಮೋ ನಿಟಲಾಕ್ಷಶಂಕರ |
ಜಯನಮೋ ಕಮಲಾಕ್ಷ ಶುಭಕರ |
ಜಯತುನಾರಾಯಣನೆ ಮೃತ್ಯುಂಜಯ ನಮೋಜಯತು ||

ಎಂದು ಹರಿಹರನುತಿಯನತಿಮುದ |
ದಿಂದ ವಿರಚಿಸಿ ಬಳಿಕ ಶಿಷ್ಯರ |
ವೃಂದವನು ತಾಂಕರೆದು ಹರಿಹರರಿಬ್ಬರೊಂದೆನಿಪ ||
ಅಂದವನು ಭಾವಿಸದೆ ಲೋಕದೆ |
ಮಂದಮತಿಗಳು ಭೇದವಾದಗ |
ಳಿಂದ ದುರ್ಗತಿಗಿಳಿವರೆಂದನು ನಗುತಮದನಾರಿ ||

ಹರಿಯು ಹರರೂಪಿನವ ಮತ್ತಾ |
ಹರನೆ ವರಹರಿರೂಪವಾಂತಿಹ !
ಹರಿಯಹೃದಯವೆ ಹರನು ಮೇಣಾ ಹರಹೃದಯಹರಿಯು ||
ಹರನು ಹರಿಮಯನೆಂತುಟಂತಾ |
ಹರಿಯು ಹರಮಯನಹನು ನರನೀ |
ಹರಿಹರರಿಗೆಂತರವ ಭಾವಿಸದಿರಲು ಗತಿವಡೆವ ||

ಶಿವನು ಲಕ್ಷ್ಮೀರೂಪದಿಂಕೇ ।
ಶವನ ವಕ್ಷದೊಳಿಹನು ಮತ್ತಾ ।
ಭವನತೊಡೆಯೊಳಗಿಹನು ಹರಿ ಗಿರಿಜಾಭಿಧಾನದಲಿ ॥
ಶಿವನವೃಷಭಾಕಾರದಿಂ ಮಾ ।
ಧವನು ವಹಿಸಿಹನೊಲಿದಪರ್ಣಾ
ಧವನು ವಿಷ್ಣುವ ವಹಿಸಿ ನಡೆವನು ಗರುಡರೂಪಿನಲಿ ॥ ೧೦

ಒಂದೆ ಪರತರವಸ್ತು ತೋರುವು ।
ದಂದದಿಂದೆರಡಾಗಿ ಹರಗೋ ।
ವಿಂದರೆಂಬಭಿಧಾನದಿಂದಲುಪಾಧಿಭೇದದಲಿ ॥
ಇಂದುಶೇಖರನಿಂದಿರಾಧವ ।
ರೊಂದೆನುತ ಭಾವಿಸದೆ ಭೇದವ ।
ಪೊಂದಿದವ ಮುಳುಗುವನು ರೌರವನಾಮನರಕದಲಿ ॥ ೧೧

ಎಂದುಹರಿಶಂಕರರ ಮಹಿಮೆಯ ।
ನಿಂದುಶೇಖರನಖಿಳ ಶಿಷ್ಯರ ।
ವೃಂದದೊಡನರಹುತ್ತಬಳಿಕಲ್ಲಿಂದ ಬೀಳ್ಕೊಂಡು ॥
ಮುಂದೆಬರುತಿರಲಾಗ ಮಾರ್ಗದೊ ।
ಳೊಂದು ಶಿಶುಮೃತಿಯಾಂತುಬಿದ್ದಿರೆ ।
ತಂದೆತಾಯ್ಗಳುಮರುಗುತಿರ್ದರು ಬಂಧುಜನರೊಡನೆ ॥ ೧೨

ಬಾಲಶವವನು ತೊಡೆಯೊಳಿಟ್ಟತಿ ।
ಗೋಳಿಡುತಲಿರಲವರ ಕಾಣುತ ।
ಬಾಲಶಶಿಧರನಾಗ ಮನದೊಳಗತುಲದುಃಖವನು ॥
ತಾಳಿಮರಗುತಿರಲು ಬಳಿಕಾ ।
ಮೇಲಿನಿಂದಶರೀರವಾಕ್ಯವು ।
ಕೇಳಿಬಂದುದು ಬೆರಗಿನಿಂದಿರೆಸಕಲಜನಜಾಲ ॥ ೧೩

ಪೊರೆಯುಲಕ್ಷಣಸನಾದ ಮನುಜನ |
ಮರುಕವಂದಪೆ ನಿನ್ನ ಕರುಣವು |
ಬರಿದೆಹೋಹುದೆ ಯತಿಪ ಕೇಳೆಂದುದು ನಭೋನಿನದ ||
ವರಯತಿಪನಿದಕೇಳಿ ಲೋಕನ |
ಪೊರೆವಮಹಿಮಾರ್ಣವನ ಮಾತಿನ |
ಪರಿಯುಲೇಸಾಯ್ತೆಂದು ನುಡಿದನು ಬಹುಳಹರ್ಷದಲಿ ||

ಇಂತುನುಡಿಯುತಲಿರಲುಮರಣದ |
ನಾಂತ ಶಿಶುವ್ಮೈಮುರಿಯುತೆದ್ದುದು |
ಸಂತಸದೊಳಾಕ್ಷಣವೆ ಜನನೀಜನಕರ್ಕೈತಂದು ||
ಕಂತುಮಥನಂಗೆರಗಿ ತಮ್ಮಯ |
ಸಂತತಿಯರಕ್ಷಿಸಿದೆ ಯೆನುತ |
ತ್ಯಂತಭಕ್ತಿಯೊಳೊರೆದು ಬೀಳ್ಕೊಂಡರುನಿಜಾಲಯಕೆ ||

ಬಳಿಕಲಾಶಂಕರನು ಶಿಷ್ಯರ |
ಬಳಗದಿಂದೊಡಗೂಡುತಲ್ಲಿಂ |
ಬಳೆಸಿಬಹುವಿಧ ತೀರ್ಥಯಾತ್ರೆಯನಾಚರಿಸಿಬರುತ ||
ಲಲಿತೆಯಾ ಮೂಕಾಂಬಿಕಾಖ್ಯೆಯು |
ತಳೆದುಭಕ್ತರ ಪೊರೆಯಲೋಸುಗ |
ನೆಲೆಸಿರುವ ಕೊಲ್ಲೂರಿಗೈತಂದನು ಸರಾಗದಲಿ ||

ತಾಲಬಕುಳಾಶ್ವತ್ಥರಮ್ಯರ |
ಸಾಲಪನಸಪ್ರಮುಖ ವಿಟಪೀ |
ಮಾಲೆಯಿಂರಂಜಿಸುವರವರವ್ಯೋಪಶಲ್ಯದಲಿ ||
ಶೀಲದಿಂದರ್ಚಿಸುವ ಸಾಧಕ |
ಜಾಲಸಿದ್ಧಿಸ್ಥಲವು ಮೂಕಾಂ |
ಬಾಲಯವುಶೋಭಿಸಲುಬಂದನು ಬಾಲಶಶಿಮೌಳಿ ||

[16]

ಬಂದು ದೇವಿಯಚರಣದರ್ಶನ |
ದಿಂದಲಾವಿರ್ಭವಿಸಿದತ್ಯಾ |
ನಂದ ಬಾಷ್ಪದಬಿಂದುವುದುರಲು ನೇತ್ರಯುಗ್ಮದಲಿ ||
ನಿಂದಿರಲು ರೋಮಗಳು ಯತಿಪತಿ |
ಯಂದು ಬಹುಭಕ್ತಿಯಲಿ ದೇವಿಗೆ
ವಂದಿಸುತ ಬಳಿಕೆದ್ದು ಕೈಗಳಮುಗಿದು ನುತಿಸಿದನು || ೧೮

ದೇವಿ ತವಪದವನಜಯುಗ್ಮವ |
ನಾವಗಮ್ಮಾವಾಹಿಸುತ್ತಲಿ |
ಭಾವದಲಿ ಸಕಲೋಪಚಾರಗಳಿಂದ ಪೂಜಿಸುತ ||
ಭಾವಕರು ಧನ್ಯತೆಯಪಡೆವರು |
ದೇವದೇವಾಧಿಪರು ನಿನ್ನಯ |
ಪಾವನಾಂಘ್ರಿಯ ಭಜಿಸಿ ಪಡೆವರು ಪರಮಸಂಪದವ || ೧೯

ಲೋಕರಚನಾಕ್ರಮವು ನಿನ್ನದು |
ಲೋಕಸಂರಕ್ಷಣೆಯು ನಿನ್ನದು |
ಲೋಕಸಂಹನನಪ್ರಪಂಚಕೆ ಕಾರಣವು ನೀನು ||
ಲೌಕಿಕಾಮುಷ್ಮಿಕದಸುಖಗಳು |
ಲೋಕಮಾತೆಯೆ ನಿನ್ನಕರುಣಾ |
ಲೋಕದಿಂ ಲಭಿಸುವವು ನಿಜ್ಜಯುವೆಂದನಾಯತಿಪ || ೨೦

ಆರಪೂರ್ವಮಹಾತ್ಮರೆನಿಸುವ |
ಸೂರಿಗಳು ಪೇಳಿರ್ಪ ತೆರದಿಂ |
ಸಾರತರದ ಸಮಾಧಿಯೋಗದೆ ಸಾರ್ವಕಾಲದೊಳು ||
ಚಾರುತರ ಭವದೀಯಪದಯುಗ |
ಸಾರಸವ ನೆನೆಯುತ್ತಲಿರ್ಪರು |
ಘೋರಭವಸಾಗರವ ದಾಂಟುತ ಧನ್ಯರಹರವರು || ೨೧

ಹೇಮವರ್ಣದ ನಾಲ್ಕುದಳದು |
ದ್ದಾಮದಾಧಾರಾಖ್ಯಚಕ್ರದೊ |
ಳಾಮಹಾವಿದ್ರುಮದವರ್ಣದ ಷಡ್ದಳಂಗಳಲಿ ||
ಧಾಮವಡೆದೆರಡನೆಯಚಕ್ರದ |
ಸೀಮೆಯಲಿ ದಶದಳದ ವರ ನಿ |
ಸ್ಸೀಮ ಧೂಮ್ರಸುವರ್ಣಮಣಿಪೂರಾಖ್ಯಚಕ್ರದಲಿ ||

ಧರೆಯ ಭೋಗವಬಯಸಿ ನಿನ್ನಯ |
ಚರಣಯುಗ್ಮಾಂಬುಜವ ಬಯಸುವ |
ನರರು ನಿನ್ನಯ ಪುರವಪೊಗಲಸಮರ್ಥರಾಗಿರುತ ||
ಪುರಬಹಿಃಪ್ರಾಂತ್ಯದಲಿ ನಿಲುವರು |
ನರಗೆ ಭೋಗಾಪೇಕ್ಷೆಯಿದ್ದೊಡೆ |
ಪರಮಪದವದು ದೊರೆಯದೆಂಬುದು ಸುಪ್ರಸಿದ್ಧವಲೆ ||

ನಿನ್ನನಾ ಪಿಂಗಳಸುವರ್ಣದ |
ಹನ್ನೆರಡುದಳವುಳ್ಳನಾಹತ |
ದುನ್ನತದಚಕ್ರದಲಿ ನೆನೆಯುತ ಪೂಜೆಗೈದಿರುವ ||
ಸನ್ನುತರು ಭವದೀಯಪುರದೊಳ |
ಗುನ್ನತದ ಸೌಖ್ಯವನುಪಡೆಯುತ |
ನನ್ನಿಯಿಂದಿರುತಿಹರು ಶಾಶ್ವತವಾಗಿ ಮುದದಿಂದ ||

ಶುದ್ಧಷೋಡಶದಳದ ವರ ಪರಿ |
ಶುದ್ಧಧೂಮ್ರಸುವರ್ಣವಾಂತ ವಿ |
ಶುದ್ಧಸಂಜ್ಞಾಚಕ್ರಮಧ್ಯದೆ ನಿನ್ನಜಾನಿಸುವ ||
ಬುದ್ಧಿವಂತರು ಯೋಗಮಾಯಾ |
ಬದ್ಧರಾಗದೆ ನಿನ್ನದಯೆಯಿಂ |
ಶುದ್ಧಸಾಮೀಪ್ಯದಲಿ ನಿಲುವರು ಬಹುಳವಿಭವದಲಿ ||

ಭೂರಿ ಸಾಸಿರದಳದ ವರಕ |
ರ್ಪೂರವರ್ಣದ ಮೆರೆವ ಪರಮೋ |
ದಾರದಾಜ್ಞಾಭಿಖ್ಯೆಯಾಂತಿಹ ಚಕ್ರಮಧ್ಯದಲಿ ||
ವಾರಿರುಹಮಂದಿರೆಯೆ ನಿನ್ನನು |
ಸೇರಿಸುತ ನೆನೆದವರು ನಿನ್ನ ಪ |
ದಾರವಿಂದವ ಪಡೆವರಾಸಾರೂಪ್ಯಪದವಿಯಲಿ || ೨೬

ಲಲಿತೆ ನಿನ್ನಪದಾರವಿಂದವ |
ನಿಲಿಸುತಾಧ್ರುವಮಂಡಲಾಖ್ಯೆಯ |
ತಳೆದ ಸಾಸಿರಪತ್ರಮಧ್ಯದೆ ನೆನೆವ ಸಾಧಕರು ||
ಬಲುತೆರದ ಮೋಹಗಳನೆಲ್ಲವ |
ಕಳೆದು ವರಸಾಯುಜ್ಯಪದದಲಿ |
ನಿಲುವರೆನೆ ನಿನ್ನತುಲಮಹಿಮೆಗೆ ಸಾಮ್ಯವಿಲ್ಲೆಂದ || ೨೭

ಚಕ್ರಪಾಣಿಸಹೋದರಿ ಶ್ರೀ |
ಚಕ್ರಮಧ್ಯಸ್ಥಿತಿಯೆ ಸುಮನಸ |
ಚಕ್ರವರ್ತಿನತಾಂಘ್ರಿಸಾರಸಯುಗ್ಮೆ ಶುಭಚರಿತೆ ||
ಚಕ್ರಧರೆ ಪೊರೆಯೆನ್ನ ವರಷ |
ಟ್ಚಕ್ರಸಂಸ್ಥಿತೆಯೆನುತ ಯತಿಕುಲ |
ಚಕ್ರವರ್ತಿಯು ನಮಿಸಿದನು ಮೂಕಾಂಬಿಕಾಪದಕೆ || ೨೮

ಇಂತು ಮೂಕಾಂಬಿಕೆಯ ಪದವನ |
ನಂತವಿಧದಲಿ ನುತಿಸಿ ನಮಿಸುತ |
ಕಂತುರಿಪು ಯತ್ಯಾಶ್ರಮೋಚಿತ ಭಿಕ್ಷವನುಚರಿಸಿ ||
ಶಾಂತಮಾನಸರಾದ ಜನರಿಗೆ |
ನಂತವೈಭವವಿತ್ತು ಶಿಷ್ಯರ |
ಸಂತತಿಯನೊಡಗೊಂಡು ಕೊಲ್ಲೂರಿಂದ ಬೀಳ್ಕೊಂಡು || ೨೯

ಹಲವುಪಯಣದಮೇಲೆ ಬಂದಾ ।
ಬಲಿಪುರಾಖ್ಯೆಯ ತಳೆದು ವಿಪ್ರರ ।
ನಿಳಯಗಳಸಾಲಿನಲಿ ರಂಜಿಸುವಗ್ರಹಾರವನು ॥
ಕಲುಷದೂರನು ಪೊಗಲು ಭೂಸುರ ।
ನಿಳಯಗಳು ರಂಜಿಸುತಲಿರ್ದವು ।
ಬಲುತೆರದ ಸಿರಿಯಾಂತುತಿರ್ಸಾಸಿರದಸಂಖ್ಯೆಯಲಿ ॥

ಅಲ್ಲಿವಾಸಿಪ ವಿಪ್ರಸಂಕುಲ ।
ವೆಲ್ಲ ವೇದಾಧ್ಯಯನ ತತ್ಪರ ।
ರೆಲ್ಲರುಂ ಸತ್ಕರ್ಮನಿಷ್ಠರು ಶಾಸ್ತ್ರಕೋವಿದರು ॥
ಸಲ್ಲಲಿತ ಯಜ್ಞಗಳನೇಕವ ।
ನುಲ್ಲಸದೊಳಾಚರಿಸಿ ಸಂತತ ।
ಫುಲ್ಲನಾಭನ ಪಾದಸರಸಿಜಭಕ್ತಿಯೊಳಗಿಹರು ॥

ಇಂತೆಸೆವ ಭೂಸುರರನಡುವೆಯ ।
ನಂತ ತಾರಾಪರಿವೃತೇಂದುವಿ ।
ನಂತೆ ವರಭಂಗಾರಹಾರದ ಪದಕಮಧ್ಯದಲಿ ॥
ಸಂತತವು ಶೋಭಿಸುವ ರತ್ನದ ।
ಕಾಂತಿಯಂದದಲೋರ್ವ ವಿಪ್ರನ ।
ನಂತಗುಣಮಂಡಿತನು ಶೋಭಿಸುತಿರ್ದನೊಲವಿನಲಿ ॥

ವರಕುಮಾರಿಲ ಭಟ್ಟಗಾತನು ।
ಪರಮಶಿಷ್ಯನು ಕರ್ಮಕಾಂಡದೆ ।
ಪರಿಣತನು ತಾನಾ ಪ್ರಭಾಕರನಾಮಶೋಭಿತನು ॥
ಪರಿಪರಿಯಯಜ್ಞಗಳ ವಿರಚಿಸಿ ।
ಸುರಕುಲವ ಸಂತುಷ್ಟಿಪಡಿಸುತ ।
ಸಿರಿಯುತನು ತಾನಾಗಿ ರಂಜಿಪನಗ್ರಹಾರದಲಿ ॥

ಧನಕನಕಧಾನ್ಯಗಳು ಬಹುಗೋ |
ಧನ ನೆರವಿತುಂಬಿರಲು ಮನೆಯೊಳು |
ಮನಕೆಲೇಶವು ಸುಖವಕಾಣದೆ ವಿಪ್ರನಳಲುವನು ||
ತನಯನೊಬ್ಬನು ಮೂಕಭಾವವ |
ನನುಕರಿಸಿಕೊಂಡಿರಲು ಸಂತತ |
ವನಿತೆಸಹ ಮರುಗುತ್ತಲಿದ್ದನು ಸಿರಿಯಲಿಕ್ಕಿಸದೆ || ೩೪

ಮಾರನಾಕಾರದ ಕುಮಾರನು |
ಧಾರಿಣೀಸದೃಶಕ್ಷಮಾನ್ವಿತ |
ಚಾರುಚಂದ್ರಮ ಸದೃಶಮುಖಮಂಡಿತನು ತೇಜಸ್ವಿ ||
ಆರೊಡನೆ ಮಾತಾಡಲೊಲ್ಲನ |
ದಾರಸೇರನು ಬಾಲರೊಡನೆ ವಿ |
ಹಾರಕೈದನು ಮುಗ್ಧಚೇಷ್ಟಿತನಾಗಿ ಕುಳಿತಿಹನು || ೩೫

ಇಂತು ಸುತನಿರುತಿರಲು ಚಿಂತಾ |
ಕ್ರಾಂತನಾಗುತಲಾಪ್ರಭಾಕರ |
ಸಂತತವು ಸಂತೋಷವರ್ಜಿತನಾಗಿ ಸತಿಸಹಿತ ||
ಭ್ರಾಂತನಾಗಿರುತಿರ್ದು ಕೇಳ್ದನ |
ನಂತಮಹಿಮನು ಯತಿಪ ಶಿಷ್ಯರ |
ಸಂತತಿಯನೊಡಗೂಡಿಬಂದಿಹನೆಂಬವಾರ್ತೆಯನು || ೩೬

ತಾಳಿದನು ಹರ್ಷವನು ಯತಿಕುಲ |
ಮೌಳಿಗಭಿನಮಿಸುತ್ತ ತನ್ನಯ |
ಬಾಲಕನ ಪೂರ್ವಾಪರ ಸ್ಥಿತಿಗತಿಯ ವಿವರವನು ||
ಕೇಳಿ ತಿಳಿವೆನೆನುತ್ತ ಬಾಂಧವ |
ಜಾಲದಿಂದೊಡಗೂಡಿ ಯತಿಕುಲ |
ಪಾಲಕನ ಪದದರ್ಶನಾರ್ಥದೆ ತೆರಳಲನುವಾದ || ೩೭

ಬರಿಯಹಸ್ತದೆ ರಾಜಗುರು ದೇ |
ವರಸಮೀಪಕೆ ಪೋಗಬಾರದ |
ಪರಿಯನರಿದಾ ವಿಪ್ರವರನಂದಮೃತಫಲಗಳನು ||
ತರಿಸಿ ಶಿಷ್ಯರುಪೆರಿಸಿ ಸತಿಯನು |
ಕರೆಸಿ ಸುತಸಹ ತೆರಳಿ ಗುರುಶಂ |
ಕರಪದಾಂಬುಜದರ್ಶನೋತ್ಸವದಿಂದ ನಡೆತಂದ ||

ಹಲವುಫಲಗಳತಂದು ಶಂಕರ |
ಲಲಿತ ಪದಪಂಕಜದೊಳರ್ಪಿಸಿ |
ನಲವಿನಿಂ ಸಾಷ್ಟಾಂಗದಿಂದಭಿವಂದನೆಯನೆಸಗಿ ||
ಬಳಿಕ ಮಗನನು ತಂದು ಗುರುಪದ |
ನಳಿನದೊಳಗರ್ಪಿಸುತ ಮಾನಸ |
ದಳಲ ನೂಕುತ ಕರವಜೋಡಿಸಿ ನುಡಿದನಿಂತೆಂದು ||

ಗುರುವರನೆ ಲಾಲಿಪುದು ತನ್ನಯ |
ತರಳನಿವ ಹದಿಮೂರುವರುಷದ |
ಹರೆಯವವ ಜನಿಯಿಸಿದ ದಿನದಿಂದಿಂದುಪರಿಯಂತ ||
ಬರಿಯಜಡನಂತಿರುವನೀತನ |
ಪರಿಯನರಿಯಲು ಬಾರದಂತಿದೆ |
ಕರುಣೆನೀಂ ರಕ್ಷಿಸುವುದೀತನನೆಂದು ಕೈಮುಗಿದ ||

ಬೇಡನಾಹಾರವನು ಕೊಡದಿರೆ |
ನೀಡಿದರೆ ಮಿತಿಯಿಲ್ಲದುಂಬನು |
ಖೋಡಿಗಳೆದರೆ ಖತಿಯತಾಳನು ಮನದೊಳೆಳ್ಳನಿತ ||
ನೋಡನೇನನು ಕಾರ್ಯವೇನನು |
ಮಾಡಲೊಲ್ಲನು ಕಂಡವಸ್ತುವ |
ಬೇಡಲರಿಯನು ಮೂಢನಂತಿಹನೀಕುಮಾರಕನು ||

ಕಾಲಕಾಲಕೆ ತಪ್ಪದಂದದೆ |
ಚೌಲವುಪನಯನಾದಿ ಸತ್ಕ |
ರ್ಮಾಳಿಗಳನೆಸಗಿದೆನು ವಿಪ್ರರಶೀಲಬಿಡದಂತೆ ||
ಪಾಲಿಸುವುದೀತನನು ಪರಮಕೃ |
ಪಾಳು ನೀನೆಂದೆನುತ ತನ್ನಯ |
ಮೌಳಿಯನು ಚಾಚಿದನು ಯತಿಪದಪಯೋಜದಲಿ || ೪೨

ಎಂದಮಾತನು ಕೇಳಿ ಬಹುದಯೆ |
ಯಿಂದ ವಿಪ್ರನ ಸಂತವಿಸುತಿಂ |
ತೆಂದನಾತನಸುತನಕುರಿತಾ ಯತಿಪನತಿಮುದದೆ ||
ಕಂದ ನೀನಾರೇಕೆ ಜಡತನ |
ದಿಂದ ವರ್ತಿಪೆಯೆನಲು ಬಳಿಕಾ |
ನಂದನನು ನಸುನಗುತ ಗುರುವರಗೆಂದನುತ್ತರವ || ೪೩

ಸಾನುರಾಗದೆ ಲಾಲಿಸುವುದು ಮ |
ಹಾನುಭಾವಯತೀಶಗುರುವರ |
ನಾನು ಜಡನಲ್ಲೆನ್ನಬಳಿಗೆ ಜಡತ್ವಸೇರದಲೆ ||
ನಾನು ಷಡ್ಭಾವದ ವಿಕಾರವ |
ನೇನಹೊದ್ದದ ಪರಮನಿರ್ಮಲ |
ನಾನು ಪರಮಬ್ರಹ್ಮಚೈತನ್ಯಾತ್ಮನಹೆನೆಂದ || ೪೪

ಭೇದರಹಿತ ಬ್ರಹ್ಮವಸ್ತುವ |
ನಾದರದೆ ಬೋಧಿಸುವ ಪರಮಾ |
ಹ್ಲಾದಕರ ತತ್ವಾರ್ಥಸಾರವನನಿತ ಭಕ್ತಿಯಲಿ ||
ದ್ವಾದಶಶ್ಲೋಕಗಳಲೀಪರಿ |
ಭೂದಿವಿಜಗೋತ್ರಜನು ವಿವರಿಸ |
ಲಾದಿಶಂಕರನೊಲಿದು ನುಡಿದನು ಮಂದಹಾಸದಲಿ || ೪೫

ಕರವನೆಲ್ಲಿಯ ಕಾಯತೆರದೊಳ |
ಗುರುತರಾಮ್ನಾಯಾರ್ಥಸಾರವ |
ನೊರೆಯುಪೀಶ್ಲೋಕಗಳು ಹಸ್ತಾಮಲಕನಾಮವನು ||
ಧರಿಸಿರಲಿ ತನ್ನಾಮವನೆ ನೀ |
ಧರಿಸೆನುತ ಶಂಕರನು ತನ್ನಯ |
ಸಿರಿಕರದೆ ತಡವಿದನು ಬಾಲಕನುತ್ತಮಾಂಗವನು || [illegible]

ಈತೆರದೆ ಕರುಣಿಸುತ ಚೇತೋ |
ಜಾತರಿಪುವಾಬಳಿಕ ಬಾಲನ |
ತಾತನನು ನೋಡುತ್ತಲೀತ ವಿರಕ್ತಿಮಾರ್ಗದಲಿ ||
ಖ್ಯಾತನಾಗಿಹನಾಗಿ ನಿನಗಿ |
ನ್ನೀತನಲಿ ಫಲವಿಲ್ಲ ಬಹು ಸಂ |
ಪ್ರೀತಿಯಲಿ ನೀನಿವನ ನೆಮ್ಮಲಿಬಿಟ್ಟುಪೋಗೆಂದ || [illegible]

ಹರನಿರೂಪವ ಕೇಳಿ ಧರಣೀ |
ಸುರನು ಸಮ್ಮತಿಸುತ್ತ ತನ್ನಯ |
ಪರಿಜನಗಳೊಡಗೂಡಿ ಶಂಕರ ಚರಣಕಮಲದಲಿ ||
ಎರಗಿ ತನ್ನಯ ಸುತನಧನ್ಯತೆ |
ಹಿರಿದೆನುತ ಕೊಂಡಾಡಿ ನಿಳಯಕೆ |
ತೆರಳಿದನು ನೆನೆಯುತ್ತಲಾಶ್ರೀಕಂಠಯತಿಪದವ || [illegible]

ಸಂಧಿ ಇಪ್ಪತ್ತೊಂಭತ್ತಕ್ಕೆ ಪದ್ಯ ೧೪೩ಂಕ್ಕೆ ಮಂಗಳ.



# ಮೂವತ್ತನೆಯ ಸಂಧಿ.



ಸೂಚನೆ: ಸಂಗರಹಿತನು ಸಕಲಶಿಷ್ಯರ |
ಸಂಗಡದೊಳಾಮ್ನಾಯಪೀಠವ |
ಶೃಂಗಗಿರಿಯೊಳು ರಚಿಸಿ ನೆಲೆಗೊಳಿಸಿದನು ಶಾರದೆಯ ||

ಶೀಲಗುಣಸಂಪನ್ನ ಭೃಗುಕುಲ |
ಮೌಳಿಮಣಿ ಶೌನಕಮುನೀಂದ್ರನೆ |
ಕೇಳು ಹಸ್ತಾಮಲಕನಿಂ ಸಂಸೇವ್ಯನಾಗುತಲೆ ||
ಬಾಲಶಶಧರಮೌಳಿ ಶಿಷ್ಯರ |
ಜಾಲದಿಂದೊಡಗೂಡಿ ಪರಮವಿ |
ಶಾಲ ವರವಿಪ್ರಾಗ್ರಹಾರದೊಳಿರ್ದನೊಲವಿನಲಿ || ೧

ಕೆಲವುದಿನಮಲ್ಲಿರ್ದು ಸಂಯಮಿ |
ಕುಲತಿಲಕನಲ್ಲಿಂದ ತೆರಳುತ |
ಜಲಜಪಾದ ಸುರೇಶ್ವರಾದಿಗಳೊಡನೆ ನಡೆತರುತ ||
ಹಲವುಶೃಂಗಗಳುಳ್ಳ ಗಿರಿಸಂ |
ಕುಲದಮಧ್ಯದೆ ನೆರೆ ವಿರಾಜಿಸು |
ವಲಘುಮಹಿಮೆಯ ಶೃಂಗಗಿರಿಯನು ಪೊಕ್ಕನತಿಮುದದೆ || ೨

ಪರಮುನಿಪ ಕೇಳ್ಪೂರ್ವಯುಗದೊಳು |
ಸುರಪತಿತ್ವವ ಬಯಸಿ ತಪವಾ |
ಚರಿಸುತಘಮರ್ಷಣದೊಳಿದ್ದನು ಮುನಿವಿಭಾಂಡಕನು ||
ತರುಣಿಯೂರ್ವಶಿ ಸುಳಿಯಲಿದಿರೊಳು |
ಕರಣ ಚಂಚಲಮಾಗೆ ಮುನಿಪಗೆ |
ಸರಿದುಬಿದ್ದುದು ವೀರ್ಯವಾಕ್ಷಣ ನದಿಯನೀರಿನಲಿ || ೩

ಜಲಜಭವನಿಚ್ಛೆಯಲಿ ಬಂದುದು ।
ಜಲವನೀಂಟೆ ಕುರಂಗಿಯೊಂದಾ ।
ಜಲವನಿಂದ್ರಿಯಗೂಡಿ ಕುಡಿಯುದು ನಿಮಿಷಮಾತ್ರದಲಿ ॥
ಸಲೆಧರಿಸಿಗರ್ಭವನು ಪಡೆದುದು ।
ತಲೆಯೊಳೊಂದೇಕೋಡನಾಂತುರೆ ।
ಜಲಜಸಖರಶ್ಮಿಯನು ಪಳಿವಂತೆಸೆವ ನರಶಿಶುವ ॥

ಬಂದನಲ್ಲಿಗೆ ಮುನಿವಿಭಾಂಡಕ ।
ನಂದು ಶಿಶುವನುಕಂಡು ಸಂಭ್ರಮ ।
ದಿಂದು ತಂದನು ಪರ್ಣಶಾಲೆಗೆ ತನ್ನನಂದನನ ॥
ಇಂದುಶೇಖರನಿತ್ತ ಶಿಶುವನು ।
ನಂದ ಸಂಭ್ರಮದಿಂದ ಪಾಲಿಸು ।
ತಂದದಿಂ ಹೆಸರಿಟ್ಟ ಋಷ್ಯಶೃಂಗನೆಂದೆನುತ ॥

ಕೆಲವುದಿನ ಸುತನೊಡನೆ ಮುನಿಕುಲ ।
ತಿಲಕನೀಪರಿಯಿರ್ದು ಮನದೊಳು ।
ತಳೆದು ವೈರಾಗ್ಯವನು ಕಾಮಾದ್ಯಖಿಳರಿಪುಗಳನು ॥
ಗೆಲಿದ ಷಡ್ಭಾವದ ವಿಕಾರನ ।
ತುಳಿದು ನಿಜಮೋಕ್ಷೈಕಪದವನು ।
ಸುಲಭದಿಂ ಸಾಧಿಸುವ ಮನದೊಳಗಿರ್ದನನುದಿನದೆ ॥

ಸಲ್ಲಲಿತಭಕ್ತಿಯಲಿ ಶಿವಪದ ।
ಪಲ್ಲವದೊಳೆಲ್ಲವಸಮರ್ಪಿಸಿ ।
ಫುಲ್ಲಭವನಪ್ಪಾರ ನಶ್ವರದೇಹವನು ತೊರೆದು ॥
ಮಲ್ಲಿಕಾರ್ಜುನಲಿಂಗದೊಳಗ ।
ತ್ಯುಲ್ಲಸದೊಳೈಕ್ಯವನು ಪಡೆದನು ।
ಬಲ್ಲಿದರಿಗೇನರಿದೆ ಭಾವಿಸೆ ಪರಮಪುರುಷಾರ್ಥ ॥

ವರವಿಭಾಂಡಕನಿಂತು ಮೋಕ್ಷವ ।
ನೆರೆ ಪಡೆವ ತರುವಾಯಲಾತನ ।
ವರತನಯ ತಾನಲ್ಲಿನಿಂದನು ತಪವನಾಚರಿಸಿ ॥
ಧರೆಯೊಳಾಸ್ಥಳ ಶೃಂಗಗಿರಿಯೆಂ ।
ಬುರುತರಖ್ಯಾತಿಯನು ಪಡೆದುದು ।
ವರಯತಿಪನೈತಂದನಲ್ಲಿಗೆ ಶಿಷ್ಯಜನರೊಡನೆ ॥ ೮

ಹರಿಪದಾಂಬುಜಜಾತೆಯೆನಿಸುವ ।
ಸುರಧುನಿಯ ಮಹಿಮೆಯನು ತಾಳುತ ।
ವರವರಾಹಸುದಂಷ್ಟ್ರದಿಂದುದ್ಭವಿಸಿ ಧರೆಯೊಳಗೆ ॥
ಪರಹಿತಾರ್ಥದೆ ಪರಿವ ತುಂಗಾ ।
ವರನದಿಯು ಶೋಭಿಪುದು ಸಂತತ ।
ಪರಮಪುಣ್ಯಕ್ಷೇತ್ರವೆನಿಪಾಶೃಂಗಗಿರಿಯೊಳಗೆ ॥ ೯

ಅಂತೊಡೆಯು ವೈಭವವ ಸದ್ಗುಣ ।
ವಂತೆಯುರು ಗರ್ವದಲಿ ಮೆರೆಯದೆ ।
ಶಾಂತಿಗಾಂಭಿರ್ಯಾದಿ ಗುಣದಿಂ ರಾಜಿಸುವತೆರದೆ ॥
ಸಂತತವು ಪೂರ್ಣಪ್ರವಾಹವ ।
ನಾಂತಡೆಯು ಭೋರ್ಗರೆದು ಮೊರೆಯದೆ ।
ಶಾಂತಿಯಿಂ ಪ್ರವಹಿಸುತ ತುಂಗಾನದಿ ವಿರಾಜಿಪುದು ॥ ೧೦

ಪೂರ್ವದಿಂದೀಕ್ಷೇತ್ರಕೊದವಿದ ।
ಪೂರ್ವಯಶಮುತ್ತರಕೆ ವೃದ್ಧಿಯ ।
ಸಾರ್ವದವು ಪೊಂದುವುದು ನಿಜವೆಂದೆಂಬರೀತಿಯಲಿ ॥
ಪೂರ್ವದಿಙ್ಮುಖವಾಗಿ ಪರಿಯುತ ।
ಪೂರ್ವಮಹಿಮೆಯನಾಂತ ತಟನಿಯು ।
ಪೂರ್ವದಿಂದುತ್ತರಕೆ ತಿರುಗುತಲಿಹುದು ಸಂತತವು ॥ ೧೧

ವರನದಿಗುದೀಚಿಯಲಿ ಶೋಭಿಪ |
ಗಿರಿಯಮಧ್ಯದೊಳೆಸುವುದುನ್ನತ |
ಪರಶಿವಾಲಯಮಲ್ಲಿಗೈತಹ ಭಕ್ತಸಂತತಿಗೆ ||
ಪರಿಪರಿಯವರಗಳನು ನಿತ್ಯವು |
ಕರುಣಿಸುತಲಲ್ಲಿರುವನಾ ಶಂ |
ಕರನುಮಾಸಹ ಮಲ್ಲಿಕಾರ್ಜುನನೆಂಬ ಪೆಸರಿನಲಿ ||

ಇಂತೆಸೆವ ಸುಸ್ಥಳಕೆ ರಜನೀ |
ಕಾಂತಶೇಖರನೊಲಿದು ಸಜ್ಜನ |
ಸಂತತಿಗೆ ಪರತತ್ವವಿದ್ಯಾಸಾರಸಂಗ್ರಹವ ||
ಸಂತತವು ಬೋಧಿಸುತಲವರಿಗೆ |
ಶಾಂತಿದಾಂತಿಯನಿತ್ತು ಶಿಷ್ಯರ |
ನಂತರಿಂ ಸಂಸೇವ್ಯನಾಗುತಲಿರ್ದನನುದಿನದಿ ||

ಬ್ರಹ್ಮಸೂತ್ರದ ಭಾಷ್ಯವನು ತಾಂ |
ಬ್ರಹ್ಮಕುಲಜಾತರಿಗ ಶುದ್ಧ |
ಬ್ರಹ್ಮವಿದನೆಂದೆನಿಪ ಯತಿಪತಿಯೊಲಿದು ಬೋಧಿಸುತ ||
ಬ್ರಹ್ಮವಿದ್ಯಾಪ್ರಚುರದಿಂದಾ |
ಬ್ರಾಹ್ಮಣರನುದ್ಧರಿಸಿ ಪರಮ |
ಬ್ರಹ್ಮಪದವನು ಸುಲಭಗೈದನು ಲೋಕಹಿತಕಾಗಿ ||

ಹಲವುದಿನಗಳ ನಿಂತು ಕಳೆದಾ |
ಬಳಿಕ ತುಂಗಾನದಿಯತೀರದ |
ಲಲಘುಮತಿ ಯತಿಪತಿಯು ಶಂಕುಸ್ಥಾಪನೆಯನೆಸಗಿ ||
ವಿಲಸದುನ್ನತ ಸುರವಿಮಾನವ |
ಪಳಿಯುವಾಪ್ರಾಸಾದಮೊಂದನು |
ಜಲಜಭವಸೃಷ್ಟಿಯಲಿ ಪೊಸತೆನೆ ರಚನೆಗೈಸಿದನು ||



ಶ್ರೀ ಶೃಂಗಗಿರಿ ಶಾರದಾಂಬಾ

ದೇವಮಂದಿರದೊಳಗೆ ವರವಾ |
ಗ್ದೇವತೆಯ ನಾವಾಹಿಸುತ್ತಲಿ |
ಕೋವಿದಾಗ್ರಣಿಯಾಗ ವಿಧ್ಯುಕ್ತದಲಿ ಪೂಜಿಸುತ ||
ಸೇವೆಗೈತಹ ಸಕಲಭಕ್ತಜ |
ನಾವಳಿಯನಿಷ್ಟಾರ್ಥವೀಯುತ |
ಕಾವುದೆನ್ನುತ ಬೇಡಿಕೊಂಡನು ಶಾರದಾಂಬೆಯನು || ೧೬

ಬಳಿಕಲೊಂದಾಮ್ನಾಯಪೀಠವ |
ಸಲೆ ರಚಿಸಿ ನಿಜಶಿಷ್ಯರೊಳಗಾ |
ಜಲಜಸಂಭವನಂಶಜಾತ ಸುರೇಶ್ವರನ ಕರೆದು ||
ಒಲಿಯುತಾತಗೆ ಯೋಗಪಟ್ಟವ |
ನಳವಡಿಸಿ ಬಳಿಕುಳಿದ ಶಿಷ್ಯರ |
ಬಳಗವನು ಕರೆದಿಂತು ನುಡಿದನು ಶಂಕರಾಚಾರ್ಯ || ೧೭

ಈತನೀಪೀಠದಲಿ ನೆಲೆಸಿ ಮ |
ಹೀತಳದೊಳುಳ್ಳಖಿಳಶಿಷ್ಯ |
ವ್ರಾತಕತಿಶಯಧರ್ಮಮಾರ್ಗವನೊಲಿದು ಬೋಧಿಸುತ ||
ಖ್ಯಾತಿಯಾನು ನೆರೆ ಪಡೆದು ಪರಮಾ |
ದ್ವೈತತತ್ವಾಮೃತವ ವಿವರಿಸಿ |
ಜಾತಿಧರ್ಮಾಚಾರ ಪದ್ಧತಿಗಳನು ಪಾಲಿಸಲಿ || ೧೮

ವಿವಿಧವರ್ಣಾಶ್ರಮ ಸುಧರ್ಮವ |
ನವಿರಳಪ್ರೀತಿಯಲಿ ಸಲಹುತ |
ಕವಿಜನಂಗಳ ನೆರವಿಗಾಶ್ರಯವಿತ್ತು ರಕ್ಷಿಸುತ ||
ಭುವನದೊಳಗದ್ವೈತತತ್ವವ |
ವಿವರಿಸುತಲಿಹುದೆಂದು ಕರುಣಾ |
ರ್ಣವನು ನೇಮವನಿತ್ತನಂದು ಸುರೇಶ್ವರಂಗೊಲಿದು || ೧೯

ಕರಕಮಲಸಂಜಾತಪಾರಂ |
ಪರಿಯೊಳೀಪರಿ ಕುಮುಪಸಖಿಭಾ |
ಸ್ಕರರು ನೆರೆರಂಜಿಸುವ ಪರ್ಯಂತರವು ಭುವನದಲಿ ||
ವರಜಗದ್ಗುರುವೆಂಬ ಕೀರ್ತಿಯು |
ಧರಿಸಿ ಸುರುಚಿರ ಧರ್ಮಸೇತುವ |
ಪೊರೆಯುತಿಹುದೆಂದೆನುತನುಗ್ರಹಿಸಿದನು ವರಯತಿಪ || ೨೦

ಭಂಗಬಾರದ ತೆರದೆ ಧರ್ಮ |
ಕ್ಕಂಗರಕ್ಷೆಯನೆಸಗಿ ಧನಧಾ |
ನ್ಯಂಗಳೊದಗುವಪರಿಯನಾಲೋಚಿಸುತ ಚಿತ್ತದಲಿ ||
ಶೃಂಗಗಿರಿಭಟ್ಟಾಖ್ಯಭೂತಪ |
ಶೃಂಗಗಿರಿಯೊಳು ನಿಲಿಸಿಯುಪಕರ |
ಣಂಗಳನು ತಂದೀವುದೆನ್ನುತ ಯತಿಪ ನೇಮಿಸಿದ || ೨೧

ಈತೆರದೆ ವರಶೃಂಗಗಿರಿಯಲಿ |
ಭೂತನಾಥನು ಸಕಲಕಾರ್ಯದ |
ರೀತಿಯನು ನಿರ್ಣಯಿಸಿ ಪರಮಾದ್ವೈತತತ್ವವನು ||
ಪ್ರೀತಿಯಿಂ ಸ್ಥಾಪಿಸುತ ಶಿಷ್ಯ |
ವ್ರಾತಕನುದಿನ ಧರ್ಮಸಾರವ |
ಸಾತಿಶಯದಿಂ ಬೋಧಿಸುತಲಿರ್ದನತಿಮುದದೆ || ೨೨

ಇಂತು ಭಗವತ್ಪಾದಮುನಿಯ |
ತ್ಯಂತಸಂತೋಷದಲಿ ಶಿಷ್ಯರ |
ನಂತರಿಂ ಸಂಸೇವ್ಯನಾಗುತಲವರಿಗತಿಹಿತದೆ ||
ಸ್ವಾಂತಶುದ್ಧಿಯನಿತ್ತು ರಕ್ಷಿಪ |
ಶಾಂತಿಪಾಠವ ಬೋಧಿಸುತ್ತು ದಿ |
ಗಂತವಿಶ್ರುತಕೀರ್ತಿಯಿರ್ದನು ಶೃಂಗಗಿರಿಯೊಳಗೆ || ೨೩

ಅನಿತು ಶಿಷ್ಯಸಮೂಹಮಧ್ಯದೊ ।
ಳನಿಮಿಷಾಧಿಪ ಗುರುವಿನಂಶದೆ ।
ಜನಿಸಿ ನಿಜಗುರುಪಾದಸೇವಾಸಕ್ತನೆಂದೆನಿಸಿ ॥
ಘನತರದಭಕ್ತಿಯಲಿ ಗುರುಪದ ।
ವನಜವನು ಮನದೊಳಗೆ ಸಂತತ ।
ನೆನೆಯುತಿಹನಾನಂದಗಿರಿಯೆಂಬುವನು ಸಂಭ್ರಮದೆ ॥ ೨೪

ಮೃಡನು ನೇಮಿಸಿದನಿತುಕಾರ್ಯವ ।
ನೊಡನೆ ತಾನೆಸಗುವನು ಗುರುಪದ ।
ಜಡಜವನ ನಂಬಿಹನು ಮಿಕ್ಕುದನೇನಲೆಕ್ಕಿಸನು ॥
ಒಡಲ ಬಳಿಪಿಡಿದಿರ್ಪನೆಳಲಂ ।
ತೆಡೆಯೊಳಿರ್ಪನು ಸಕಲಶಿಷ್ಯರ ।
ಗಡಣದೊಳಗುತ್ತಮನು ತಾನೆಂದೆನಿಸಿ ಸೇವಿಪನು ॥ ೨೫

ಗುರುವರೇಣ್ಯನ ಪರಮಪಾವನ ।
ಚರಣಪಂಕಜ ಸೇವೆಯೊಂದೇ ।
ಪರಮಸಾಧನವಲ್ಲದೀಸಂಸಾರಸಾಗರವ ॥
ಬರಿಯ ಪಾಠಶ್ರವಣದಿಂದು ।
ತ್ತರಿಸಲಾಗದೆನುತ್ತ ತಿಳಿದತಿ ।
ಹರುಷದಿಂದಾನಂದಗಿರಿಸೇವಿಪನು ಶಂಕರನ ೨೬

ಗಿರಿಯು ತಾಂ ಸ್ನಾನವನು ಮೊದಲಾ ।
ಚರಿಸಿ ಬಳಿಕಾ ಗುರುವರಾಸನ ।
ಪರಿಕರಂಗಳನೆಲ್ಲ ಶುದ್ಧಿಯಗೈದು ಭಕ್ತಿಯಲಿ ॥
ನೆರಹುವನು ಮೃತ್ತಿಕೆಯ ಶೌಚಾ ।
ಚರಣೆಗಾಯತಿವರನ ಪದಗಳಿ ।
ಗೆರಗಿ ತಾಂ ನೀಡುವನು ಕಾಷ್ಠವ ದಂತಧಾವನಕೆ ॥ ೨೭

ಸ್ನಾನವನು ಯತಿವರ್ಯನೆಸಗಲು ।
ಸಾನುರಾಗದೆ ವಸ್ತ್ರ ನಿಚಯವ ।
ತಾನೆ ತಂದೀಯುವನು ಜಪಮಾಲಿಗಳನನುಗೊಳಿಸಿ ॥
ಭಾಸುರತ್ಕ್ರೆಯು ಪಳಿನಭಸ್ಮವ ।
ರಾನುಲೇಪನಪಿತ್ತ್ರು ಪರ ಸಿ ।
ತ್ತ್ಯಾನುಸಂಧಾನಕ್ಕೆ ಕೊಡುವನು ಸಿರ್ಮಲೋದಕವ ॥ ೨೮

ಬಳಿಕ ತನ್ನಯಗುರುವು ಮುನ್ನವೆ ।
ಕಳೆದ ಪಾಟಲವಸ್ತ್ರವೆಲ್ಲವ ।
ತಳೆದು ಶಿರದೊಳು ತೆರಳಿ ತುಂಗಾತೀರದೇಶವನು ॥
ಘಳಿಲನೈದುವನಲ್ಲಿ ನಿರ್ಮಲ ।
ಜಲದೊಳಾವಸ್ತ್ರಗಳನೆಲ್ಲವ ।
ತೊಳೆದು ಮತ್ತೈತಂದು ಗುರುಶುಶ್ರೂಷೆಗೈಯುವನು ॥

ಮಾರಹರ ಸನ್ನಿಧಿಯೊಳಿರ್ಪನು ।
ಯಾರೊಡನೆ ಮಾತಾಡಲಮ್ಮನು ।
ಮೀರಿ ಮಾತಾಡಿಸಲು ಮಿತಭಾಷಣದೊಳುತ್ತರವ ॥
ತೋರುವನು ಯತಿಪತಿಯ ಬೋಧೆಯ ।
ಸಾರವನು ಸಂಗ್ರಹಿಪನಲ್ಲದೆ ।
ಮೀರಿ ತಾನೇನುವನು ಪೇಳನು ಗುರುವರೇಣ್ಯನೊಳು ॥ ೩೦

ಇಂತಿರಲು ಬಳಿಕೊಂದುದಿನವಾ ।
ಕಂತುಮಥನನು ಕಳೆದ ವಸ್ತ್ರಾ ।
ನಂತವನು ಗಿರಿಕೊಂಡು ತುಂಗಾತೀರಕ್ಕೈದಿರಲು ॥
ಸಂತಸದೊಳೈತಂದು ಶಿಷ್ಯರ ।
ಸಂತಭಕ್ತಿಯೊಳೆರಗಿ ಗುರುವಿಗೆ ।
ಶಾಂತಿಪಾಠವ ಕರುಣಿಸೆಂದೆನಲಾಗ ಯತಿನುಡಿದ ॥ ೩೧

ಗಿರಿಯು ವಸ್ತ್ರಗಳೊಡನೆ ತುಂಗಾ |
ವರನದೀತೀರವನು ಸಾರಿಹ |
ಬರುವನೀಗಲೆ ಬಂದಬಳಿಕಾಂ ಶಾಂತಿಪಾಠವನು ||
ಅರುಹುವೆನು ನಿಮಗೆನಲು ಸಾರಸ |
ಚರಣ ನುಡಿದನು ಗಿರಿಗೆ ಪಾಠವ |
ನರುಹೆ ಕುಡ್ಯಕೆಪೇಳ್ದ ತೆರದಿಂ ವಿಫಲವಹುದೆನುತ || ೩೨

ಎಂದಮಾತನು ಕೇಳುತಾಗ ಸ |
ನಂದನನ ಗರ್ವವನು ಕಾಣುತ |
ಲಿಂದುಧರನವನತುಲಗರ್ವವ ಹರಿಸಬೇಕೆನುತ ||
ನಂದಕಲೆಹದಿನಾಲ್ಕು ತಾನಾ |
ನಂದಗಿರಿಗತಿಜವದಿ ಲಭಿಸುವು |
ದೆಂದೆನುತ ವರವಿತ್ತನತಿಕಾರುಣ್ಯಭಾವದಲಿ || ೩೩

ಗುರುಕಟಾಕ್ಷದೆ ಸಕಲವಿದ್ಯಾ |
ಪರಿಣತನು ತಾನಾಗಿ ಲೋಕ |
ಕ್ಕರುತರದ ತತ್ತ್ವಾರ್ಥಸಾರವನೆಲ್ಲಬೋಧಿಸುವ ||
ಸರಸತೋಟಕವೃತ್ತಸರಣಿಯ |
ಸುರುಚಿರಶ್ಲೋಕಂಗಳೈದನು |
ನೆರೆ ರಚಿಸಿ ಗುರುಸನ್ನಿಧಾನದೊಳೋದಿದನು ಯತಿಯು || ೩೪

ವೇದಸಾರವ ಶಿಷ್ಯಗುರುಸಂ |
ವಾದರೂಪಿನೊಳೈದು ಪದ್ಯದೊ |
ಳಾದರದೆ ವಿರಚಿಸಿದ ತೋಟಕವೃತ್ತಶೈಲಿಯನು ||
ವೇದವೇದ್ಯನ ಶಿಷ್ಯರೆಲ್ಲರು |
ಮೋದದಿಂದಾಲಿಸುತ ಗಿರಿಸುಕೃ |
ತೋದಯವ ಕೊಂಡಾಡುತಿರ್ದರನೇಕವಿಧನಾಗಿ || ೩೫

ಗಿರಿಯು ರಚಿಸಿದ ಪದ್ಯವೈದರ |
ಸರಣಿಯನು ನೆರೆ ಕೇಳಿ ಶಂಕರ |
ಗುರುವರನು ಪರಿತೋಷವಾಂತನು ತನ್ನಮನದೊಳಗೆ ||
ನೆರೆದ ಶಿಷ್ಯರನಡುವೆ ಗಿರಿಯನು |
ಕರೆದು ಬಹುಸಂಪ್ರೀತಿಯಿಂದಲೆ |
ಕರುಣಿಸಿದನಾತಂಗೆ ತೋಟಕನೆಂಬ ನಾಮವನು || ೩೭

ಜಲಜಪಾದ ಸುರೇಶ ಹಸ್ತಾ |
ಮಲಕರೆಂಬೀಮೂವರಾಯತಿ |
ಕುಲಶಿರೋಮಂಡನನ ಶಿಷ್ಯಪ್ರಮುಖರಾಗಿರಲು ||
ಅಲಘುಮಹಿಮನ ಪಾದಪದ್ಮವ |
ಸುಲಭದಿಂ ಸೇವಿಸುತ ಶಿಷ್ಯರ |
ನೆಲೆಗೆ ಸಂದು ತುರೀಯನಾದನು ತೋಟಕಾಚಾರ್ಯ || ೩೭

ನಾಲ್ಕುವೇದಂಗಳನು ಮೇಣಾ |
ನಾಲ್ಕುಮೋಕ್ಷಂಗಳನು ಪೋಲುವ |
ನಾಲ್ಕುಜನ ಶಿಷ್ಯರನು ಕೂಡುತ ಯತಿಕುಲಾಧಿಪನು ||
ನಾಲ್ಕುದಿಙ್ಮುಖಗಳಲಿ ನೆರೆ ಹದಿ |
ನಾಲ್ಕುಲೋಕದೆ ಕೀರ್ತಿತುಂಬಿರೆ |
ನಾಲ್ಕುಮುಖಮಧ್ಯದಲಿ ಮೆರೆವೀಶಾನನಂತಿಹನು || ೩೮

ನಿರುಪಮಿತ ವೇದಾಂತತತ್ವವ |
ಪರಮಕರುಣಾರ್ಣವನು ಶಿಷ್ಯರಿ |
ಗೊರೆದು ಮತ್ತಾಶಿಷ್ಯಜನರಿಂದಖಿಳದೇಶಗಳ ||
ಧರಣಿಯಮರರಿಗರುಹಿಸುತ ಭೂ |
ಸುರರಮುಖದಿಂದಖಿಳಜನರಿಗೆ |
ಹರಹಿಸುತ ಪೊರೆಯುತ್ತಲಿರ್ದನು ಧರ್ಮಸೇತುವನು || ೩೯

ಸತತವಾ ಶಿಷ್ಯಪ್ರಶಿಷ್ಯ ।
ಪ್ರತತಿ ತನ್ನನು ಸೇವಿಸುತ್ತಿರ ।
ಲತಿಹಿತದಲವದಿರನು ಸಂರಕ್ಷಿಸುತ ಕಮಲಜನ ॥
ಸತಿಯನಾರಾಧಿಸುತ ವಿಪ್ರ ।
ಪ್ರತತಿಯನು ವರವಿತ್ತು ಸಲಹುತ ।
ಯತಿವರಶ್ರೀಕಂಠನಿರ್ದನು ಶೃಂಗಗಿರಿಯೊಳಗೆ ॥ ೪೦

ಸಂಧಿ ಮೂವತ್ತಕ್ಕೆ ಪದ್ಯ ೧೪೭೦ಕ್ಕೆ ಮಂಗಳ.

## ಮೂವತ್ತೊಂದನೆಯ ಸಂಧಿ.

ಸೂಚನೆ॥ ಸೂತ್ರಭಾಷ್ಯಕೆ ವಾರ್ತಿಕಂಗಳ ।
ಛಾತ್ರವರರಿಂ ರಚನೆಗೈಸುತ ।
ಲಾತ್ರಿನೇತ್ರನು ಶೃಂಗಗಿರಿಯೊಳಗಿರ್ದನತಿಮುದದೆ ॥

ಕೇಳು ಶೌನಕಮುನಿಯೆ ಶಶಿಧರ ।
ಮೌಳಿ ಶಿಷ್ಯಚತುಷ್ಟಯದ ಸಂ ।
ಮೇಳದಿಂದಾ ಶೃಂಗಗಿರಿ ಸುಕ್ಷೇತ್ರವಾಸದಲಿ ॥
ಕಾಲವನುಕಳೆಯುತ್ತ ಸದ್ವಿಜ ।
ಜಾಲಕುಪನಿಷದರ್ಥಸಾರವ ।
ಪೇಳಿ ಪರಮಾದ್ವೈತ ಸಿದ್ಧಾಂತವನು ಹರಹಿದನು ॥ ೧

ಮಾರಹರನಾಶೃಂಗಗಿರಿಯೊಳು ।
ಶಾರದೆಯ ಸಂಸ್ಥಾಪಿಸಿಹ ವಿ ।
ಸ್ತಾರವನು ಕೇಳುತ್ತ ನಾನಾದೇಶಗಳಲಿರುವ ॥
ಧಾರಿಣೀಸುರ ಮುಖ್ಯಜನಗಳು ।
ಸಾರಿಬಂದಾಚಾರ್ಯಪದಪಂ ।
ಕೇರುಹಂಗಳಿಗೆರಗಿ ಪಡೆದರು ಸಕಲಸಿದ್ಧಿಗಳ ॥ ೨

ಇರುತಿರಲು ಬಳಿಕೊಂದುದಿನ ಯತಿ ।
ವರಸುರೇಶ್ವರ ತನ್ನ ಮನದೊಳು ।
ಗುರುವು ರಚಿಸಿಹ ಸೂತ್ರಭಾಷ್ಯಕೆ ವಾರ್ತ್ತಿಕವ ತಾನು ।
ವಿರಚಿಸಲು ಬೇಕೆನುತ ನೆನೆವನು ।
ಗುರುವಿನೆಡೆಗೈತಂದು ವಂದಿಸಿ ।
ಕರಗಳನುಜೋಡಿಸುತ ನುಡಿದನು ವಿನಯಪರನಾಗಿ ॥

ಪಾವನಾತ್ಮನೆ ಕೇಳು ತವಪದ ।
ಸೇವಕನು ತಾನಾನವಿಧದಿಂ ।
ಸೇವೆಯನು ವಿರಚಿಸುತ ನೆರೆ ಚರಿತಾರ್ಥನಾಗುವೆನೊ ॥
ಆವಿಧವ ಕರುಣಿಸುತ ತನ್ನನು ।
ಪಾವನನ ಮಾಡೆಂದು ವರಗುರು ।
ಪಾವನಾಂಘ್ರಿಗೆ ಮತ್ತೆ ನಮಿಸಿದನಾಸುರೇಶ್ವರನು ॥

ಛಾತ್ರವರನಿಂತೆನಲು ಭಾವವ ।
ನಾತ್ರಿನೇತ್ರನು ತಿಳಿದು ತನ್ನಯ ।
ಸೂತ್ರಭಾಷ್ಯಕೆ ರಚಿಸಿ ವಿಸ್ತರದಿಂದ ವಾರ್ತ್ತಿಕವ ॥
ಧಾತ್ರಿಯಲಿ ನಿರ್ಮಲಸುಕೀರ್ತಿಗೆ ।
ಪಾತ್ರನಾಗೆಂದೆನುತ ವರಶತ ।
ಪತ್ರಸಂಭವಗಾಗ ಮುದದಿಂದಿತ್ತನಾಜ್ಞತಿಯ ॥

ಗುರುವರನ ಭಾವತ್ಕಭಾಷ್ಯಕೆ ।
ವಿರಚಿಪೊಡೆ ವಾರ್ತ್ತಿಕವ ತಾನೆ ।
ಸ್ಫುರವತನಗದಕೆ ಯೋಗ್ಯತೆಯಿಲ್ಲಮಾದಡೆಯು ॥
ವರಗುರುವೆ ಭವದೀಯಪಾವನ ।
ಚರಣ ಕರುಣಕಟಾಕ್ಷಬಲದಿಂ ।
ಪರಿತಕರದಿಂ ರಚಿಪೆನೆಂದೆನುತೆರಗಿ ಬೀಳ್ಕೊಂಡ ॥

ಅತ್ತಲಜ ಬೀಳ್ಕೊಳಲು ಮುನಿ ಕೇ |
ಳತ್ತ ಸಾರಸಚರಣ ಶಿಷ್ಯರ |
ಪೊತ್ತದೊಳು ಚಿತ್ಸುಖನೆ ಮೊದಲಾದವರು ನಡೆತಂದು ||
ಉತ್ತಮೋತ್ತಮಗೆರಗಿ ತಮ್ಮಯ |
ನೆತ್ತಿಯಲಿ ಕರಗಳನು ಜೋಡಿಸಿ |
ಮತ್ತೆಮತ್ತಭಿನಮಿಸಿ ಬಿನ್ನವಿಸಿದರು ಗುರುವರಗೆ || ೭

ಶರಣಜನಹೃತ್ಕಮಲಭಾಸ್ಕರ |
ಪರಮಹಂಸಶ್ರೇಷ್ಠ ಪಾವನ |
ಚರಣಪಂಕೇರುಹ ಸಮಾಶ್ರಿತ ಶಿಷ್ಯಜನವರದ ||
ವರದಿಗಂತವ್ಯಾಪ್ತಸುಯಶೋ |
ಭರಿತ ಮಂಗಳಚರಿತ ಶಂಕರ |
ಪರಮಗುರು ಚಿತ್ತವಿಸು ಶಿಷ್ಯವ್ರಜದ ಬಿನ್ನಪವ || ೮

ಗುರುವೆ ನೀವಾಬ್ರಹ್ಮಸೂತ್ರ |
ಕ್ಕೊರೆದಭಾಷ್ಯಕೆ ವಾರ್ತಿಕವ ನೆರೆ |
ವಿರಚಿಸಲ್ಕಾಣತಿಯನಿತ್ತಿರಿ ವಿಶ್ವರೂಪನಿಗೆ ||
ಸುರುಚಿರದ ಸುಜ್ಞಾನಮಾರ್ಗವ |
ಧರೆಗೆ ಬೋಧಿಪ ಭಾಷ್ಯವಾರ್ತಿಯ |
ನಿರತ ಕರ್ಮಭ್ರಾಂತನಾಗಿಹನೆಂತುವಿರಚಿಪನು || ೯

ಕರ್ಮಕಿಂಕರನಾಗಿ ಸಂಚಿತ |
ಕರ್ಮವಾಸನೆ ಬಿಡದೆ ಕಾಮ್ಯಕ |
ಕರ್ಮಗಳನೆಸಗುತ್ತ ಸಗ್ಗದಸುಖಕೆ ಮರುಳಾದ ||
ಕರ್ಮಪರನು ನಿವೃತ್ತಿಮಾರ್ಗದ |
ಮರ್ಮವನು ತಾನೆತ್ತಬಲ್ಲನು |
ಕರ್ಮಪರನಾಜ್ಞಾನಕಾಂಡವನೆಂತುವಿವರಿಪನು || ೧೦

ಕಾಮಿಸುತಲಾ ಸ್ವರ್ಗಭೋಗವ |
ಹೋಮಗಳನೆಸಗುತ್ತ ಸಂತತ |
ಕಾಮಿನಿಯನೊಡಗೂಡಿ ಸನ್ಯಾಸವನು ಧಿಕ್ಕರಿಸಿ ||
ಜೈಮಿನಿಯಮತವೆಂದು ನೆರೆ ಸ |
ಪ್ರೇಮದಿಂ ಕರ್ಮಗಳೊಳಿದ್ದವ |
ನೀ ಮಹಾಭಾಷ್ಯಕ್ಕೆ ಟೀಕೆಯನೆಂತು ವಿರಚಿಸನು || ೧೧

ವಾದದಲಿ ನೆರೆ ಸೋತಬಳಿಕತಿ |
ಖೇದದಿಂ ಸನ್ಯಾಸಧರ್ಮವ |
ನಾದರಿಸುತಿರ್ದೊಡೆಯು ಪೂರ್ವದವಾಸನೆಯು ಬಿಡದೆ ||
ವೈದಿಕನ ವಾರ್ತ್ತಿಕವು ಕರ್ಮದ |
ಹಾದಿಯನು ಬೋಧಿಸದೆ ಬಿಡದೆಂ |
ಬೀದುರಂತದ ಚಿಂತೆಯೊಂದಿದೆ ತಮ್ಮಮನದೊಳಗೆ || ೧೨

ಮೋದದಿಂ ಗುರು ಕರೆಯಲಾಕ್ಷಣ |
ಹಾದಿಯನು ಲೆಕ್ಕಿಸದೆ ಗಂಗಾ |
ಹ್ರಾದದೊಳು ಬರುತಿರಲು ಕಾಣುತ ಸುರತರಂಗಿಣಿಯು ||
ಪಾದಪಾಪಕೆ ಪದ್ಮಗಳ ಸ |
ತ್ಯಾದರದೆ ಪಾಲಿಸಲು ಸಾರಸ |
ಪಾದನಾಮವನಿತ್ತಿಹಿರಿ ನೀವಾಸನಂದನಗೆ || ೧೩

ಅವನು ವರವಾರ್ತ್ತಿಕವ ರಚಿಸಲು |
ಭವದನುಜ್ಞೆಯು ದೊರೆಯೆ ವಾರ್ತ್ತಿಕ |
ನವಸಿಯಲಿ ಸುಜ್ಞಾನಮಾರ್ಗವನೊಲಿದು ಬೋಧಿಸುತ ||
ಅವಿರಳದಕೀರ್ತಿಯನು ತಳೆಯುವು |
ದವನತರ ವಿಜ್ಞಾಪನೆಯನೀ |
ನವಧರಿಪುದೆಂದೆನುತಲವರೆರಗಿದರು ಗುರುಪದಕೆ || ೧೪

ಆಸಮಯದಲಿ ಬಂದನಲ್ಲಿಗೆ |
ಭೂಸುರಾಗ್ರಣಿ ಪದ್ಮಪಾದನು |
ದೇಶಿಕಾಗ್ರಣಿಗೆರಗಿ ನುಡಿದನು ಕರವಜೋಡಿಸುತ ||
ಭಾಸುರದ ವರಸೂತ್ರಭಾಷ್ಯಕೆ |
ಲೇಸೆನಿಪ ವಾರ್ತಿಕವ ವಿರಚಿಸ |
ಲಾ ಸಮಂಜಸಬುದ್ಧಿ ಹಸ್ತಾಮಲಕಗಿಹುದೆನುತ || ೧೫

ಕೇಳಿ ಮನದೊಳು ನಗುತಲಾ ಶಶಿ |
ಮೌಳಿ ನುಡಿದನು ಶಿಷ್ಯರೆಲ್ಲರು |
ಕೇಳಿರೈ ಪೂರ್ವದಲಿ ಯಮುನಾನದಿಯತೀರದಲಿ ||
ಶೀಲಗುಣನಿಧಿಸಿದ್ಧನೊಬ್ಬ ವಿ |
ಶಾಲ ತಪವನು ಚರಿಸುತಿದ್ದನು |
ಶೂಲಿಯಂಘ್ರಿಯ ಭಜಿಸಿ ನವವಿಧಭಕ್ತಿಭಾವದಲಿ || ೧೬

ಬಂದಳೊಬ್ಬಳು ವಿಪ್ರವನಿತೆಯು |
ನಂದನನು ಸಹಿತಾಗ ಸಿದ್ಧನ |
ಮುಂದೆ ಮಗುವನುಬಿಟ್ಟು ಕರಗಳಮುಗಿದು ವಿನಯದಲಿ ||
ಮಿಂದುಬಹೆನೆನ್ನಬರ ತನ್ನೀ |
ನಂದನನ ಪಾಲಿಪುದು ಕರುಣದ |
ಲೆಂದು ಮುನಿಪಂಗರುಹಿ ಸಾರ್ದಳು ತರಣಿನಂದನೆಯ || ೧೭

ಅತ್ತಲಾಕೆಯು ಗಮಿಸೆ ಶಿಶು ತಾ |
ನಿತ್ತಲಾಡುತ ನದಿಯ ತಟಕ್ಕೈ |
ದುತ್ತ ನೀರೊಳುಮುಳುಗಿ ಕಾಲನಪುರವಸೇರಿದುದು ||
ಮತ್ತೆಬಂದಳು ವಿಪ್ರತರುಣಿಯು |
ಸತ್ತಮಗನನು ಕಂಡು ಗೋಳಿಡು |
ತತ್ತು ಸೊರಗುತ್ತಿರಲು ಕರುಣವತಾಳ್ದನಾಯೋಗಿ || ೧೮

ಬಳಿಕ ಪರಕಾಯಪ್ರವೇಶದ |
ಬಲುಮೆಯಿಂದಾ ಸಿದ್ಧಪುರುಷನು |
ಘಳಿಲನೈದುತ ಬಾಲಶವದೊಳಪೊಕ್ಕು ಸಂಭ್ರಮಿಸಿ ||
ಲಲನೆಯನು ಸಂತೈಸುತಲ್ಲಿಯೆ |
ನೆಲಸಿಹನು ತಾನವನೆ ಹಸ್ತಾ |
ಮಲಕ ನಾಮಕನೆಂದು ಭಗವತ್ಪಾದಮುನಿ ನುಡಿದ ||

ಸಕಲನಿಗಮಾಗಮ ಪುರಾಣ |
ಪ್ರಕರಮೀಮಾಂಸಾದಿ ಶಾಸ್ತ್ರವ |
ಸುಕರಮೆನಲರಿತಿಹನು ಹಸ್ತಾಮಲಕನಾವಡೆಯು ||
ಪ್ರಕಟನಿಶ್ಚಲವರಸಮಾಧಿ |
ಪ್ರಕರಣದೊಳಿಹನಾಗಿ ಭಾಷ್ಯ |
ಪ್ರಕಟಣೆಯ ವೃತ್ತಿಯನು ವಿರಚಿಸಲರ್ಹನಿವನಲ್ಲ ||

ಶಾರದೆಯ ಸಾಕ್ಷಿಯಲಿ ವಾದವ |
ಸಾರತರದಿಂದೆಸಗಿ ತತ್ತ್ವವಿ |
ಚಾರವೆಲ್ಲವನರಿದು ನೆರೆ ಸರ್ವಜ್ಞನೆಂದೆನಿಸಿ ||
ಗಾರುಹಸ್ತ್ಯವನುಳಿದ ವರಗಂ |
ಭೀರ ಯತಿಪನು ಸೂತ್ರಭಾಷ್ಯಕು |
ದಾರ ಟೀಕೆಯ ರಚಿಸಲಿಕೆ ತಾನರ್ಹನಾಗಿಹನು ||

ಆದೊಡೆಯು ಬಹುಜನಕಸಮ್ಮತ |
ವಾದ ಕಾರ್ಯವ ನಾನು ಮನದೊಳ |
ಗಾದರಿಸೆನದರಿಂದ ವಾರ್ತಿಯನಾತ ವಿರಚಿಪುದು ||
ಮಾದುದಾಮಾತೇಕೆ ಸಾರಸ |
ಪಾದನೇ ವ್ಯಾಖ್ಯಾನವನು ನೆರೆ |
ಮೋದದಿಂ ವಿರಚಿಸಲಿ ಭಾಷ್ಯಕ್ಕೆಂದನಾಯತಿಪ ||

ಇಂತು ಸಿರುತ್ತೆಲ್ಲರನು ಕಳುಹಿದ |
ನಂತರಂಗದೊಳಾಸುರೇಶನ |
ಕಂತುರಿಪು ಕರೆಸಿದನು ನುಡಿದನು ಮಧುರವಚನದಲಿ ||
ಭ್ರಾಂತಿರಹಿತನೆ ನೀನು ಭಾಷ್ಯಕ |
ನಂತವಾರ್ತ್ತಿಕಗಳನು ವಿರಚಿಪು |
ದಂತಿರಲಿ ನೀನದಕೆ ಮನಕೊಡಬೇಡ ಕೇಳೆನುತ || ೧೩

ನಿನ್ನ ನಿಜಸಿದ್ಧಾಂತವನು ನೆರೆ |
ಮನ್ನಿಸುತಲಾಸ್ವಾತಂತ್ರ್ಯದಿಂದಲೆ |
ನನ್ನಿಯಿಂ ಗ್ರಂಥವನು ವಿರಚಿಸು ಲೋಕದೊಳಗದಕೆ ||
ಉನ್ನತದ ಸತ್ಕೀರ್ತಿ ಲಭಿಸುವು |
ದಿನ್ನು ಸಂಶಯಬೇಡವೆನೆ ಸಂ |
ಪನ್ನಮತಿ ಮಂಡನನು ಗುರುವಿಗೆ ನಮಿಸಿ ತೆರಳಿದನು || ೧೪

ಬಳಿಕ ಗುರ್ವಾಜ್ಞೆಯಲಿ ಮಂಡನ |
ನೊಲಿದು ದಿವ್ಯಗ್ರಂಥಮೊಂದನು |
ಸಲೆ ರಚಿಸಿ ನೈಷ್ಕರ್ಮ್ಯಸಿದ್ಧಿಯೆನಿಪ್ಪನಾಮದಲಿ ||
ಕಲಿತ ಭಕ್ತಿಯೊಳೈದಿ ಗುರುಪದ |
ನಳಿನಯುಗ್ಮದೊಳೆರಗಿ ತನ್ನಯ |
ಲಲಿತ ಸದ್ಗ್ರಂಥವ ಸಮರ್ಪಿಸಿ ನಿಂದನಿದಿರಿನಲಿ || ೧೫

ಸುರುಚಿರದ ವೇದಾಂತ ವಾಕ್ಯಗ |
ಳೊರೆವ ಪರಮಜ್ಞಾನಮಾರ್ಗದ |
ಪರಿಯ ಮೇಣು ನಿವೃತ್ತಿಮಾರ್ಗವ ದೊರೆವಸಂಪದವ ||
ಪರಮಹಂಸಾಶ್ರಮದ ಮಹಿಮೆಯ |
ಪರಿಪರಿಯಮೋಕ್ಷಗಳ ವಿವರವ |
ನಿರತವಾ ನೈಷ್ಕರ್ಮ್ಯಸಿದ್ಧಿಗ್ರಂಥ ಬೋಧಿಪುದು || ೧೬

ನೋಡಿ ತದ್ಗ್ರಂಥವನು ಸಂತಸ |
ಗೂಡಿ ನೃಪನಂದೊಲಿದು ಶಿರವ |
ಲ್ಲಾಡಿದನು ತನ್ನಾಳಿದಶಿಷ್ಯರ ಗಡಣವನು ಕರೆದು ||
ನೋಡಿ ನೀವೆಂದೆನುತಲವರಿಗೆ |
ನೀಡಿದನು ಪುಸ್ತಕವನವರವ |
ನೋಡಿ ಸಂಭ್ರಮದಿಂದ ಕೊಂಡಾಡಿದರು ಮಂಡನನ || ೨೭

ವಿವರದಿಂ ವಾರ್ತಿಕವ ವಿರಚಿಸ |
ಲಿವರು ವಿಘ್ನವ ನೆನೆದರವರಿಂ |
ದಿವರೊಳಾರಾದಡೆಯು ಭಾಷ್ಯಕೆ ವಾರ್ತಿಕವ ರಚಿಸೆ ||
ಅವನಿಯೋಳ್ವಾಚುರ್ಯಮಾಗದೆ |
ಜವದೆ ನಶಿಸಲಿಯೆಂದು ಮಂಡನ |
ನವಗಡಿಸಿ ಶಾಪವನುಕೊಟ್ಟನು ನಿಜಸತೀರ್ಥ್ಯರಿಗೆ || ೨೮

ಬಳಿಕ ಗುರು ಮಂಡನನ ಕರೆಯುತ |
ಲೆಲೆಸುರೇಶ್ವರ ಕೇಳು ವೇದಂ |
ಗಳಲಿ ತನಗಧ್ಯಯನಮಾದುದು ವರಯಜುರ್ವೇದ ||
ಜಲಜಮಿತ್ರನದಯದೆ ಪೃಥ್ವೀ |
ತಳಕಿಳಿದ ವರಕಾಣ್ವಶಾಖೆಯು |
ನಲಘುಮತಿ ಗುರುಮುಖದೆ ನೀನಧ್ಯಯನಮಾಡಿರುವೆ || ೨೯

ನಾನೆರಡುವೇದಗಳ ಭಾಷ್ಯವ |
ಸಾನುರಾಗದೆ ವಿರಚಿಸಿರ್ಪೆನು |
ನೀನು ಭಾಷ್ಯದ್ವಯಕೆ ವಾರ್ತಿಕಗಳನು ವಿರಚಿಸುತ ||
ಭಾನುಶಶಿಗಳ ತೆರದೆ ರಾಜಿಪ |
ನೂನಕೀರ್ತಿಯಪಡೆವುದೆನುತ ಕೃ |
ಶಾನುನೇತ್ರನು ನೇಮವಿತ್ತನು ವಿಶ್ವರೂಪನಿಗೆ || ೩೦

ಪರನನೇಮದೊಳಾಗ ವಾರ್ತ್ತಿಕ |
ವೆರಡ ವಿರಚಿಸಿ ತಂದು ಗುರುವರ |
ಚರಣದೊಳು ನೆರೆ ಭಕ್ತಿಯಿಂದರ್ಪಿಸಲು ಮಂಡನನು ||
ಶರದಚಂದ್ರನ ತೆರದೆ ರಾಜಿಸು |
ವೆರಡುವಾರ್ತ್ತಿಕಗಳನು ನೋಡುತ |
ಪರಮಸಂಭ್ರಮವೆರಸಿ ನುಡಿದನು ವರಸುರೇಶ್ವರಗೆ || ೩೦

ವಿವರಣವು ವಾರ್ತ್ತಿಕಗಳೆಂಬೀ |
ಯವಿರಳಾಖ್ಯೆಯಪಡೆದು ಸಂತತ |
ಮವನಿಯಲಿ ಕೀರ್ತಿಯನುಪಡೆಯಲಿ ವಾರ್ತ್ತಿಕಗಳೆನುತ ||
ಶಿವನನುಗ್ರಹಿಸುತ್ತ ಶಿಷ್ಯ |
ಪ್ರವರನನು ಮನ್ನಿಸಿದನೀಪರಿ |
ಭುವನವಿಶ್ರುತಯಶಯನಾಂತನು ವರಸುರೇಶ್ವರನು || ೩೧

ಇತ್ತ ಸಾರಸಚರಣ ಯತಿಪ |
ಪ್ರೋತ್ತಮನು ವಿರಚಿಸಿದ ಭಾಷ್ಯ |
ಕ್ಕುತ್ತಮದ ಟೀಕೆಯನು ವಿರಚಿಸಿ ಬಹುಳಹರ್ಷದಲಿ ||
ಉತ್ತಮಾಮಲಕೀರ್ತಿ ಸನ್ನಿಧಿ |
ಯತ್ತಲೈತಂದೆರಗಿ ಕೈಮುಗಿ |
ಯುತ್ತ ಬಿನ್ನವಿಸಿದನು ವಿನಯವಚೋವಿಲಾಸದಲಿ || ೩೩

ಧರೆಯತಿಮಿರವಹರಿಸಿ ರಂಜಿಪ |
ತರಣಿಯಂತಜ್ಞಾನತಿಮಿರವ |
ಪರಿಹರಿಪ ಭವದೀಯ ವಿರಚಿತ ಸೂತ್ರಭಾಷ್ಯವನು ||
ನೆರೆಯರಿತು ವಾರ್ತ್ತಿಕವ ಬಹುಪಾ |
ಮರನು ರಚಿಸುವೆನೆಂತು ತವಪದ |
ಸರಸಿಜದ ಕೃಪೆಯಿಂದ ನಾಂ ತೋರ್ದನಿತರಚಿಸಿಹೆನು || ೩೪

ಎರಡುಭಾಗಗಳಾಗಿ ರಚಿಸಿಹೆ |
ಗುರುವರನೆ ಪೂರ್ವಾರ್ಧಭಾಗವು |
ಧರಿಸಿಹುದು ವರಪಂಚಪಾದಿಕೆಯೆಂಬನಾಮವನು ||
ಪರಿಕಿಸುವೊಡುತ್ತರದಭಾಗವು |
ಧರಿಸಿಹುದು ನೆರೆ ವೃತ್ತಿನಾಮವ |
ನೆರಡನಿವನರ್ಪಿಸುವೆ ಭವದೀಯಾಂಘ್ರಿಕಮಲದಲಿ || ೩೫

ಎಂದು ಗುರುಚರಣಾರವಿಂದದೊ |
ಳೆಂದು ಪುಸ್ತಕವೆರಡನರ್ಪಿಸಿ |
ಸಂದಭಕ್ತಿಯೊಳೆರಗಿ ಕೈಗಳಮುಗಿದು ನಿಂದಿರಲು ||
ಇಂದುಶೇಖರನಾಗ ಶಿಷ್ಯಸ |
ನಂದನನ ಮೈದಡವಿ ಸಮ್ಮುದ |
ದಿಂದಲೋದಿಸಿ ಕೇಳ್ದನಾವರವಾರ್ತಿಕದ್ವಯವ || ೩೬

ವಾರ್ತಿಕವನಿವನೀನು ನೆರೆ ಸಂ |
ಪೂರ್ತಿಯೆನೆ ವಿರಚಿಸುತ ಭಾಷ್ಯಕೆ |
ಕೀರ್ತಿಯನು ತಂದಿತ್ತೆ ಕೇಳ್ಳೈ ದ್ವಿಜಕುಲೋತ್ತಮನೆ ||
ಕಾರ್ತಿಕದ ಶಶಿಯಂತೆ ನಿರ್ಮಲ |
ಕೀರ್ತಿಯನು ನೀಂ ತಳೆದೆ ನಿನ್ನಯ |
ಕೀರ್ತಿಗೀವಾರ್ತಿಕವು ಪರಿಕಿಸೆ ವಿಜಯಡಿಂಡಿಮವು || ೩೭

ಇದರೊಳಗೆ ವರಪಂಚಪಾದಿಕೆ |
ವಿದಿತಮಹ ಜಸಮಾಂತು ನಿಲ್ಲುವು |
ದವರೊಳೀ ಪ್ರಾಥಮಿಕ ಸೂತ್ರ ಚತುಷ್ಟಯಂಗಳಿಗೆ ||
ಮುದದೊಳಾಂ ರಚಿಸಿರ್ಪ ಭಾಷ್ಯವ |
ವಿದಿತವೆನೆ ಬೋಧಿಸುವ ಟೀಕೆಯಿ |
ದಮುಬುತದಕೀರ್ತಿಯನು ತಳೆಯುವುದೆಂದನಖಿಳೇಶ || ೩೮

ಮುಂದೆ ಹಲವರು ನಿರ್ಜರಾಂಶಗ ।
ಳಿಂದ ಜನಿಸುತ ಸೂತ್ರಭಾಷ್ಯ ।
ಕ್ಕಂದವಹ ಟೀಕೆಗಳ ರಚಿಪರು ಕವಿಜನೋತ್ತಮರು ॥
ಅಂದು ನೀಂ ಪ್ರಾರಬ್ಧಕರ್ಮದ ।
ಬಂದಿಯಲಿ ಮತ್ತೊಂದುಜನ್ಮವ ।
ಹೊಂದಿ ಧರೆಯೊಳಗಿರುವೆ ವಾಚಸ್ಪತಿಯನಾಮದಲಿ ॥ ೩೯

ಇಂತು ನೀ ಮತ್ತೊಂದುಜನ್ಮವ ।
ನಾಂತು ಮತ್ತೀಸೂತ್ರಭಾಷ್ಯಕೆ ।
ಸಂತಸದೆ ಟೀಕೆಯನು ವಿರಚಿಪೆ ಲೋಕಹಿತಮೆನಿಸಿ ॥
ಸ್ವಾಂತಶುದ್ಧಿಯನುಳ್ಳಮಹಿಮರ ।
ನಂತರಾ ವಾರ್ತಿಕಕೆ ಭಾಷ್ಯವ ।
ನಂತವನು ವಿರಚಿಪರು ಮತ್ತವಕಹುದು ಟೀಕೆಗಳು ॥ ೪೦

ಈತೆರದೆ ಮರುಜನ್ಮದೊಳು ಸಂ ।
ಪ್ರೀತಿಯಿಂ ವಾರ್ತಿಕವ ನೆರೆ ವಿ ।
ಖ್ಯಾತಮಪ್ಪಂದದಲಿ ನೀಂ ವಿರಚಿಸುವೆಯೆಂದೆನುತ ॥
ಭೂತನಾಥನು ಕರುಣದಿಂ ಜಲ ।
ಜಾತಚರಣಂಗರುಹಿ ಶಿಷ್ಯ ।
ವ್ರಾತದೊಳಗುಳಿದವರ ಕುರಿತಿಂತೆಂದನೊಲಿದಾಗ ॥ ೪೧

ಓತದೆ ಗಿರಿ ಮೊದಲಾದ ಶಿಷ್ಯ ।
ಪ್ರತತಿ ಲಾಲಿಪುದೀಗ ನಿಮ್ಮಯ ।
ಮತಿಗೆ ತೋರಿದತೆರದೆ ನಾನಾಗ್ರಂಥಗಳ ರಚಿಸಿ ॥
ಕ್ಷಿತಿಯೊಳುತ್ತಮವಾದ ಕೀರ್ತಿಯ ।
ನತಿಶಯದೆ ಪಡೆಯುವುದು ನೀವೆನೆ ।
ಯತಿಪನಾಜ್ಞೆಯ ಶಿರದೊಳಾಂತುದು ಶಿಷ್ಯಸಂದೋಹ ॥ ೪೨

ಸುರರು ಮುನಿಗಳು ಸಿದ್ಧವಿದ್ಯಾ |
ಧರರು ತಾವಾರಾರು ಶಂಕರ |
ಚರಣಸೇವಾಸಕ್ತರಾಗಿಯೆ ಮನುಜರೂಪಿನಲಿ ||
ಧರೆಯೊಳವತರಿಸಿರ್ದರವರಾ |
ವರಗುರುವಿನಾಜ್ಞೆಯಲಿ ರಚಿಸಿದ |
ದುರುತರಗ್ರಂಥಗಳನೇಕವನಧಿಕಹರ್ಷದಲಿ || ೪೩

ಶ್ರುತಿಮತವನನುಸರಿಸಿ ಪತ್ತಾ |
ಶ್ರುತಿತತಿಯ ತತ್ತ್ವಾರ್ಥವೆಲ್ಲವ |
ನತಿಶಯದೆ ಬೋಧಿಸುತಲಜ್ಞಾನಾಂಧಕಾರವನು ||
ಸತತ ಪರಿಹರಿಸುತ್ತ ವಿಲಸ |
ದ್ಗತಿಯ ಮನುಜನು ಪಡೆವ ಮಾರ್ಗೋ |
ನ್ನತಿಯನೇ ವಿವರಿಸುತಲಿರ್ದವು ಸಕಲಕಾವ್ಯಗಳು || ೪೪

ಏಕಮಾತ್ಮಾಯೆಂದು ವೇದಗ |
ಳೇಕಮುಖದಲಿ ನುತಿಸುವಾತ್ಮನ |
ನೇಕನೆಂಬಜ್ಞಾನತಿಮಿರಂಗಳನು ಪರಿಹರಿಸಿ ||
ಭೀಕರದ ಭೇದವನು ಪರಮವಿ |
ವೇಕದಿಂ ಸಲೆಹರಿಸಿ ವಿಜ್ಞಾ |
ನೈಕದೀಪ್ತಿಯ ಕೊಡುತಲಿರ್ದವು ಸಕಲಕಾವ್ಯಗಳು || ೪೫

ಗುರುವರನು ತಮಗೊಲಿದು ಬೋಧಿಸಿ |
ದುರುತರದ ವಿಷಯಗಳ ವಿಶದೀ |
ಕರಿಸಿ ವರತತ್ತ್ವಾರ್ಥಸಾರಂಗಳನು ವಿಸ್ತರಿಸಿ ||
ನಿರುಪಮಿತ ಜೀವೇಶ್ವರೈಕ್ಯದ |
ಪರಿಯನಾ ಗ್ರಂಥಗಳು ಸುಜನರ |
ನೆರವಿಗೆತಿಮುದದಿಂದ ಬೋಧಿಸುತಿರ್ದವನವರತ || ೪೬

ವೇದವೇದಾಂಗಗಳ ಸಾರವ |
ಮೋದದಿಂ ಸಂಗ್ರಹಿಸಿ ಮೋಕ್ಷದ |
ಹಾದಿಯನು ನೆರೆ ತಿಳಿದು ವರ್ತಿಸುವತುಲರೀತಿಯನು ||
ಭೇದಭಾವವ ಗೆಲುವಬಗೆಯನು |
ಸಾದರದೆ ವಿವರಿಸವು ಸಂತತ |
ವಾದಿಶಂಕರಶಿಷ್ಯರಚಿತಗ್ರಂಥಮಾಲಿಗಳು || ೪೭

ಪರಮವೇದಾಂತಾರ್ಥಸಾರವ |
ನೊರೆಯುವೀಗ್ರಂಥಗಳ ವಿರಚಿಸಿ |
ಗುರುಚರಣಕರ್ಪಿಸಲು ಸಂತೋಷದಲಿ ಶಿಷ್ಯರನು ||
ಪರಿಕಿಸುತ ಕಾವ್ಯಗಳನೀಕ್ಷಿಸಿ |
ಧರೆಯೊಳೀಗ್ರಂಥಗಳು ಕೀರ್ತಿಯ |
ಧರಿಸಿ ಶಾಶ್ವತವಾಗಲೆಂದನು ತರುಣಶಶಿಮೌಳೀ || ೪೮

ಭೂತಳವನೆಲ್ಲವನು ಬಳಸಿರು |
ವಾತಮವಪರಿಹರಿಸಿ ಬೆಳಕ ವ |
ಹಾತಿಶಯದಿಂ ಕೊಡುವ ತಾರಾಮಾಲಿಯಂದದಲಿ ||
ದ್ವೈತತಿಮಿರವಹರಿಸಿ ಪರಮಾ |
ದ್ವೈತಕಾಂತಿಯ ಹರಹುತಿರ್ದವು |
ಭೂತನಾಥನ ಶಿಷ್ಯರಚಿತಗ್ರಂಥಮಾಲಿಗಳು || ೪೯

ಧರೆಯನಾವರಿಸಿರ್ಪ ತಿಮಿರವ |
ಕಿರಣಗಳ ದೆಸೆಯಿಂದ ಹರಿಸುತ |
ತರಣಿಮಂಡಲವಧಿಕತೇಜದೆ ಶೋಭಿಸಂದದಲಿ ||
ವಿರಸವಹ ಭೇದಾಂಧಕಾರವ |
ಹರಸು ನಿಜಶಿಷ್ಯಾಳಿವಿರಚಿತ |
ನಿರುಪಮಗ್ರಂಥಾಖ್ಯ ಕರದಿಂ ಹರಿಸಿ ಶೋಭಿಸಿದ || ೫೦

ಸಕಲದಿಗ್ದೇಶಗಳೊಳೆಲ್ಲಿಯು |
ಸುಕರಮೆನಲದ್ವೈತವಿದ್ಯಾ |
ಪ್ರಕಟಮಾದುದು ಭೇದಭಾವನೆಯುಡಗಿತೆಲ್ಲಿಡೆಯ ||
ಸಕಲದೇಶದೊಳುಳ್ಳ ವಿದ್ವ |
ನ್ನಿಕರವ್ಶೈತಂದೆರಗಿ ಚರಣಕೆ |
ಮುಕುಳಕರಪುಟರಾಗಿ ಸಂಸ್ತುತಿಸಿದರು ಶಂಕರನ || ೫೧

ಜಯನಮೋ ದುರ್ಮತವಿದಾರಣ |
ಜಯನಮೋ ವಿಜ್ಞಾನಕಾರಣ |
ಜಯನಮೋ ಭವಜಲಧಿತಾರಣ ಮೋಕ್ಷಕಾರಣನೆ ||
ಜಯನಮೋ ಗುರುವರ್ಯಶಂಕರ |
ಜಯತುಜಯಜಯ ಪರಮಗುರುವರ |
ಜಯನಮೋ ಪರಮೇಷ್ಟಿಗುರುವರಜಯನಮೋಜಯತು || ೫೨

ನುತಿಸುತಿರಲೀತೆರದೆ ಸುಜನ |
ಪ್ರತತಿ ತನ್ನನು ಶಿಷ್ಯರೊಡನತಿ |
ಹಿತದೆ ದಿವ್ಯಾದ್ವೈತತತ್ವಾಮೃತವ ಬೋಧಿಸುತ ||
ಸತತ ಶಿಷ್ಯರನೇಕರಿಂ ಸೇ |
ವಿತನು ತಾನಾಗುತ್ತ ಹರ್ಷದೆ |
ಯತಿವರಶ್ರೀಕಂಠನಿರ್ದನು ಶೃಂಗಗಿರಿಯೊಳಗೆ || ೫೩

ಸಂಧಿ ಮೂವತ್ತೊಂದಕ್ಕೆ ಪದ್ಯ ೧೫೨೩ಕ್ಕೆ ಮಂಗಳ.

# ಮೂವತ್ತೆರಡನೆಯ ಸಂಧಿ.

ಸೂಚನೆ|| ಜನನಿ ಕಾಲಟಿಯೊಳಗೆ ತನ್ನನು |
ನೆನೆಯಲಾಕ್ಷಣ ಸಾರಿ ತಾಯಿಯ |
ಘನತರದ ವೈಕುಂಠಲೋಕಕೆ ಕಳುಹಿದನು ಯತಿಪ ||

ಕೇಳು ಶೌನಕಮುನಿಪ ಮೃಗಧರ |
ಮೌಳಿಯಾ ಶೃಂಗಾದ್ರಿಯೊಳು ಶಿ |
ಷ್ಯಾಳಿಯಿಂದೊಡಗೂಡಿ ದೇವಾಲಯದೊಳಿರುತಿರ್ದು ||
ಲೀಲೆಯಿಂದದ್ವೈತತತ್ವವಿ |
ಶಾಲಬೋಧಾಮೃತವ ಜನರಿಗೆ |
ಪಾಲಿಸುತ ಸುಜ್ಞಾನದೀಪ್ತಿಯ ಹರಹಿದನು ಜಗದೆ | ೧

ಇರುತಿರಲು ಬಳಿಕೊಂದುದಿನ ಗುರು |
ಚರಣಕಾನತನಾಗಿ ಪಂಕಜ |
ಚರಣ ನುಡಿದನು ಕರಪುಟಾಂಜಲಿಯಿಂದ ವಿನಯದಲಿ ||
ಗುರುವೆ ಭವದಾಜ್ಞೆಯನು ಪಡೆದಾಂ |
ವರಸುತೀರ್ಥಗಳಿಂದ ಶೋಭಿಪ |
ಪರಮಪುಣ್ಯಕ್ಷೇತ್ರಯಾತ್ರೆಯನೆಸಗಿ ಬಹೆನೆನುತ || ೨

ಎನಲು ಕೇಳುತಲಾಗ ಸಂಯಮಿ |
ಜನತಿಲಕನಿಂತೆಂದನಾಗಲು |
ವನಜಪಾದನೆ ಕೇಳು ಗುರುಸಾನ್ನಿಧ್ಯದಲ್ಲಿಹುದು ||
ವಿನುತ ಪುಣ್ಯಕ್ಷೇತ್ರವಾಸವು |
ನೆನೆವೊಡಾಶಿಷ್ಯರಿಗೆ ಗುರುಪದ |
ವನಜತೀರ್ಥವೆ ಪರಮಪಾವನತೀರ್ಥವೆನಿಸುವುದು || ೩

ಪರಮಪುಣ್ಯಕ್ಷೇತ್ರತೀರ್ಥಾ ।
ಚರಣೆಯಿಂದಹ ಸಕಲಸಿದ್ಧಿಯು ।
ದೊರೆವುದೈ ಗುರುಚರಣಸೇವಾಸಕ್ತನಾದವಗೆ ॥
ಗುರುಚರಣ ಶುಶ್ರೂಷೆಯನು ನೆರೆ ।
ತೊರೆದು ತಾನನ್ಯತ್ರದೇಶಕೆ ।
ತೆರಳಲಾಗದು ಶಿಷ್ಯನಾದವನಿದುವೆ ಪರಮಾರ್ಥ ॥

ದ್ವಿವಿಧವಹ ಸನ್ಯಾಸವಿಹವೆಲೆ ।
ಭುವನಜಾಂಘ್ರಿಯೆ ಕೇಳು ತತ್ವದ ।
ವಿವರವನು ತಿಳಿದಿರ್ಪುದೊಂದದ ತಿಳಿಯುತಿಹುದೊಂದು ॥
ಇವುಗಳನು ವಿದ್ವತ್ತುಮೇಣಾ ।
ವಿವಿದಿಷಾಭಿದದಿಂದ ಕರೆವರು ।
ವಿವಿದಿಷಾಸನ್ಯಾಸಿಗಳು ನೀವೆಲ್ಲ ಭಾವಿಸಲು ॥

ವಿದಿತವೆನಲೀವಿಷಯವೆಲ್ಲವ ।
ಹೃದಯದೊಳು ಭಾವಿಸಲು ಬೇಹುದು ।
ಸದರವೇ ಯತಿಗಳಿಗೆ ತೀರ್ಥಕ್ಷೇತ್ರಪರ್ಯಟನೆ ॥
ಮುದದೆ ಕರ್ಮವರಚಿಸೆ ಪಥದೊಳು ।
ಸದಮಲಾಂಬುವು ದೊರೆವುದೊಂದೆಡೆ ।
ಯದಕೆ ದುರ್ಲಭವಹುದು ಮತ್ತಿನ್ನೊಂದು ತಾಣದಲಿ ॥

ಬಳಿಕಲೊಂದೆಡೆಯೊಳಗೆ ಯೋಗ್ಯ ।
ಸ್ಥಳವು ದೊರೆವುದು ಮುಂದೆ ಪೋದೊಡೆ ।
ಕೆಲವೆಡೆಯೊಳದು ದೊರೆಯದಿರ್ಪುದು ಕಠಿಣಮಾರ್ಗದಲಿ ॥
ಮಳೆಯು ಚಳಿ ಬಿರುಗಾಳಿ ಬಲುಬಿಸಿ ।
ಲೊಳಗೆ ಮಲಗುತ ಬಳಲಿ ಬೀಳುತ ।
ಕಳೆಯಬೇಹುದು ಕೆಲವುದಿನಗಳ ತೀರ್ಥಯಾತ್ರೆಯಲಿ ॥

ಕಾಲಕಾಹಾರಗಳು ದೊರಿಯದೆ ।
ಕಾಲುಬಾರದೆ ಮುಂದೆನಡೆಯಲು ।
ಬೀಳುತೇಳುತ ಹಸಿವು ಬಾಯಾರಿಕೆಯಲುರೆನೊಂದು ॥
ತಾಳಲರಿದೆಂದೆನಿಪ ಬಹುರೋ ।
ಗಾಳಿಗಾಶ್ರಯವಾಗಿ ದೇಹವು ।
ಗೋಳಿಡುತ ಮಲಗುವರು ಪಥದಲಿ ತೀರ್ಥಯಾತ್ರಿಕರು ॥ ೮

ಸ್ನಾನಶೌಚವು ಜಪತಪಾನು ।
ಷ್ಠಾನ ದೇವತಾರ್ಚನೆಗಳಾಪ್ರಣ ।
ವಾನುಸಂಧಾನಂಗಳಿಲ್ಲವು ರೋಗಕಾರಣದೆ ॥
ನ್ಯೂನತೆಯನೈದುವುದು ಪಥದೊಳು ।
ಸಾನುರಾಗವೆ ಪೇಳು ನೀನೆನ ।
ಲಾ ನಳಿನಪದನಾಗ ನುಡಿದನು ಗುರುವಿಗಭಿನಮಿಸಿ ॥ ೯

ಗುರುವೆ ಶಿಷ್ಯಪ್ರೇಮದಿಂ ನೀ ।
ವರುಹಿದುದು ನಿಜವದಕೆ ಮಾರು ।
ತ್ತರವನೀಯಲು ನಾನಶಕ್ತನು ತೀರ್ಥಯಾತ್ರೆಯಲಿ ॥
ದೊರೆವ ಬಹುವಿಧದುಃಖ ಪಾರಂ ।
ಪರೆಗಳೆಲ್ಲವು ತಾವು ಪೇಳಿದ ।
ತೆರದೆ ದೊರಕುವುದೆಂಬುದಿದು ತಾಂ ಸಹಜಮಾಗಿಹುದು ॥ ೧೦

ಆದೊಡೆಯು ವರತೀರ್ಥಯಾತ್ರೆಯ ।
ನಾದರಿಸದಿರಲೆನ್ನ ಚಿತ್ತಕೆ ।
ಖೇದತಪ್ಪದು ಮನಕೆ ತಾ ವ್ಯಾಕುಲತೆಪಿರಿದಹುದು ॥
ಹೇಪಯಾಂಬುಧಿ ಕೇಳು ನಿಜಗುರು ।
ಪಾದಪದ್ಮವನಂಬಿದಾತಂ ।
ಗಾದಪುದೆ ಭಾವಿಸಲು ಮಾರ್ಗದೊಳಶುಭಕೋಟಿಗಳು ॥ ೧೧

ದೂರದೇಶಕೆ ಗಮಿಸಿರಲಿ ತಾಂ ।
ಸಾರೆಯಿರಲಾಗುರುವರೇಣ್ಯಪ ।
ದಾರವಿಂದವನಾರು ಮನದೊಳು ನಿರತಭಜಿಸುವನೊ ॥
ಆರುಹಗೆಗಳಗೆಲಿದು ವಿಗತಪಿ ।
ಕಾರಪರಮಬ್ರಹ್ಮಪದವನು ।
ಸಾರುವನು ವರಗುರುಕಟಾಕ್ಷದೊಳವನು ಜಗನರಿಯೆ ॥ ೧೩

ಲಾಲಿಸೈ ಗುರುವರನೆ ಯಾತ್ರಿಕ ।
ಜಾಲಕಾಮಾರ್ಗದಲಿ ದೊರೆಯದು ।
ಕಾಲಕಾಹಾರಾದಿವಸ್ತುಗಳೆಂಬುದಿದುದಿಟವು ॥
ಲೀಲೆಯಿಂ ಸನ್ಯಾಸಧರ್ಮವ ।
ಪಾಲಿಸುವ ಯತಿಜನರಿಗೀಪ್ರತಿ ।
ಕೂಲ ತಾನಾವಗಲು ಬಹುಸಾಮಾನ್ಯವಾಗಿಹುದು ॥ ೧೪

ದಾರಿಯಲಿ ರೋಗಾದಿಬಾಧೆ ಶ ।
ರೀರಕಹುದೆಂಬುದನು ಮನದೆ ವಿ ।
ಚಾರಮಾಡಲು ಮನುಜಗಾ ಪ್ರಾರಬ್ಧಕರ್ಮದಲಿ ॥
ಸೇರುತಿಹ ರೋಗಾದಿಬಾಧೆಯ ।
ನೂರೊಳಾಗಲಿ ಕಾಡೊಳಾಗಲಿ ।
ಮೀರದನುಭವಿಸುವುದು ತಪ್ಪುವುದೆಂತು ಲೋಕದಲಿ ॥ ೧೫

ಪರಿಕಿಸಲು ದೈವೇಚ್ಛೆಯಿಂದಲೆ ।
ಬರುವ ಸುಖದುಃಖಗಳು ತಪ್ಪದೆ ।
ದೊರಕುವುವು ಮನುಜನಿಗೆ ತಾನಾವೆಡೆಯೊಳಿದ್ದಡೆಯು ॥
ಅರಮನೆಯೊಳಿದ್ದವನು ಪಡೆವನು ।
ಮರಣವನು ನೆರೆ ಕಾಡೊಳಿದ್ದವ ।
ನುರುತರದಸುಖಗಳನುಪಡೆವನು ಸುಪ್ರಸಿದ್ಧವಿದು ॥ ೧೬

ಈನಿಮಿತ್ತದೆ ಬರುವ ರೋಗವು ।
ತಾನದೆಲ್ಲಿದ್ದಡಯು ತಪ್ಪದು ।
ಸಾನುರಾಗದೆಲಾಲಿಸೈ ಗುರುವರ್ಯನೀನಿದನು ॥
ಸ್ನಾನಶೌಚವನೆಸಗೆ ಪಥದೊಳ ।
ನಾನುಕೂಲವು ಬರಲು ತದ್ದೇ ।
ಶಾನುಸಾರದಲೆಸಗೆ ಮನ್ವಾದಿಗಳು ಪೇಳಿಹರು ॥ ೧೬

ಗುರುವೆ ಕೇಳದರಿಂದ ನಾನಾ ।
ಚರಿಸುತಿರ್ದರು ತೀರ್ಥಯಾತ್ರೆಯ ।
ನಿರುವುದೆನ್ನಯಮನವು ಭವದೀಯಾಂಘ್ರಿಕಮಲದಲಿ ॥
ಬರುವ ಕಷ್ಟಕ್ಲೇಶವೆಲ್ಲವು ।
ಕೊರತೆಯಿಲ್ಲದೆ ಬರುತಲಿರ್ಪವು ।
ಗುರುಚರಣ ಭಕ್ತಿಯಿರೆ ಪರಿಹರವಹವು ನಿಮಿಷದಲಿ ॥ ೧೭

ದೂರದಲ್ಲಿದ್ದಡೆಯು ತವಪಾ ।
ದಾರವಿಂದದ ಭಕ್ತಿಯೊಂದಿರೆ ।
ಸೇರಲಮ್ಮವು ತನ್ನ ಕಾಯಕ್ಲೇಶಮೆಳ್ಳನಿತು ॥
ಮಾರವೈರಿಯೆ ತನಗೆ ಕರುಣವ ।
ತೋರಿ ನೇಮವನಿತ್ತು ಕಳುಹೆನೆ ।
ಸಾರಸಾಂಘ್ರಿಗೆ ನುಡಿದನಾಗಲು ಶಂಕರಾಚಾರ್ಯ ॥ ೧೮

ಕೇಳು ಸಾರಸಚರಣ ಶಿಷ್ಯಜ ।
ನಾಳಿಯಿಂದೊಡಗೂಡಿ ತೆರಳಿ ವಿ ।
ಶಾಲ ಪುಣ್ಯಕ್ಷೇತ್ರಯಾತ್ರೆಯನೆಸಗಿ ಸುಜನರಿಗೆ ॥
ಮೇಲೆನಿಸುವದ್ವೈತತತ್ವವ ।
ಲೀಲೆಯಿಂ ಬೋಧಿಸುತ ಕುಜನರ ।
ಜಾಲದೊಳು ನೀಸಿಲುಕದ್ವೈತಹುದೆಂದನಾಯತಿಪ ॥ ೧೯

ಪ್ರಾರಬ್ಧುದವಶದಿಂದ ಬಂದೊಡ |
ಪಾರಕಷ್ಟಂಗಳನು ಚಿತ್ತಕೆ |
ತಾರವತಿಧೈರ್ಯದಲಿ ನೀನನುಭವಿಸಿ ಮುಗಿಸುವುದು ||
ದಾರಿಯಲಿ ಕಾಲವನು ಕಳೆಯದೆ |
ಸೇರು ಶೀಘ್ರದೊಳಿಸ್ಮನೆಂದಾ |
ಸಾರಸಾಂಘ್ರಿಗೆ ನೇಮಿಸುತಲಿಂತೆಂದನಾಯತಿಪ || ೨೦

ಕೆಲವುಜನ ಶಿಷ್ಯರನು ಕೂಡುತ |
ಹಲವುಪುಸ್ತಕಗಳನು ಕೈಕೊಂ |
ಡೊಲವಿನಿಂ ಸುಮುಹೂರ್ತದೊಳು ನೀಂ ತೆರಳು ಸಂತಸದಿ ||
ನಳಿನನಾಭನು ಶುಭಪರಂಪರೆ |
ಗಳನು ನೀಡಲಿ ಜಗಕೆ ನಿನ್ನಿಂ |
ದಲಘುತರ ಸುಜ್ಞಾನ ಲಭಿಸಲಿಯೆಂದನಾಯತಿಪ || ೨೧

ಕರುಣಿಸಲು ಕಾಮಾರಿ ಯೀಪರಿ |
ಪರಮಹರ್ಷಿತನಾಗಿ ಪಂಕಜ |
ಚರಣನಾಶಂಕರನ ಪಾದಾಂಭೋರುಹಕ್ಕೆರಗಿ ||
ಕರಗಳನು ಜೋಡಿಸಿ ಸತೀರ್ಥ್ಯರ |
ನೆರವಿಯನು ಬೀಳ್ಕೊಂಡು ಶಿಷ್ಯರು |
ಪರಿಕರಗಳೊಡನೈದಿ ತೆರಳಿದನಧಿಕಸಂಭ್ರಮದೆ || ೨೨

ಕಮಲಚರಣನು ತೆರಳೆ ಬಳಿಕಾ |
ವಿಮಲಮತಿ ಯತಿವರ್ಯ ತನ್ನನು |
ಕಮಲಜ ಪ್ರಮುಖಾದಿ ಶಿಷ್ಯರು ಸೇವಿಸುತಲಿರಲು ||
ಅಮಲತತ್ವಾಮೃತ ಸುಬೋಧೆಯ |
ನಮಿತ ಕೃಪೆಯೊಳು ಸಕಲಸಜ್ಜನ |
ಸಮಿತಿಗೀಯುತಲಿರ್ದನನುಪಮ ಶೃಂಗಗಿರಿಯೊಳಗೆ || ೨೩

ಇತ್ತಲೀಪರಿಯಿರಲು ಮುನಿ ಕೇ |
ಳತ್ತ ಕಾಲಟಿಯೊಳಗೆ ಯತಿಪನ |
ಹೆತ್ತತಾಯಿಯು ಬಹುಳವೃದ್ಧಾಪ್ಯದಲಿ ಬಳಲುತಲಿ ||
ಚಿತ್ತಜಾರಿಯು ತನಗೆ ಕರುಣದೊ |
ಳಿತ್ತ ಮಗನನು ನೆನೆದು ನೆರೆ ಮರು |
ಗುತ್ತಲಿದ್ದಳು ರೋಗಪೀಡಿತೆಯಾಗಿ ಶಯ್ಯೆಯಲಿ || ೨೪

ಮುನ್ನಸನ್ಯಾಸವನು ಕೈಕೊಂ |
ಡೆನ್ನಮಗ ಶಂಕರನು ಪೇಳಿಹ |
ನೆನ್ನಮೃತದೇಹವನು ಸಂಸ್ಕರಿಸುವೆನು ತಾನೆನುತ ||
ಸನ್ನಿಹಿತಮಾಗಿಹುದು ಮೃತಿತನ |
ಗಿನ್ನು ಬಾರನದೇಕೆ ಮಗನೆಂ |
ದುನ್ನತದದುಃಖದಲಿ ಮರುಗುತಲಿರ್ದಳಾರ್ಯಾಂಬೆ || ೨೫

ಜನನಿಯೀಪರಿ ತನ್ನಮನದೊಳು |
ನೆನೆಯುತಿರಲದನರಿಯುತಾಕ್ಷಣ |
ವನಜಸಂಭವಮುಖ್ಯಶಿಷ್ಯರ ಕರೆದು ಶಂಕರನು ||
ಜನನಿಯನು ಸಂತೈಸೆ ನಾ ನೀ |
ಘನಪಥದೊಳೈದುವೆನು ನೀವಾ |
ವಿನುತ ಕೇರಳದೇಶಕೈತಹುದೆನುತ ನೇಮಿಸಿದ || ೨೬

ಅರುಹುತೀಪರಿ ಬಳಿಕ ಗಗನೇ |
ಚರರಮಾರ್ಗದೆ ತೆರಳಿಬಂದೀ |
ಧರೆಗಿಳಿದು ಕಾಲಟಿಯಸೇರುತ ಪೂರ್ವಮಂದಿರದ ||
ಇರವ ಕಂಡೊಳಪೊಕ್ಕು ಶಯ್ಯೆಯೊ |
ಳಿರುವ ಜನನಿಯ ನೋಡಿ ಮನದೊಳು |
ಹಿರಿದು ಮರುಗಿದನಾಗ ಸುಜ್ಞಾನಾಂಬುಜದ್ಯುಮಣಿ || ೨೭

ತನುವನಾವರಿಸಿರ್ಪ ಜರೆಯಿಂ |
ದನವರತ ಬಾಧಿಸುವ ರುಜೆಯಿಂ |
ತನಯು ತನ್ನನು ತೊರೆದುಪೋದ ವಿಯೋಗಕಾರಣದಿಂ ||
ತನುಕರಗಿ ಮನಬೆಂದು ಸಂತತ |
ವನಿತೆ ಬಿಸುಸುಯ್ಯುತ್ತ ಹೃದಯದೆ |
ಜನಿಸಿದೂರ್ಧ್ವಶ್ವಾಸಲಹರಿಯೊಳಿದ್ದಳಾರ್ಯಾಂಬೆ || ೨೮

ಚಲಿಸದಂದದೆಸೀಡಿ ಕೈಕಾ |
ಲ್ಗಳನು ಕಂಗಳಮುಚ್ಚಿ ಮನದೊಳು |
ನಳಿನನಾಭಧ್ಯಾನದಿಂದಾನಂದಮುಂಕುರಿಸಿ ||
ಪುಳಕಮೂಡುವುದೊಮ್ಮೆ ತನಯಂ |
ಗಳಲಿ ದುಃಖಾಶ್ರುಗಳು ಕಣ್ಣಿಂ |
ದಿಳಿಯುತಿಹುದಿನ್ನೊಮ್ಮೆಯಾ ವನಿತಾಶಿರೋಮಣಿಗೆ || ೨೯

ಜನನಿಯಿರವನು ಕಂಡು ಸಂಯಮಿ |
ಜನತಿಲಕ ದುಃಖಾಶ್ರುಜಲದಿಂ |
ತನುನೆನೆದು ಮರುಗುತ್ತ ತನ್ನನು ತಾನೆ ಸಂತೈಸಿ ||
ಜನನಿಯೆಡೆಗೈತಂದು ಗದ್ಗದ
ನಿನದದಿಂ ಮಾತೆಯನು ಕುರಿತತಿ |
ವಿನಯಮಧುರವಚೋವಿಲಾಸದೆ ನುಡಿದನಿಂತೆಂದು || ೩೦

ಜನನಿ ಲಾಲಿಪುದಿದಕೊ ನಿನ್ನಯ |
ತನುಜ ನಾಂ ಬಂದಿಹೆನು ನಿನ್ನೀ |
ತನುವಿಗೊದವಿದ ಕಷ್ಟಕಾಲದೆ ನಿನ್ನಸೇವಿಸುವ ||
ಘನಸುಕೃತಹೀನನನು ನಿರ್ದಯ |
ನನು ಕೃತಘ್ನನ ನೋಡು ಕಂದೆರ |
ದೆನುತ ತಾಯಿಯ ಚರಣಯುಗ್ಮವಪಿಡಿದು ಬೇಡಿದನು || ೩೧

ಮೃದುಮಧುರವಾಕ್ಸುಧೆಯು ವೃದ್ಧೆಯ |
ಹೃದಯಕಾಪ್ಯಾಯನವನೆಸಗಲು |
ವದನ ವಿಕಸಿತವಾದುದಿಂದ್ರಿಯಶಕ್ತಿ ಮರಳಿದುದು ||
ಹದುಳಿಸಿದುದಾ ಕರಣಚಯ ಸಂ |
ಮುದವು ತಲೆದೋರಿದುದು ಮೆಲ್ಲನೆ |
ಸುದತಿ ಕಂಗಳತೆರೆದು ಕಂಡಳು ಮಗನನಿದಿರಿನಲಿ || ೩೨

ಸುತನೆ ಬಂದ್ಯೆ ಸತತಸತ್ಯ |
ವ್ರತನೆ ಬಂದ್ಯೆ ಪರಮಮಹಿಮಾ |
ನ್ವಿತನೆ ಬಂದ್ಯೆ ಯತಿಕುಲಾಂಬುಧಿಸೋಮ ಬಾರೆಸುತ ||
ಸತಿಯು ಬಹುಸಂಕಟವ ಮರೆದಳು |
ಸುತನ ಹತ್ತಿರೆಕರೆದು ಕರಗಳ |
ಹಿತದೆ ಪಿಡಿಯುತ ನುಡಿದಳತಿದೈನ್ಯದಲಿ ಮಗನೊಡನೆ || ೩೩

ಹಿಂದೆ ನೀಂ ಯತಿತನವ ಕೈಕೊಂ |
ಡಂದು ತನ್ನವಸಾನಸಮಯಕೆ |
ಬಂದು ತನ್ನಯ ದೇಹಸಂಸ್ಕಾರವನುಮಾಡುವುದು ||
ಎಂದು ನಾಂ ಪ್ರಾರ್ಥಿಸಿದೊಡಂತಹು |
ದೆಂದು ಭಾಷೆಯನಿತ್ತ ತೆರದೊಳ |
ಗಿಂದುಬಂದ್ಯೆ ನಿನ್ನಪೋಲುವರುಂಟೆ ಲೋಕದಲಿ || ೩೪

ಸುತನೆ ಕೇಳ್ಸನ್ನಿಹಿತಮಾಗಿದೆ |
ಮೃತಿ ತನಗೆ ನೀನಿರ್ದು ತನ್ನಯ |
ಮೃತಶರೀರಕೆ ವಿಧಿವಿಹಿತ ಸಂಸ್ಕಾರಗಳನೆಸಗಿ ||
ಸತತ ತನಗಾಪುಣ್ಯಲೋಕದ |
ಗತಿಯು ದೊರೆವಂದದಲಿ ಮಾಡೆನೆ |
ಯತಿಪ ಕೈಕೊಂಡೆರಗಿದನು ನಿಜಜನನಿಯಂಘ್ರಿಯಲಿ || ೩೫

ಪರಿಪರಿಯವಿಧದಿಂದಲೊದಗುವ |
ಮರಣಸಂಕಟ ತನ್ನ ಜನನಿಗೆ |
ಹರಿಯಬೇಕೆಂದೆನುತ ಯತಿಪತಿಯಧಿಕಭಕ್ತಿಯಲಿ ||
ಪರಶಿವಸ್ತೋತ್ರಗಳನೇಕವ |
ವಿರಚಿಸುತಲಾರ್ಯಾಂಬೆ ಕೇಳುವ |
ತೆರದೆ ಪಠಿಸುತಲಿರ್ದನಾಗಲು ಮಂಜುಳಸ್ವರದೆ || ೩೬

ಶಿವಯತಿಯು ಪರಶಿವನ ನುತಿಸಲು |
ಶಿವನ ನೇಮದಲಾಗ ಬಂದರು |
ಶಿವನದೂತರು ದಿವ್ಯರತ್ನವಿಮಾನದಲಿ ಕುಳಿತು ||
ಶಿವಸಮಾನ ಸುಶಾಂತರೂಪದೆ |
ಶಿವಗುರುವಿನಂಗನೆಗೆ ತೋರುತ |
ಶಿವನಭವನಕೆ ಬರುವುದೆಂದರು ಕರಗಳನು ಮುಗಿದು || ೩೭

ವನಿತೆಯಾರ್ಯಾಂಬಿಕೆಯು ಸಂತತ |
ಮನದೆ ನಾರಾಯಣನ ಪಾದವ |
ನೆನೆದು ಭಜಿಸುತ್ತಿರ್ದಳದರಿಂ ಹರಿಯನೇಮದಲಿ ||
ವನಜನಾಭನ ದೂತರೈತಂ |
ದನುಪಮಾನವಿಮಾನಕೈತಹು |
ದೆನುತಲಾಹ್ವಾನಿಸುತಲಿರ್ದರು ಮುದದೊಳಾಕೆಯನು || ೩೮

ಯತಿಪನಿದಕಾಣುತ್ತ ಜನನಿಯು |
ಸತತ ನಿರ್ಮಲ ಮನದೆ ಲಕ್ಷ್ಮೀ |
ಪತಿಯನೇ ಧ್ಯಾನಿಸುತಲಿಹಳದರಿಂದಲೀಕೆಯನು ||
ಹಿತದೊಳುಪಚರಿಸುತ್ತಲಾ ಶ್ರೀ |
ಪತಿಯ ಸೇವಕರೊಯ್ಯುವುದೆಂದೆನೆ |
ಪತಿಕರಿಸಿ ಕರೆದೊಯ್ದರಾವೈಕುಂಠಪುರವರಕೆ || ೩೯

ಮಾನಿನಿಯು ವರರತ್ನ ಖಚಿತ ವಿ ।
ಮಾನದಲಿ ನೆರೆ ಕುಳಿತು ತನ್ನಯ ।
ಸೂನುವನು ಪೊಗಳುತ್ತಲಾವೈಕುಂಠಪುರವರಕೆ ॥
ಸಾನುರಾಗದೆ ತೆರಳುತಲ್ಲಿಯ ।
ನೂನ ಸುಖದೊಳಗಿರ್ದು ಬಳಿಕಾ ।
ಮೀನಕೇತನಪಿತನ ದಯೆಯಿಂ ಮೋಕ್ಷಕೈದಿದಳು ॥ ೪೦

ವಿಸುತ ಯತಿವರನಿತ್ತ ತನ್ನಯ ।
ಜನನಿಗಾ ವಿಧ್ಯುಕ್ತಮಾರ್ಗದೊ ।
ಳನಲ ಸಂಸ್ಕಾರವನು ತಾನೇಮಾಳ್ಪೆನೆಂದೆನುತ ॥
ಮನದೆ ನಿಶ್ಚಯಿಸುತ್ತ ಬಾಂಧವ ।
ರನು ಕರೆಯಲವರೆಲ್ಲ ಯತಿಯಿವ ।
ನನಲ ಸಂಸ್ಕಾರವನುಮಾಡುವುದುಚಿತಮಲ್ಲೆನುತ ॥ ೪೧

ಮತಿಯೊಳಗೆ ನಿಶ್ಚಯಿಸಿ ಬಳಿಕಾ ।
ಯತಿಪತಿಗೆ ಪೇಳಿದರು ಮಾತೆಯ ।
ಮೃತಶರೀರಕೆ ನೀನು ಸಂಸ್ಕಾರವನು ವಿರಚಿಪುದು ॥
ಮತವು ತಾನೆಂತಹುದು ಶಾಸ್ತ್ರ ।
ಪ್ರತತಿಯೊಪ್ಪದು ನಾವಿದಕೆ ಸಂ ।
ಮತಿಸುವವರಲ್ಲೆನುತ ನಡೆದರು ತಮ್ಮಗೃಹಗಳಿಗೆ ॥ ೪೨

ಈತೆರದೊಳಾ ಸಕಲಬಂಧು ।
ವ್ರಾತ ಮೃತಸಂಸ್ಕಾರಕಾರ್ಯವಿ।
ಘಾತಿಯನೆ ನಿಶ್ಚಯಿಸಿ ನಿರ್ದಯದಿಂದ ವರ್ತಿಸಲು ॥
ನೀತಿ ಬಾಹಿರರಾದ ದುಷ್ಕರ ।
ರೀತಿಯೀಪರಿಯೆಂದು ತಿಳಿವಾ ।
ಭೂತನಾಥನು ವನದೊಳಾರಿಸಿ ತಂದನಿಂಧನವ ॥ ೪೩

ತಂದ ಕಾಷ್ಟಂಗಳನು ತನ್ನಯ ।
ಮಂದಿರದ ಬಳಿಯೊಳಗೆ ಜೋಡಿಸು ।
ತಂದಮನೆ ವಿರಚಿಸುತ ಚಿತಿಯನು ಮೃತಕಳೇಬರವ ॥
ತಂದು ಚಿತಿಯೊಳಗಿಟ್ಟು ಬಲಗೈ ।
ಯಿಂದಲಗ್ನಿಯಮಥಿಸಿ ತೆಗೆಯುತ ।
ಲಂದು ಶವದಹನಾದಿ ಕಾರ್ಯವನೆಸಗಿದನು ಯತಿಪ ॥ ೪೪

ಉಳಿದಪರಕರ್ಮಗಳ ನಿರ್ಮಲ ।
ಸಲಿಲದಿಂದೊಡಗೂಡಿ ಪರಿಯುವ ।
ಲಲಿತ ಪೂರ್ಣಾನದಿಯತೀರದೊಳೆಸಗಿ ಶಂಕರನು ॥
ಜ್ವಲನ ಸಂಸ್ಕಾರಕ್ಕೆ ವಿಘ್ನವ ।
ಬಳೆಸಿದಾ ಬಾಂಧವರ ವಿಷಯದೆ ।
ತಳೆದನತಿರೋಷವನು ಪಾಪದಫಲವು ತಪ್ಪುವುದೆ ॥ ೪೫

ಶೀತಲದ ಚಂದನವ ಮಥಿಸಲು ।
ವೀತಿಹೋತ್ರನು ಜನಿಸುವಂದದೆ ।
ವೀತರಾಗದ್ವೇಷನಾದರು ಪರಮಹಂಸನಿಗೆ ॥
ಪಾತಕರ ದುರ್ನಡತೆಯಿಂ ವಿಪ ।
ರೀತ ಕೋಪವು ಜನಿಸೆ ಬಳಿಕೀ ।
ರೀತಿಯಿಂ ಶಾಪವನುಕೊಟ್ಟನು ಬಂಧುಜನಗಳಿಗೆ ॥ ೪೬

ವೇದ ಬಾಹಿರರಾಗಿ ಕೇರಳ ।
ಮೇದಿನೀಸುರರೆಲ್ಲ ಭಿಕ್ಷೆಯ ।
ನಾದರಿಸಿ ಯತಿಗಳಿಗೆ ನೀಡಲನರ್ಹರಾಗಿರಲಿ ॥
ಮೋದದಿಂ ವಾಸಿಸುವ ಮನೆಗಳ ।
ಹಾದಿಯಲಿ ಸುಡುಗಾಡ ರಚಿಸಲಿ ।
ಖೇದಪಡಲೆಂದೆನುತ ಶಾಪವನಿತ್ತನಾಯತಿಪ । ೪೭

ಮಾತೃವಾಕ್ಯವ ಲಂಘ್ಯವೆಂಬೀ |
ನೀತಿಯಿಂದಲೆ ನಡೆದ ಶುಕಮುನಿ |
ತಾತನಂದದೆ ಯತಿಪಶಂಕರ ತನ್ನ ಮಾತೃವಿನ ||
ಮಾತಿನಂದದಲೊದಗಿಬಂದಾ |
ಪ್ರೇತಕರ್ಮವ ಸಾಂಗಗೈದುದು |
ನೀತಿಸಮ್ಮತವೆಂದು ಕೊಂಡಾಡಿತು ಬುಧಸ್ತೋಮ || ೪೮

ಉತ್ತಮಾಮಲಕೀರ್ತಿಯತಿಸ |
ರ್ವೋತ್ತಮನು ವಿಧಿವಿಹಿತವೆಂದೆನೆ |
ಉತ್ತರಕ್ರಿಯೆಗಳನು ವಿರಚಿಸಿ ತನ್ನ ಮಾತೃವಿಗೆ ||
ಉತ್ತಮೋತ್ತಮವೆನಿಪ ಸದ್ಗತಿ |
ಯಿತ್ತಬಳಿಕತಿಮುದದೆ ಕೇರಳ |
ದುತ್ತಮಕ್ಷೇತ್ರಗಳ ಚರಿಸುತಲಿರ್ದನಲ್ಲಲ್ಲಿ || ೪೯

ಇರುತಿರಲು ಬಳಿಕತ್ತಲಾತನ |
ಪರಮಶಿಷ್ಯರು ಶೃಂಗಗಿರಿಯಿಂ |
ಪೊರಟು ಗುರ್ವಾಜ್ಞೆಯಲಿ ಕೇರಳದೇಶವನು ಸೇರಿ ||
ಗುರುವರನ ದರ್ಶನವಪಡೆಯುತ |
ಚರಣಕೆರಗಲು ಕಂಡು ಕರುಣಾ |
ಕರನು ಕುಶಲವ ಕೇಳಿ ಮನ್ನಿಸುತಿರ್ದನನಿಬರನು || ೫೦

ಬಳಿಕ ಮಂಡನಮಿಶ್ರ ಹಸ್ತಾ |
ಮಲಕ ಮುಖ್ಯರಿಗೆಲ್ಲ ಕಾಲಟಿ |
ಯೊಳಗೆ ನಡೆಸಿದ ಮಾತೃಯಜ್ಞವಿಚಾರವೆಲ್ಲವನು ||
ಸಲೆ ಸುವಿಸ್ತರದಿಂದಲರುಹುತ |
ಲಲಘುಮಹಿಮನು ಪುಣ್ಯತೀರ್ಥವ |
ಹಲವನೊಳಗೊಂಡಿಪ್ಪ ಕೇರಳದೊಳಗೆ ಚರಿಸಿದನು || ೫೧

ಪರಿಪರಿಯತೀರ್ಥಗಳನೆಲ್ಲವ |
ಚರಿಸಿ ಬರುತಾ ವಿಶ್ವರೂಪನ |
ಕರೆದು ನುಡಿದನು ಜಲಜಪಾದನು ತೀರ್ಥಯಾತ್ರೆಯನು ||
ಚರಿಸುತಲೆ ಬಹುಕಷ್ಟನಷ್ಟಕೆ |
ಗುರಿಯಹನು ನಿಜವೆಂದು ಪೇಳುತ |
ಗುರುವರ ಶ್ರೀಕಂಠನಿರ್ದನು ಬಹುಳಸಂಭ್ರಮದಿ || ೫೨

ಸಂಧಿ ಮೂವತ್ತೆರಡಕ್ಕೆ ಪದ್ಯ ೧೫೭೫ಕ್ಕೆ ಮಂಗಳ.

## ಮೂವತ್ತಮೂರನೆಯ ಸಂಧಿ.

ಸೂಚನೆ|| ಹಲವುತೀರ್ಥವ ಚರಿಸಿ ನಿಜಮಾ |
ತುಲನ ದೆಸೆಯಿಂದಮಿತಕಷ್ಟಕೆ |
ಸಿಲುಕಿ ಬಂದನು ಪದ್ಮಪಾದನು ಯತಿಪನಿದ್ದೆಡೆಗೆ ||

ಇತ್ತಲೀಪರಿಯಿರಲು ಕೇಳ್ಮುನಿ |
ಪೋತ್ತಮನೆ ಶಂಕರನು ನೇಮುವ |
ನಿತ್ತು ಕಳುಹಿದ ಬಳಿಕಲಾ ಪದ್ಮಾಂಘ್ರಿಯೊಲವಿನಲಿ ||
ಉತ್ತಮದ ತೀರ್ಥಗಳ ನೆರೆ ಪೂ |
ರ್ವೋತ್ತರದೆ ಸಂಚರಿಸಿ ಶಿಷ್ಯರ |
ವೊತ್ತದಿಂದೊಡಗೂಡಿ ಬರುತಿರ್ದನು ಸರಾಗವಲಿ || ೧

ಇಂತುದೀಚಿಯೊಳುಳ್ಳ ತೀರ್ಥವ |
ನಂತವನು ಸೇವಿಸುತ ತಾನ |
ತ್ಯಂತ ಭಕ್ತಿಯೊಳಲ್ಲಿ ಹರಿಹರರಾಲಯಂಗಳಲಿ ||
ನಿಂತು ನುತಿಸುತ ನಮಿಸಿ ಪರಿಶು |
ದ್ಧಾಂತರಂಗನು ಪೂರ್ವದಿಕ್ಕಿನ |
ನಂತ ದೇಶಂಗಳಲಿ ಚರಿಸುತ ಬಂದನೊಲವಿನಲಿ || ೨

ಬಳಿಸಿಬರುತಾಬಳಿಕ ಶಿಷ್ಯರ |
ಬಳಗದಿಂದೊಡಗೂಡಿ ಮುದದಿಂ |
ಜಲಜಚರಣನು ಸಪ್ತಜಲಧಿಯನೊಂದುಬಿಂದುವೆನೆ ||
ಶಳಿದು ಪಾನಂಗೈದ ಮುನಿಕುಲ |
ತಿಲಕ ಕುಂಭೋದ್ಭವನು ಸಂತತ |
ನೆಲೆಸಿರುವ ವರದಕ್ಷಿಣಾಶಾದೇಶಕ್ಕೈತಂದ || ೩

ಕಮಲಚರಣನು ಯಾಮ್ಯದೊಳಗಿಹ |
ವಿಮಲ ತೀರ್ಥಸ್ನಾನವೆಸಗುತ |
ಲಮಿತ ಸಂಭ್ರಮದಿಂದಲಾಯಾಕ್ಷೇತ್ರವಾಸಿಗಳು ||
ಅಮಲ ಭಕ್ತಿಯೊಳೆರಗಿ ಪೂಜಿಸೆ |
ಮಮತೆಯಿಂದದ್ವೈತತತ್ವ |
ಕ್ರಮವ ಬೋಧಿಸಿ ಕಾಳಹಸ್ತಿಗೆ ಬಂದನೊಲವಿನಲಿ || ೪

ಅಲ್ಲಿಪರಿವ ಸುವರ್ಣಮುಖರೀ |
ಸಲ್ಲಲಿತ ನದಿಯೊಳಗೆ ಮೀಯುತ |
ಲೆಲ್ಲರಿಂದೊಡಗೂಡಿ ದೇವಾಲಯಕೆ ನಡೆತಂದು ||
ಫುಲ್ಲಬಾಣಾಂತಕನ ಮೃದುಪದ |
ಪಲ್ಲವದೊಳಭಿನಮಿಸಿ ಹರ್ಷೋ |
ತ್ಫುಲ್ಲ ಮಾನಸ ಕಾಳಹಸ್ತೀಶ್ವರನ ನುತಿಸಿದನು || ೫

ಪರಮಪಾವನ ಭುಜಗಭೂಷಣ |
ಸುರನದೀಧರ ಚಂದ್ರಶೇಖರ |
ಚರಣಭಕ್ತಮನಶ್ಚಕೋರಸುಧಾಂಶುಮಂಡಲನೆ ||
ವರವಿರಂಚಿಸುರೇಂದ್ರಮುಖ್ಯಾ |
ಮರಸುಪೂಜಿತ ಲೋಕಸನ್ನುತ |
ಚರಣಕಮಲದ್ವಂದ್ವ ರಕ್ಷಿಪುದೆಂದನಾಯತಿಪ || ೬

ಕಾಳಹಸ್ತೀಶ್ವರನ ನೀಪರಿ ।
ಶೀಲಗುಣನಿಧಿ ನುತಿಸಿ ಶಿಷ್ಯರ ।
ಮೇಳದಿಂದೊಡಗೂಡುತಲ್ಲಿಂ ತೆರಳಿ ಸಂಭ್ರಮದೆ ॥
ಶೂಲಧರಚರಣಾಬ್ಜ ಭಕ್ತಿವಿ ।
ಲೋಲಮಾನಸನಾಗಿ ಕೀರ್ತಿವಿ ।
ಶಾಲತೆಯನಾಂತಿರುವ ಕಾಂಚೀನಗರಕೈತಂದ ॥ ೭

ಬಂದು ಕಾಂಚೀಪುರದೆ ಶೋಭಿಸು ।
ವಿಂದುಧರನಾಲಯವಸೇರುತ ।
ವಂದಿಸುತ ಶಿವಪದಕೆ ಬಹುಭಕ್ತಿಯಲಿ ಸನ್ನುತಿಸಿ ॥
ಸಂದ ಸಂಭ್ರಮದಿಂದ ಬಳಿಕ ಸ ।
ನಂದನನು ತನ್ನಖಿಳಶಿಷ್ಯರ ।
ವೃಂದದಿಂದೊಡಗೂಡಿ ಸಾರಿದನಂಬಿಕಾಲಯವ ॥ ೮

ಸರಸಜಾಂಘ್ರಿಯು ಬಳಿಕ ದೇವಿಯ ।
ಚರಣಕಾನತನಾಗಿ ಶಿರದೊಳು ।
ಕರಪುಟಾಂಜಲಿ ಮೆರೆಯೆ ಕಾಮಾಕ್ಷೀಪದಾಂಬುಜವ ॥
ನಿರತ ಚಾನಿಸಿ ಮನದೊಳತಿಶಯ ।
ಹರುಷವಾನುತ ಮತ್ತೆ ಚರಣಾಂ ।
ಬುರುಹದಲಿ ವ್ಮೈಯಿಕ್ಕಿ ನುತಿಸಿದನಾದಿಶಕ್ತಿಯನು ॥ ೯

ಕಾಮಹರಕಾಮಿನಿ ನಿಜಾಶ್ರಿತ ।
ಕಾಮಿತಾರ್ಥದೆ ಕಾಮರೂಪಿಣಿ ।
ಕಾಮಿನೀಜನಕಾಮ್ಯದಾಯಿನಿ ಕಾಮವರ್ಜಿತೆಯೆ ॥
ಕಾಮಿತಂಗಳನೊಲಿದು ಸುಜನ ।
ಸ್ತೋಮಕೀಯುತ ರಕ್ಷಿಸೆನುತಲೆ ।
ತಾಮರಸಪಾದನು ಮಹಾಕಾಮಾಕ್ಷಿಗೆರಗಿದನು ॥ ೧೦

ಪರಿಪರಿಯೊಳೀತೆರದೆ ಕಾಂಚೀ |
ಪುರದ ಕಾಮಾಕ್ಷಿಯನು ನುತಿಸಿಯೆ |
ವರಯತಿಪನಲ್ಲಿಂದಬೀಳ್ಕೊಂಡನತಿದೂರದಲಿ ||
ಇರುವ ಕಲ್ಲಾಲೇಶನಾಮದ |
ಸಿರಿಯುರಸಗಭಿನಮಿಸುತಲ್ಲಿಂ |
ತೆರಳಿಬಂದನು ಪುಂಡರೀಕಾಭಿಖ್ಯಪುರವರಕೆ || ೧೧

ಪುಂಡರೀಕಾಂಘ್ರಿಯು ಬರುತ್ತಿರೆ |
ಪುಂಡರೀಕದೆ ನಿಜಮಹತ್ವದ |
ಪುಂಡರೀಕದೊಳಂಧಕಾಸುರಹೃದಯವನುತುಳಿದು ||
ಪುಂಡರೀಕಾಂಬಕಿಯ ಸಮುಖದೆ |
ಪುಂಡರೀಕಾಜಿನವಧರಿಸಿದ |
ತಾಂಡವೇಶ್ವರನಿರಲು ಭಕ್ತಿಯೊಳೆರಗಿದನು ಯತಿಪ || ೧೨

ಪರಮಪುಣ್ಯಕ್ಷೇತ್ರವೆನಿಪೀ |
ವರಚಿದಂಬರದೊಳಗೆ ಭಕ್ತರ |
ಪೊರೆಯಲೆಂದಾಶಿವನು ನಟರಾಜಾಭಿಧೇಯವನು ||
ಧರಿಸಿ ರಂಜಿಸುತಿರಲು ಬಂದಾ |
ಸರಸಿಜಾಂಘ್ರಿಯು ಶಿವನಪದಸಂ |
ದರುಶನೋತ್ಸವದಿಂದ ಹೊಂಪುಳಿಯೋದನಡಿಗಡಿಗೆ || ೧೩

ಪದುಮಪಾದನು ಬಳಿಕಲಾಕ್ಷೇ |
ತ್ರದ ಮಹಾಮಹಿಮೆಗಳನೆಲ್ಲವ |
ವಿದಿತವೆನೆ ತಾನರಿಯಲೋಸುಗ ದೇವಮಂದಿರದೆ ||
ಮುದದೆಬಂದಿಹ ವಿಪ್ರವರ್ಯರ |
ಪದುಳದಿಂ ಬೆಸಗೊಳಲು ಯತಿಪನ |
ಪದಕೆರಗಿ ವಿನಯದಲಿ ಪೇಳಿದನೊಬ್ಬಭೂಸುರನು || ೧೪

ಯತಿಪತಿಯು ಲಾಲಿಪುದು ಭಕ್ತ |
ಪ್ರತತಿ ಸಂಪ್ರಾರ್ಥಿಸಲು ಗಿರಿಜಾ |
ಪತಿಯು ಪರಮೋತ್ಸಾಹದಿಂ ನಟರಾಜರೂಪವನು ||
ಅತಿಶಯದೆ ಕೈಕೊಳ್ಳುತಿಲ್ಲಿಯು |
ಸತತನೆಲೆಸುತ ಶರಣರಿಷ್ಟವ |
ಹಿತದೆ ಕರುಣಿಸುತಿಹನು ಗಿರಿಜಾದೇವಿಯೊಡಗೂಡಿ || ೧೫

ಹರನು ನರ್ತನಲೀಲೆಯಿಂದಿರೆ |
ಶಿರದೊಳಿಹ ಗಂಗಾಪಯಃಕಣ |
ವುದುರಿ ಧರೆಗೈತಂದು ಶಿವಗಂಗಾಭಿಧಾನವನು ||
ಧರಿಸಿ ನಾಟ್ಯಶ್ರಮವ ಹರನಿಗೆ |
ಪರಿಹರಿಸಿ ಶೋಭಿಸುವ ಪಾವನ |
ತರ ಸುತೀರ್ಥವನಿದನು ಯತಿನೋಡೆಂದನಾದ್ವಿಜನು || ೧೬

ನಿತ್ಯವೀತೀರ್ಥದೊಳು ಮಿಾಯುತ |
ಲತ್ಯಧಿಕಭಕ್ತಿಯಲಿ ಮನುಜರು |
ನೃತ್ಯಲೋಲನ ಪಾದಸಂದರ್ಶನವನೆಸಗುತಿರೆ ||
ಮೃತ್ಯುಭಯಮೋಣ್ವಪ್ರಶಿಶುಗೋ |
ಹತ್ಯದೋಷಾದಿಗಳು ಹರಿವುದು |
ಸತ್ಯವೆಂದನು ವಿಪ್ರನೆರಗುತ ಯತಿಯಚರಣದಲಿ || ೧೭

ಎಂದಮಾತನು ಕೇಳಿ ಬಳಿಕ ಸ |
ನಂದನನು ಶಿವಗಂಗೆಯೊಳು ತಾ |
ಮಿಂದು ಶಿಷ್ಯರುಸಹಿತಲಾಯತ್ಯಾಶ್ರಮೋಚಿತವ ||
ಸಂದಭಕ್ತಿಯೊಳೆಸಗಿ ಪರಶಿವ |
ಮಂದಿರವನೊಳಪೊಕ್ಕು ಮಹದಾ |
ನಂದವನು ತಾಳಿದನು ತಾಂಡವಮೂರ್ತಿದರ್ಶನದೆ || ೧೮

ಪಾಹಿ ಮದನಾಂತಕ ಪುರಾಂತಕ |
ಪಾಹಿ ನಿರ್ಜರನಿಕರಪಾಲಕ |
ಪಾಹಿ ಶಿಷ್ಟಜನೈಕಪಾಲಕ ದುಷ್ಟಶಿಕ್ಷಕನೆ ||
ಪಾಹಿ ಶಾಶ್ವತಮೋಕ್ಷದಾಯಕ |
ಪಾಹಿ ಶರಣಜನೇಷ್ಟದಾಯಕ |
ಪಾಹಿ ಸಕಲಾಭೀಷ್ಟದಾಯಕ ಶಿವಪರಿತ್ರಾಹಿ || ೧೯

ಇಂತು ನಾನಾವಿಧದೆ ಗೌರೀ |
ಕಾಂತನನು ನೆರೆ ಭಜಿಸಿ ಯತಿಪನ |
ನಂತರದೊಳಾದ್ವಿಜರು ತನಗರ್ಪಿಸಿದಭಿಕ್ಷವನು ||
ಶಾಂತಮಾನಸನಾಗಿ ಶಿಷ್ಯರ |
ನಂತರಿಂದೊಡಗೂಡಿ ಭುಂಜಿಸಿ |
ಕಂತುಮಥನಗೆ ನಮಿಸಿ ಬೀಳ್ಕೊಂಡನು ಚಿದಂಬರವ || ೨೦

ಭೂತಳದೊಳುಳ್ಳಖಿಳತೀರ್ಥ |
ವ್ರಾತದೊಳಗುತ್ಕೃಷ್ಟವೆಂಬೀ |
ಖ್ಯಾತಿಯನುಪಡೆದಮಲತೀರ್ಥಂಗಳನು ನೆರೆತಳಿದ ||
ಸೇತುಯಾತ್ರೆಯನೆಸಗಿ ಬಹಸಂ |
ಪ್ರೀತಿಯಿಂದೈತಂದು ಬಳಿಕತಿ |
ಪೂತಗುರುಚರಣಾರವಿಂದವ ಸೇರಬಹುದೆನುತ || ೨೧

ಮನದೆ ನಿಶ್ಚೈಸುತ್ತ ಶಿಷ್ಯರ |
ನನಿಬರನು ನೆರೆತಿಳುಹಿ ಗುರುಪದ |
ಮನಜವಂ ಧ್ಯಾನಿಸುತ ಗಮಿಸುತ ಯಾಮ್ಯಮುಖನಾಗಿ ||
ವಿನುತ ತೀರ್ಥಂಗಳಲಿ ಮಿಾಯುತ |
ಘನತರಕ್ಷೇತ್ರಗಳನೀಕ್ಷಿಸಿ |
ವನಜಪಾದನು ಸಾರ್ದನಾಗಕ ವೇರಜಾತಟವ || ೨೨

ಸುರನದಿಗೆ ಮಿಗಿಲೆನಿಪ ಪಾವನ |
ತರ ಸುತೀರ್ಥಂಗಳನು ತಾಳುತ |
ವರಪಯೋಧಿಯತೆರದೆ ಶುಭ್ರತೆಯಾಂತುರಂಜಿಸುವ ||
ಮರಳಕಾಂತಿಯುತಳಿದು ಹೊಳೆಯುತ |
ಎರಡುತಟದೊಳು ಬೆಳೆದ ನಾನಾ |
ತರುಗಳಿಂರಾಜಿಸುತ ವರಕಾವೇರಿಶೋಭಿಪುದು || ೨೩

ಧ್ಯಾನಗೈದರಿಗಿಂದ್ರಪದವಿಯು |
ಪಾನಗೈಯೆ ವಿರಂಚಿಪದವಂ |
ಸ್ನಾನವೆಸಗಲು ನರರಿಗಾವರವಿಷ್ಣುಪದವಿಯನು ||
ಧ್ಯಾನಪಾನಸ್ನಾನಗೈಯುತ |
ಮೌನದಿಂ ತೀರದಲಿ ತಪಮಿರೆ |
ತಾನು ಶಿವಪದಮೀವೆನೆನ್ನುತಲಿಹಳು ಕಾವೇರೀ || ೨೪

ಧರೆಯಜನರ್ಕೈತಂದು ಮೀಯುತ |
ದುರಿತಗಳ ತನ್ನೊಳಗೆ ಬಿಡಲಾ |
ಸುರನದಿಯು ತದ್ದುರಿತರಾಶಿಯುಪರಿಹರಿಸಿಕೊಳಲು ||
ತರಣಿ ತುಲೆಯೊಳಗಿರುವ ಸಮಯದೆ |
ವರುಷವರುಷಕೆಬಂದು ಬೆರೆವಳು |
ವರನದಿಯನಿದನೆನಲು ಸಾಮಾನ್ಯೆಯೆಕವೇರಜೆಯು || ೨೫

ಮುನಿಪ ಕೇಳ್ಕಾವೇರಿಯೆಂಬೀ |
ಘನನದೀತೋಯವನು ಬೆರೆಸುತ |
ಲನಿಲ ತಾನಾನಾವದೇಶದೆ ಚರಿಸಿ ಬರುತಿಪನೊ ||
ಅನುವಿನಿಂದಾದೇಶದೊಳಗಿಹ |
ಜನರು ಮೋಕ್ಷವಪಡೆವರೆಂದೆನ |
ಲೆನಿತು ಪುಣ್ಯವಗೈದಿಹರೊ ತತ್ತೀರವಾಸಿಗಳು || ೨೬

ಅಪರದಿಗ್ಭಾಗದಲಿ ರಂಜಿಪ |
ವಿಪುಲಸಹ್ಯಾದ್ರಿಯಲಿ ಜನಿಸುತ |
ಉಪನದಿಗಳೊಡಗೂಡಿ ದಕ್ಷಿಣದೇಶವಾಸಿಗಳ ||
ಅಪರಿಮಿತ ದುರಿತಗಳನೆಲ್ಲವ |
ನಪಹರಿಸಿ ಸದ್ಗತಿಯನೀಡುತ |
ವಿಪುಲನದಿಕಾವೇರಿ ಶೋಭಿಸುತಿರ್ಪುದನವರತ || ೨೭

ಪಾರಿಕಾಂಕ್ಷಿಪ್ರವರನಾ ಕಾ |
ವೇರಿಯನು ಕಾಣುತ್ತಲಾಕ್ಷಣ |
ತೀರದೊಳುನಿಂದಿರ್ದು ತಂಗಾಳಿಯನುಸೇವಿಸುತ ||
ಭಾರಿಯಧ್ವಶ್ರಮವಕಳೆಯುತ |
ಪಾರಸಂತೋಷದಲಿ ತನ್ನ ಶ |
ರೀರಕಾವಾರಿಯನು ಸಂಪ್ರೋಕ್ಷಿಸಿದನೊಲವಿನಲಿ || ೨೮

ಬಳಿಕಲಾಯತಿವರನು ಶಿಷ್ಯರ |
ಬಳಗದಿಂದೊಡಗೂಡಿ ವರಜಲ |
ದೊಳಗೆಮಿಾಯುತಲೆಸಗಿ ವರಯತ್ಯಾಶ್ರಮೋಚಿತನ ||
ನಲಿದು ಶಿಷ್ಯರುಸಹಿತ ವಿಪ್ರರ |
ನಿಳಯಗಳಸಾಲಿನಲಿ ಬರುತಿರ |
ಲಲಘುಯತಿಪನಕಂಡು ನಮಿಸುತಲಿರ್ದರಾದ್ವಿಜರು || ೨೯

ಆವರು ಪೂರ್ವಾಶ್ರಮದ ವರಬಾಂ |
ಧವರು ಯತಿಪಗೆ ನಮಿಸಿ ತಮ್ಮಯ |
ಭವನಕಾತನಕರೆದುತಂದರು ಬಹುಳವಿನಯದಲಿ ||
ಅವಿರಳಪ್ರೀತಿಯಲಿ ಶಿಷ್ಯರ |
ನಿವಹದೊಡನೈತಂದ ಯತಿಪನ |
ನವರು ಸತ್ಕರಿಸಿದರು ಭಿಕ್ಷವನಿತ್ತುಭಕ್ತಿಯಲಿ || ೩೦

ಬಳಿಕ ಸಕಲರು ಸೇರುತೊಂದೆಡೆ |
ಯೊಳಗೆ ಕುಳಿತಿರಲಾಗಲೊಲವಿಂ |
ಜಲಜಪಾದನು ಸಕಲತತ್ವಾರ್ಥಗಳಸಾರವನು ||
ಸುಲಭದಿಂ ಬೋಧಿಸುತ ಸುಜನಾ |
ವಳಿಗೆ ಹರುಷದೊಳಿರಲುಬಂದನು |
ಕಲುಷಚಿತ್ತನು ಯತಿಯ ಪೂರ್ವಾಶ್ರಮದಮಾತುಲನು || ೨೦

ವರಕುಮಾರಿಲಭಟ್ಟಗಾತನು |
ಪರಮಶಿಷ್ಯನು ಕರ್ಮಕಾಂಡದಿ |
ಪರಿಣತನು ಸುಜ್ಞಾನಮಾರ್ಗವಿರೋಧಿ ನಿರ್ದಯನು ||
ಗುರುಮತವನನುಸರಿಸಿ ಕರ್ಮವ |
ನಿರತವೆಸೆಗುತ ತತ್ವಸಾರದ |
ಪರಿಯನರಿಯದ ಕರ್ಮಜಡನಾಗಿಹನು ಭೂಸುರನು ೨೧

ಅಳಿಯನಿರವನುಕಂಡು ಮನದೊಳ |
ಗಳಲಿದನು ಪಿರಿದಾಗಿ ವಿಪ್ರನು |
ಕುಲವಿಹಿತ ಯಜ್ಞಾದಿಕರ್ಮಂಗಳನು ವಿಹಿತದಲಿ ||
ಸಲೆರಚಿಸಿ ಸದ್ಗತಿಯಪಡೆಯದೆ |
ಕಲಿಯುಗದೆ ಸನ್ಯಾಸಿಯಾದೊಡೆ |
ಗಳಿಸುವುದು ತಾನೆಂತು ಮೋಕ್ಷವನೆನುತಲಾದ್ವಿಜನು || ೨೨

ಮನದೆಚಿಂತಿಸಿ ಯತಿಯ ತನ್ನಯ |
ಮನೆಗೆ ಕರೆದೊಯ್ದಲ್ಲಿಬೋಧಿಪೆ |
ನೆನುತು ಧಾತ್ರೀಸುರನು ಯತಿಪತಿಯೆಡೆಗೆ ನಡೆತಂದು ||
ಮನೆಗೆ ಬಿಜಯಂಗೈಯಬೇಕೆಂ |
ದೆನುತಲುಪಚರಿಸುತ್ತ ಭಗಿನೀ |
ತನಯನನು ಕರೆತಂದನಾಗಲು ನಿಜನಿಕೇತನಕೆ || ೨೩

ಬಳಿಕಲಾಯತಿಪತಿಯು ತನ್ನಯ |
ನಿಳಯದೊಳಗುಪಚರಿಸುತಾತನ |
ಬಳಿಯೊಳ್ಹೈದಿಹ ಶಿಷ್ಯವರ್ಗಕೆ ಮನ್ನಣೆಯನೆಸಗಿ ||
ಜಲಜಪಾದನ ಸನಿಹದೊಳು ತಾ |
ಕುಳಿತು ನುಡಿದನು ನರನು ಕರ್ಮವ |
ನುಳಿಯೆ ಸದ್ಗತಿಗವನು ಬಾಹಿರನೆನುತಲಾದ್ವಿಜನು || ೨೫

ಭೂಸುರನು ಧರೆಯೊಳಗೆ ಬದುಕಿ |
ರ್ಪೈಸುದಿನ ಯಜ್ಞಾದಿಕರ್ಮವ |
ಬೇಸರದೆ ತಾನೆಸಗಿ ಪೂರ್ವಾರ್ಜಿತದ ಪಾಪಗಳ ||
ನಾಶಪಡಿಸುತ ಸುಗತಿಪಡೆವುದು |
ಭಾಸುರದ ಸನ್ಮಾರ್ಗವಿದಬಿಡೆ |
ಲೇಸುದೊರಕದು ಬೇರೆದಾರಿಯೊಳೆಂದನಾದ್ವಿಜನು || ೨೬

ಮಾತುಲನ ನುಡಿಕೇಳಿ ವರವಿ |
ಖ್ಯಾತ ಯತಿಪತಿಯಾಗ ಪರಮಾ |
ದ್ವೈತತತ್ವವನವಗೆ ವಿವರಿಸಿ ಪೂರ್ವಪಕ್ಷವನು ||
ಆತತುಕ್ಷಣ ಖಂಡಿಸುತ್ತಲಿ |
ಭೂತನಾಥನ ಸೂತ್ರಭಾಷ್ಯವ |
ನಾತನಿಗೆ ವಿಸ್ತರಿಸಿ ಬೋಧಿಸಿದನು ಸರಾಗದಲಿ || ೨೭

ಬಳಿಕ ತಾನಾಸೂತ್ರಭಾಷ್ಯಕೆ |
ಸುಲಭದಿಂ ವಿರಚಿಸಿಹ ಟೀಕೆಯ |
ನೊಲಿದು ತೋರಿಸಲದನು ನೋಡುತಲಾಗಮಾತುಲನು ||
ಗೆಲಲರಿದು ವಾದದಲಿ ಯತಿಪತಿ |
ಯುಲಘುಮತಿಯಾಗಿಹನು ಪುಸ್ತಕ |
ಗಳನು ನಾಶಂಗೊಳಿಸೆ ನಿಜಗುರುಮತವು ನಿಲ್ಲುವುದು || ೨೮

ಎನುತ ನೆರೆ ನಿಶ್ಚಯಿಸಿ ತನ್ನಯ |
ಮನದೊಳಗೆ ಬಹಿರಂಗದೊಳಗೊಂ |
ದಿನಿತು ಸಂಶಯತೋರದಂದದೆ ಯತಿಪನಿದಿರಿಸಲಿ ||
ಸನುಮತವು ಸನ್ಯಾಸಮಾರ್ಗವಿ |
ದೆನುತ ವಿನಯವ ನಟಿಸುತಿರ್ದನು |
ಮನವತಿಳಿಯಲು ಸಾಧ್ಯವೇ ವಿಶ್ವಾಸಘಾತುಕರ || ೩೯

ಕೇಶವನ ಮಾತುಲನಪರಿಯೆಂ |
ದೀಸನಂದನನೆತ್ತಬಲ್ಲನು |
ಮೋಸದೊಳುಸಿಲುಕಿದನು ಪೂರ್ವಾರ್ಜಿತವಲಂಘ್ಯವಲೆ ||
ಈಸುಪುಸ್ತಕಗಳನು ಹೊರಲಾ |
ಯಾಸಪಿರಿದಹುದಾಗಿ ನಿನ್ನಯ |
ವಾಸಗೃಹದೊಳಗಿರಿಸಿ ರಾಮೇಶ್ವರಕೆಪೋಗುವೆನು || ೪೦

ಮತ್ತೆನಾನ್ಯೆತಂದು ವಹಿಗಳ |
ಮೊತ್ತವನು ಕೊಂಡೆಯ್ವೆನೆಂದೆನೆ |
ಚಿತ್ತಕದು ಸೊಗಸಾಗಲದಕೊಪ್ಪಿದನು ಭೂಸುರನು ||
ಹೊತ್ತವಹಿಗಳನಿಟ್ಟು ಶಿಷ್ಯರ |
ಮೊತ್ತದಿಂದೊಡಗೂಡುತಾ ಯತಿ |
ಪೋತ್ತಮನು ತೆರಳಿದನು ನಿಜಮಾತುಲನಬೀಳ್ಕೊಂಡು || ೪೧

ತೆರಳುತಲ್ಲಿಂ ಬಳಿಕ ಸಾರಸ |
ಚರಣನತಿಸಂಭ್ರಮದೆ ದಕ್ಷಿಣ |
ಭರತಖಂಡದೊಳುಳ್ಳ ಬಹುತೀರ್ಥಗಳಸೇವಿಸುತ ||
ಹರಿಹರರನಿಳಯಗಳಸೇರುತ |
ಭರಿತ ಭಯಭಕ್ತಿಯಲಿ ನಮಿಸುತ |
ಭರದೊಳೈದುತ್ತಿರ್ದನಾರಾಮೇಶ್ವರವಕುರಿತು || ೪೨

ಈ ತೆರದೆ ಕಮಲಾಂಘ್ರಿಯತ್ತಲು |
ಸೇತುಯಾತ್ರೆಗೆ ಗಮಿಸಲಾತನ |
ಮಾತುಲನು ತಾನಿತ್ತ ನೆನೆದುದ ಕೇಳು ಮುನಿನಾಥ ||
ಭೂತಳದೊಳದ್ವೈತತತ್ವ |
ಖ್ಯಾತಮಾದೊಡೆ ಭಟ್ಟಪಾದನ |
ನೀತಿ ಕೆಡುವುದೆನುತ್ತ ನೆನೆದನು ತನ್ನಮನದೊಳಗೆ || ೪೩

ಯತಿಯು ರಚಿಸಿದ ಟೀಕೆಯಿದು ತಾಂ |
ಕ್ಷಿತಿಯೊಳಿದ್ದರೆ ಭಟ್ಟಪಾದನ |
ಮತಕೆ ಕೀರ್ತಿಯು ದೊರೆಯುದೆಂಬುದು ಸುಪ್ರಸಿದ್ಧವಲೆ ||
ಯತಿಯ ಪುಸ್ತಕಗಳನು ತಾನಾ |
ಹುತವನಿಗಾಹುತಿಯನೀವುದೆ |
ಮತವಹುದು ತನಗೆನುತ ನಿಶ್ಚೈಸಿದನು ಮನದೊಳಗೆ || ೪೪

ಮನೆಯೊಳೊಂದೆಡೆಯೊಳಗೆ ಪುಸ್ತಕ |
ವನಿತುವನು ತಂದೊಟ್ಟೆ ರಾತ್ರಿಯೊ |
ಳನಲನನು ಹೊತ್ತಿಕ್ಕಿದನು ಜನರರಿಯದಂದದಲಿ ||
ಅನಿತು ಪುಸ್ತಕಗಳನು ಸುಟ್ಟನು |
ಮನೆಯು ಬೆಂದುದೆನುತ್ತ ಜನತತಿ |
ಮನಮರುಗುವಂದದಲಿ ಗೋಳಿಟ್ಟೊರಲಿದನು ಬರಿದೆ || ೪೫

ಹುತವಹನನಿಂ ಮನೆಯು ದಹಿಸಿದು |
ದತಿಶಯದ ವಸ್ತುಗಳು ಪೋದವು |
ಮತಿಯೊಳೆಣಿಸೆನು ತನ್ನ ಬಹುವಿಧ ಕಷ್ಟನಷ್ಟಗಳ ||
ಯತಿಯು ಮನೆಯೊಳಗಿಟ್ಟ ಪುಸ್ತಕ |
ತತಿಯು ಬೆಂದುದೆನುತ್ತ ಭೂಸುರ |
ನತಿಕಪಟವೃತ್ತಿಯಲಿ ಮರುಗುತಲಿರ್ದನಡಿಗಡಿಗೆ || ೪೬

ವನಜಸಂಭವನಿತ್ತ ಶಾಪದೆ|
ಘನತರದವಾರ್ತಿಕದ ಪುಸ್ತಕ|
ವನಿತು ಬೆಂದುದು ಹಿರಿಯರುಕ್ತಿಗೆ ಲೋಪವೆಂತಹುದು॥
ಮುನಿಪ ಕೇಳ್ಳೈ ರಾಮಸೇತುವಿ|
ಗನುಗಮಿಸೆ ಭರದಿಂದಲೈದಿದ|
ವನಜಚರಣನ ನಿಜಚರಿತ್ರೆಯನೆಂದನಾ ಸೂತ॥ ೪೭

ಮಾತುಲನ ಬೀಳ್ಕೊಳುತಲಂಭೋ|
ಜಾತಚರಣನು ಸಕಲಶಿಷ್ಯ
ವ್ರಾತದಿಂದೊಡಗೂಡಿ ಪಯಣದ ಮೇಲೆ ಪಯಣದಲಿ॥
ಸೇತುಯಾತ್ರಾಲೋಲಚಿತ್ತನ|
ಜಾತಕಾಮುಕ್ರೋಧನತಿವಿ|
ಖ್ಯಾತ ಯತಿಪತಿಬಂದು ನಿಂದನು ದರ್ಭಶಯನದಲಿ॥ ೪೮

ಧರಣಿಜೆಯನಪಹರಿಸೆ ರಾವಣ|
ತರಣಿವಂಶಜನಂದು ಕಪಿಗಳ|
ನೆರವಿಯಿಂದೊಡಗೂಡಿ ಬಂದಾ ಜಲಧಿತೀರದಲಿ॥
ವರುಣನಂ ಧ್ಯಾನಿಸುತ ದರ್ಭಾ|
ಸ್ತರಣದೊಳಗಿರ್ದಮಲಸುಸ್ಥಲ|
ನೆರೆ ವಿರಾಜಿಸುತಿರ್ದುದಾ ಯತಿವರನ ಸಮ್ಮುಖದೆ॥ ೪೯

ಜಲನಿಧಿಸ್ನಾನವನುಗೈದನು|
ಜಲಜಪಾದನು ತೆರಳುತಲ್ಲಿಂ|
ಜಲಜಸಖವಂಶಾಬ್ಧಿಸೋಮನ ಕೀರ್ತಿಕಾಮಿನಿಯ॥
ಲಲಿತಮುಖಮಂಡಲದ ಮಧ್ಯದ|
ತಿಲಕದಂದದೆ ಶೋಭಿಸುತ್ತಿರು|
ವಲಘುತರಸೇತುವನು ಕಂಡನು ಬಹಳಹರ್ಷದಲಿ॥ ೫೦

ವರಧನುಷ್ಕೋಟಿಯಲಿ ಸಾರಸ |
ಚರಣನವಗಾಹನವ ಮುದದಿಂ |
ವಿರಚಿಸುತಲಾವಶ್ಯಕಂಗಳನಲ್ಲಿ ವಿಧಿಮತದೆ ||
ಪರಿರಚಿಸುತಲ್ಲಿಂದ ತೆರಳುತ |
ವರಮುಹೋದಧಿಗೈದಿಶಿಷ್ಯರ |
ನೆರವಿಯಿಂದೊಡಗೂಡುತಾಚರಿಸಿದನವಶ್ಯಕವ || ೫೧

ಬಳಿಕಲಲ್ಲಿಂ ತೆರಳಿ ಯತಿಕುಲ |
ತಿಲಕನಾ ಸು ಕ್ಷೇತ್ರದೊಳಗಿಹ |
ಹಲವುತೀರ್ಥಗಳಲ್ಲಿ ಮೀಯುತ ಭರಿತಭಕ್ತಿಯುಲಿ ||
ಬಳಿಯೊಳಂತೇವಾಸಿಗಳು ಬಲು |
ನಲವಿನಿಂದೈತರಲು ಶಂಕರ |
ನಿಳಯಕಭಿಮುಖನಾಗಿ ಬಂದನು ಪರಮಸಂಭ್ರಮದೆ || ೫೨

ತರಣಿವಂಶಜನಂದು ರಾವಣ |
ಶಿರವತರಿದುದರಿಂದಲೊದಗಿದ |
ಪರಮಪಾತಕಗಳನು ಕಳೆಯುವ ಕತದೆ ಭಕ್ತಿಯುಲಿ ||
ಪರಮಶಿವಲಿಂಗಪ್ರತಿಷ್ಠೆಯ |
ವಿರಚಿಸಲು ರಾಮೇಶ್ವರಾಖ್ಯೆಯ |
ನೆರೆ ತಳೆದ ಪರಶಿವನ ಮಂದಿರವಲ್ಲಿ ಶೋಭಿಸಿತು || ೫೩

ಬಂದು ರಾಮೇಶ್ವರನ ಸುರುಚಿರ |
ಮಂದಿರವನೊಳಪೊಕ್ಕು ಯತಿಪ ಸ |
ನಂದನನು ಭಕ್ತಿಯುಲಿ ರಾಮೇಶ್ವರನ ಪದಯುಗಕೆ ||
ವಂದಿಸುತ ನುತಿಸುತ್ತ ಕರಗಳ |
ನೊಂದುಗೂಡಿಸುತತುಲಪರಮಾ |
ನಂದರಸದಲಿ ಮೂಡಿಮುಳುಗತಲಿರ್ದನಡಿಗಡಿಗೆ || ೫೪

ಆ ಸಮಯದಲಿ ನುಡಿದನಂತೇ |
ವಾಸಿಯೊಬ್ಬನು ಗುರುವೆ ಪೇಳ್ರಾ |
ಮೇಶ ಶಬ್ದಸಮಾಸನಿರ್ಣಯಗಳನು ನೀನೆನುತ ||
ಆ ಸನಂದನನದಕೆಮೆಚ್ಚಿ ಸ |
ಮಾಸನಿರ್ಣಯಗಳನು ಜನರಿಗೆ |
ಲೇಸೆನಿಪ ರೀತಿಯಲಿ ವಿವರಿಸಿದನು ಸರಾಗದಲಿ || ೫೫

ತರಣಿವಂಶಜಗೀಶನಾಗಿಹ |
ಹರನು ರಾಮೇಶ್ವರನು ಧರೆಯೊಳು |
ವರಬುಧರು ತಾವಿದನು ನೆರೆ ತತ್ಪುರುಷವೆನ್ನುವರು ||
ತರಣಿಕುಲಜನನೀಶನಾಗಿಯೆ |
ನೆರೆ ಪಡೆದನಾರವನು ರಾಮೇ |
ಶ್ವರನು ತಾನೆಂದರ್ಥಗೈಯುವಡಿದು ಬಹುವ್ರೀಹಿ || ೫೬

ಈತನೇ ಶ್ರೀರಾಮು ಪರಕಿಸ |
ಲೀತನೇ ತಾನೀಶನದರಿಂ |
ದೀತ ರಾಮೇಶ್ವರನೆನುತ್ತ ಸುರೇಶ್ವರಾದಿಗಳು ||
ಈತನನು ಭಾವಿಸುತಲಿಹರ |
ದ್ವೈತಭಾವದೊಳಾ ನಿಮಿತ್ತದೆ |
ಭೂತಳದೊಳಿದು ಕರ್ಮಧಾರಯವೆಂದನಾ ಯತಿಪ || ೫೭

ಈ ಸಮಾಸದ ನಿರ್ಣಯವ ರಾ |
ಮೇಶಶಬ್ದಕೆ ತಿಳುಹಿ ಸುಜನರಿ |
ಗಾ ಸನಂದನನತುಲಸಂತೋಷವನು ವಿರಚಿಸುತ ||
ಈಶನಂಘ್ರಿಗೆ ನಮಿಸುತಂತೇ |
ವಾಸಿಗಳನೊಡಗೊಂಡು ವರ ರಾ |
ಮೇಶನನು ಬೀಳ್ಕೊಂಡು ಹಿಂದಕೆ ತೆರಳಿದನು ಮುದದೆ || ೫೮

ಅಮಲತೀರ್ಥಸ್ನಾನದಿಂದತಿ |
ವಿಮಲಮಾನಸನಾಗಿ ಬಂದನು |
ಕಮಲಚರಣನು ತನ್ನಮಾತುಲಮಂದಿರವ ಕುರಿತು ||
ಅಮಿತಮಹಿಮಾನ್ವಿತನ ಕಂಡಾ |
ಕುಮತಿ ಮಾತುಲನಾಗ ಕಪಟದ |
ಮಮತೆಯಂ ತೋರಿಸುತಲಿರ್ದನು ಭಾಗಿನೇಯನಿಗೆ || ೫೯

ವರಯತಿಯೆ ಲಾಲಿಪುದು ರಾಮೇ |
ಶ್ವರಕೆ ಗಮಿಸಲು ನೀನು ತನ್ನೀ |
ವರಗೃಹವು ಹುತವಹನದೆಸೆಯಿಂ ದಗ್ಧಮಾದುದೆಲೆ ||
ಪರಿಗಣಿಸೆ ನಾನಿದನು ಮನದೊಳು |
ಮರುಗುವೆನು ನೀನಿಟ್ಟ ಪುಸ್ತಕ |
ವುರಿದುಹೋದುದಕೆಂದು ನುಡಿದನು ಕಪಟವೃತ್ತಿಯಲಿ || ೬೦

ಕೇಳಿದನು ಪುಸ್ತಕದನಷ್ಟವ |
ತಾಳಿ ನಸುಚಿಂತೆಯನು ಧೈರ್ಯವ |
ತಾಳಿದನು ಮತ್ತೊಮ್ಮೆರಚಿಪೆನು ವಾರ್ತ್ತಿಕವನೆನುತ ||
ತಾಳಿ ಬಲುಚಿಂತೆಯನು ಮಾತುಲ |
ನಾಲಯವು ಬೆಂದುದಕೆ ಬಳಿಕಾ |
ಶೀಲಗುಣನಿಧಿ ಯತಿಪ ಸಂತೈಸಿದನು ಮಾತುಲನ || ೬೧

ಎನ್ನ ಪುಸ್ತಕ ಬೆಂದುಹೋದುದ |
ಕಿನ್ನುಮರುಗಲದೇಕೆ ಕೇಳ್ಸಂ
ಪನ್ನವಿಪ್ರನೆ ನಿನ್ನ ಮಂದಿರವಕಟ ಬೆಂದುದಲೆ ||
ಖಿನ್ನನಾಗಿಹೆನದಕೆ ತನಗೆ ಮ |
ಹೋನ್ನತಿಯ ಮತಿಶಕ್ತಿಯಿರುತಿಹು |
ದಿನ್ನು ರಚಿಪೆನು ವಾರ್ತ್ತಿಕಂಗಳನೆಂದನಾಯತಿಪ || ೬೨

ಮತ್ತೆ ವಾರ್ತಿಕಗಳನು ರಚಿಸೆನೆ |
ನುತ್ತ ಯತಿಪೇಳ್ದುದನು ತಾ ಕೇ |
ಳುತ್ತ ವಿಪ್ರನು ಯತಿಯ ಬುದ್ಧಿಯ ವಿಪುಲಕುಶಲತೆಯ ||
ಕಿತ್ತುಬಿಸುಡುವೆನೆನುತ ತನ್ನಯ |
ಚಿತ್ತದೊಳು ನಿರ್ಧರಿಸಿ ಬಹುದು |
ರ್ವೃತ್ತಿಯಲಿ ಯತಿಪನಿಗೆ ಭೈಕ್ಷ್ಯದಿ ಮದ್ದನಿಕ್ಕಿದನು || ೬೩

ಮತಿಯ ಶಕ್ತಿಯ ಮುರಿವ ಮದ್ದನು |
ಯತಿಗೆ ಭೈಕ್ಷ್ಯದೊಳಿಕ್ಕಿ ಬಹು ದು |
ರ್ಗತಿಗೆ ಸಂದನು ಭೂಸುರಾಧಮನಿತ್ತ ಯತಿವರನು ||
ಸತತ ಗುರುವರಪಾದಪದ್ಮವ |
ಮತಿಯೊಳಗೆ ಜಾನಿಸುತ ಶಂಕರ |
ಯತಿಚರಣದರ್ಶನವ ಕಾಮಿಸಿ ಬಂದನೊಲವಿನಲಿ || ೬೪

ಬರಬರುತ ಮಾರ್ಗದಲಿ ತಿಳಿದನು |
ಗುರುವರನು ಕೇರಳದೊಳಿಹುದನು |
ಸರಸಿಜಾಂಘ್ರಿಯು ತನ್ನ ಶಿಷ್ಯರುವೆರೆಸಿ ವಹಿಲದಲಿ ||
ತಿರುಗಿದನು ಕೇರಳಕೆ ಶಂಕರ |
ಚರಣದರ್ಶನದಿಂದ ತೀರ್ಥಾ |
ಚರಣೆಯಿದು ತಾಂ ಸಫಲಮಾಗುವುದೆನುತ ಭಕ್ತಿಯಲಿ || ೬೫

ಆ ಸನಂದನನಿಂತು ಕೇರಳೆ |
ದೇಶಕ್ಶೈತ್ರರುತಿರಲು ವಚಸ |
ನ್ಯಾಪಿಕುಲಶೇಖರನು ಶಿಷ್ಯನ ಬರವ ಹಾರೈಸಿ ||
ಆಸುರೇಶ್ವರ ಮುಖ್ಯರೊಡನತಿ |
ಭಾಸುರದ ವರದೇವಗೃಹದೆ ಮು |
ಹಾಸುರಾಲಯಪತಿಯ ನುತಿಸುತಲಿರ್ದನೊಲವಿನಲಿ || ೬೬

ವರರಜೋಗುಣದಿಂದ ಸಚರಾ ।
ಚರವ ಸೃಷ್ಟಿಪೆ ಸತ್ವಗುಣದಿಂ ।
ಪೊರೆದು ನೆರೆ ಸಂಹರಿಸುತಿಹೆ ಧರೆಯನು ತಮೋಗುಣದೆ ॥
ವರವಿರಂಚಿಯು ಹರಿಯು ಹರನೆಂ ।
ಬುರುತರಾಖ್ಯೆಯ ಧರಿಸುತೊಬ್ಬನೆ ।
ನೆರೆ ವಿರಾಜಿಸುತಿರ್ಪೆ ನಿಜಲೀಲಾವಿನೋದದಲಿ ॥ ೬೭

ಜಲಜಮಿತ್ರನ ಬಿಂಬವೊಂದೇ ।
ಹಲವುಜಲಪೂರಿತದ ಪಾತ್ರೆಗ ।
ಳೊಳಗೆ ತಾಂ ಪ್ರತಿಬಿಂಬಿಸುತ ಹಲವಾಗಿ ತೋರ್ಪಂತೆ ॥
ಹಲವು ಸಚರಾಚರದೆ ನಿನ್ನಯ ।
ಹೊಳೆವ ಶಕ್ತಿಯೆ ತುಂಬಿಕೊಂಡಿರ ।
ಲಲಘುಮಹಿಮಾನ್ವಿತನೆ ನೀನೇಕಾತ್ಮನಾಗಿರುವೆ ॥ ೬೮

ಯತಿಪನಿಂತು ಮಹಾಸುರಾಲಯ ।
ಪತಿಯುಹಶ್ರೀಪತಿಯ ನುತಿಸುತ ।
ಲತಿಶಯದಭಕ್ತಿಯಲಿ ದೇವಾಲಯದೊಳಿರುತಿರಲು ॥
ಯತಿಸನಂದನನಾಗ ಶಿಷ್ಯ ।
ಪ್ರತತಿಯಿಂದೊಡಗೂಡಿ ಬಂದನು ।
ಯತಿಪತಿಯುಚರಣದಲಿ ಮೈಯಿಕ್ಕಿದನು ಭಕ್ತಿಯಲಿ ॥ ೬೯

ಬಂದು ನಮಿಸಿದ ಸಕಲಶಿಷ್ಯರ ।
ಬೃಂದವನು ಖಂಡೇಂದುಮೌಳಿಯು ।
ಮಂದಹಾಸದಿ ನೋಡಿ ಕುಶಲವನೊಲಿದು ಬೆಸಗೊಳುತ ॥
ಸಂದುದೇ ವರತೀರ್ಥಯಾತ್ರೆ ಸ ।
ನಂದನನೆ ನೀನೆನಿತು ತೀರ್ಥದೆ ।
ಯಿಂದು ಬಂದಿಹೆಯದರ ವಿವರವ ಪೇಳು ತನಗೆಂದ ॥ ೭೦

ಗುರುವಿನಾಜ್ಞೆಯನಾಗ ತನ್ನಯ |
ಶಿರದೊಳಾನುತ ಗುರುವರೇಣ್ಯನ |
ಚರಣಕಾನತನಾಗಿ ಕೈಮುಗಿದಧಿಕಭಕ್ತಿಯಲಿ ||
ಸರಸಿಜಾಂಘ್ರಿಯು ನುಡಿದನೀಪರಿ |
ಗುರುವರನೆ ಭವದಾಜ್ಞೆಯಲಿ ನಾಂ |
ಚರಿಸಿ ಪೂರ್ವೋತ್ತರದ ದೇಶವ ಬಂದೆ ದಕ್ಷಿಣಕೆ || ೭೧

ಎಲ್ಲಿ ಪಾವನತೀರ್ಥವಿರುತಿಹ |
ವಲ್ಲಿಗಲ್ಲಿಗೆ ಗಮಿಸಿ ಶಿವಪದ |
ಪಲ್ಲವವ ಸೇವಿಸುತ ಪರಮಾದ್ವೈತತತ್ತ್ವವನು ||
ಅಲ್ಲಿರುವ ಸುಜನರಿಗೆ ಸಂಶಯ |
ವೆಲ್ಲ ಪರಿಹರಿಪಂತೆ ಬೋಧಿಸಿ |
ಸಲ್ಲಲಿತವಾಹಿನಿಯ ಸಾರ್ದೆನು ವರಕವೇರಜೆಯ || ೭೨

ಮಿಂದು ನದಿಯಲಿ ನಿಜಸತೀರ್ಥ್ಯರ |
ವೃಂದಸಹ ವಿಪ್ರಾಗ್ರಹಾರವ |
ನೊಂದ ಸೇರಲು ತನ್ನ ಪೂರ್ವಾಶ್ರಮದ ಮಾತುಲನು ||
ಬಂದನಲ್ಲಿಗೆ ತನ್ನ ಕಾಣುತ |
ಮಂದಿರಕೆ ಕರೆದೊಯ್ಯೆ ಪೋದೆನು |
ಸಂದ ಬಂಧುಪ್ರೇಮದಿಂದುಪಚರಿಸಿದನು ಬಳಿಕ || ೭೩

ಶ್ರಮವಹುದು ಹೊರಲೆಂದು ಭಾವಿಸು |
ತಮಲವಾರ್ತ್ತಿಕಪುಸ್ತಕಂಗಳ |
ನಮಿತವನು ಮಾತುಲನ ಮನೆಯೊಳಗಿಟ್ಟು ದಕ್ಷಿಣಕೆ ||
ಗಮಿಸಿ ರಾಮೇಶ್ವರವ ಸೇರುತ |
ವಿಮಲರತ್ನಾಕರದೆ ಮೀಯುತ |
ಮಮತೆಯಿಂ ರಾಮೇಶಪದದರ್ಶನವ ಮಾಡಿದೆನು || ೭೪

ಸೇತುಯಾತ್ರೆಯನಿಂತು ಗೈದಾ |
ಮಾತುಲನ ಬಳಿಗಾಗಿ ನಾಂ ಬರ |
ಲಾತನನಿತರೊಳಮಲವಾರ್ತಿಕ ಪುಸ್ತಕಂಗಳನು ||
ನೀತಿಹೋತ್ರಂಗಿತ್ತು ಕಪಟ |
ಪ್ರೀತಿಯಂ ತೋರಿಸುತ ಮತ್ತತೆ |
ಯಾತುಕೊಂಬಂಪದಲಿ ಛೈಕ್ಷ್ಯದೆ ಮದ್ದನಿಕ್ಕಿದನು || ೭೫

ಗುರುಚರಣ ಪಂಕಜವನಗಲುತ |
ತೆರಳಿದುದಕಿದುಫಲವು ತನಗೆಂ |
ದರಿಮು ಬಂದೆನು ವಾರ್ತಿಕಂಗಳು ನಷ್ಟವಾದವಲೆ ||
ಗುರುವರನೆ ತನಗೇನುಗತಿಯೆಂ |
ದೆರಗಿ ಚರಣದೆ ಬೇಡಿಕೊಂಡನು |
ಸರಸಿಜಾಂಘ್ರಿಯು ದೈನ್ಯದಿಂದಾಯತಿಕುಲೇಶ್ವರನ || ೭೬

ಕೇಳಿದನು ಬಿನ್ನಪವ ಬಹುಕರು |
ಣಾಳು ತನ್ನಯ ಮುಖ್ಯಶಿಷ್ಯನ |
ಮೇಲೆ ಪರಮಸ್ನೇಹ ಪಸರಿಸೆ ನುಡಿದನಿಂತೆನುತ ||
ಕೇಳು ಸಾರಸಚರಣ ನಾನಿದ |
ಪೇಳಿಹೆನು ಮುನ್ನವೆ ಸುರೇಶಗೆ |
ಕಾಲಗತಿಯನು ಮೀರಲಾರಳವಹುದುಲೋಕದಲಿ || ೭೭

ಹಿಂದೆ ಶೃಂಗಾದ್ರಿಯಲಿ ರಚಿಸಿದ |
ಸಂದವಾರ್ತಿಕಗಳನು ನೆನಪಿರು |
ವಂದದಲಿ ಪೇಳುವೆನು ನೀನಿದ ಬರೆದುಕೊಳ್ಳೆನುತ ||
ಇಂದುಶೇಖರನಾಗ ಸಮ್ಮುದ |
ದಿಂದಲಾ ವರಪಂಚಪಾದಿಕೆ |
ಯೆಂದೆನಿಪ ಭಾಗವನು ಬರೆಸಿದನೊಲಿದುನಿಸ್ತರದೆ || ೭೮

ಕಮಲಚರಣನು ನೋಡಿ ಬಹುಸಂ |
ಭ್ರಮವತಾಳುತ ತನ್ನವಾರ್ತಿಕ |
ವಮಲಗುರುಕೃಪೆಯಿಂದಲಿಂತುಳಿದುದಕೆ ಮನದೊಳಗೆ ||
ಅಮಿತಹರ್ಷವನಾಂತು ಗುರುಪದ |
ಕಮಲಕಭಿವಂದಿಸುತಲಿರಲಾ |
ಸುಮತಿ ಕೇರಳಪತಿಯು ಬಂದನು ರಾಜಶೇಖರನು || ೭೯

ಗುರುವಿಗಭಿನಮಿಸುತ್ತ ಕೇರಳ |
ದರಸ ಕಾಣಿಕೆಯಿತ್ತು ನಿಂದಿರೆ |
ಪರಮಸಂತೋಷದಲಿ ಯತಿಯಾರಾಜಶೇಖರನ ||
ಹರಸಿ ಕುಶಲವಕೇಳ್ದು ನೀನೆರೆ |
ವಿರಚಿಸಿದ ವರನಾಟಕಂಗಳು |
ನೆರೆ ವಿರಾಜಿಸುತಿಹವೆ ಧರೆಯೊಳಗೆಂದು ಬೆಸಗೊಂಡ || ೮೦

ಎನಲು ಕೇಳ್ದಾ ಕೇರಳಾಧಿಪ |
ವಿನಯದಿಂ ತಲೆವಾಗಿ ಕೇಳೈ |
ವಿನುತಯತಿಪತಿ ತಾನು ರಚಿಸಿದನಾಟಕತ್ರಯವು ||
ಅನಲಗಾಹುತಿಯಾಗಿ ಪೋದವು |
ನೆನೆನೆನೆದು ನಾಂಕ್ಲೇಶಪಡುತಿಹೆ |
ಮನದದುಗುಡವ ಪೇಳಲಮ್ಮೆನೆನುತ್ತ ಮರುಗಿದನು || ೮೧

ಆದೊಡಲೆ ರಾಜೇಂದ್ರ ಲಾಲಿಪು |
ದಾದರದೆ ನಾನವನು ಪೂರ್ವದೊ |
ಳೋದಿದಂದದೊಳೀಗ ವಿವರಿಪೆನೆನುತ ಶಂಕರನು ||
ಸಾದರದೊಳಾ ನಾಟಕಂಗಳ |
ಭೇದವಿಲ್ಲದ ತೆರದೊಳೋದಲು |
ಮೋದವಾಂತನು ನೃಪತಿ ಪಡೆಯುತ ನಾಟಕತ್ರಯವ || ೮೨

ಕಂತುಹರನಡಿಗೆರಗಿ ವರಭೂ |
ಕಾಂತನೈದಿದ ತನ್ನಪುರವರ |
ಕಿಂತು ಪರಮಬ್ರಹ್ಮವಿದ್ಯೆಯು ಧರೆಗೆ ವಿಸ್ತರಿಸಿ ||
ಶಾಂತತೆಯನೆಲೆಗೊಳಿಸಿ ಭೇದ |
ಭ್ರಾಂತಿಯನು ತೊಲಗಿಸುತ ಯತಿಪ |
ಕ್ರಾಂತನಾ ಶ್ರೀಕಂಠಪಾಲಿಸುತಿರ್ದನೀ ಧರೆಯ || ೮೩

ಸಂಧಿ ಮೂವತ್ತಮೂರಕ್ಕೆ ಪದ್ಯ ೧೬೫೮ ಕ್ಕೆ ಮಂಗಳ

## ಮೂವತ್ತನಾಲ್ಕನೆಯ ಸಂಧಿ.

ಸೂಚನೆ|| ಕೇರಳವ ಬೀಳ್ಕೊಂಡು ಧರೆಯೊಳ |
ಪಾರತೀರ್ಥಂಗಳಲಿ ಚರಿಸುತ |
ಮಾರವೈರಿಯು ಗೆಲಿದನಾ ಕಾಪಾಲಿಕರ ಪಡೆಯ ||

ಕೇಳು ಮುನಿಕುಲಮೌಳಿ ಕೇರಳ |
ಪಾಲಕನು ಗುರುವರನ ನೇಮವ |
ತಾಳಿ ತೆರಳಿದ ಬಳಿಕ ಹಸ್ತಾಮಲಕಮುಖ್ಯರನು ||
ಫಾಲಲೋಚನ ಕರೆದು ಪರಮವಿ |
ಶಾಲತತ್ವಾಮೃತವ ಭುವನಜ |
ನಾಳಿಯಲಿ ಬೋಧಿಸಲು ಸಕಲರು ತೆರಳಬೇಕೆಂದ || ೧

ರಾಮಸೇತುವಿನಿಂದ ವರಹಿಮ |
ಧಾಮಶೈಲದವರೆಗೆ ಪರಮೋ |
ದ್ದಾಮ ಜೀವೇಶೈಕ್ಯತತ್ವದ ಸಾರಸಂಗತಿಯ ||
ಪ್ರೇಮದಿಂ ಬೋಧಿಸುತ ಸುಜನ |
ಸ್ತೋಮವನು ರಕ್ಷಿಸಲು ಬೇಕೆನೆ |
ಕಾಮಹರನಾಜ್ಞೆಯನು ಕೈಗೊಂಡುದು ಜನಸ್ತೋಮ || ೨

ಜಲಜಚರಣ ಸುರೇಶ ಹಸ್ತಾ |
ಮಲಕ ತೋಟಕ ಚಿದ್ವಿಲಾಸಕ |
ನಲಘುಮಹಿಮಜ್ಞಾನಕಂದನು ವಿಷ್ಣುಗುಪ್ತಕನು ||
ಬಲುತಪಸಿಯಾ ಶುದ್ಧಕೀರ್ತಿಯು |
ಸಲೆ ವಿರಿಂಚಿಸುಪಾದ ಚಿತ್ಸುಖ |
ರೊಲವಿನಿಂದಲೆ ಜೈತ್ರಯಾತ್ರೆಗೆ ತೆರಳಿದರ್ ಮುದದೆ || ೩

ಚಂದ್ರಚೂಡನ ನೇಮದಿಂದ ಸು |
ರೇಂದ್ರನೀ ಧರೆಯೊಳಗೆ ವರರಾ |
ಜೇಂದ್ರನಾಗವತರಿಸಿ ಪೂರ್ವದೆ ಭಟ್ಟಪಾದನಿಗೆ ||
ಸಾಂದ್ರಗೌರವವಿತ್ತುದಾಗೆ ಯ |
ತೀಂದ್ರಸೇವೆಯನೆಸಗಿ ಬಳಿಕ ಮ |
ಹೇಂದ್ರಪದವಿಯನೈದಬೇಕೆಂದೆನುತ ನಡೆತಂದ || ೪

ಬಲಸಹಿತ ನಡೆತಂದು ಯತಿಪದ |
ನಳಿನಗಳಿಗಭಿನಮಿಸಿ ಕಾಣಿಕೆ |
ಗಳ ಸಮರ್ಪಿಸಿ ಬಹುಳಹರ್ಷಾಂಬುಧಿಯೊಳೋಲಾಡಿ ||
ಬಲವಿರೋಧಿಯು ತನ್ನ ಚಾತು |
ರ್ಬಲಸಹಿತ ಸಂಗಾತಬಹೆನೆಂ |
ದಲಘುಮಹಿಮನ ಬೇಡಿ ನೇಮವ ಪಡೆದನೊಲವಿನಲಿ || ೫

ಸುರಪನಿಂತು ಸುಧನ್ವನಾಮವ |
ಧರಿಸಿ ಸೈನ್ಯಸಮೇತ ಸಂಗಡ |
ಬರಲು ಗುರುವರನಧಿಕಹರ್ಷದೆ ವಿಜಯಯಾತ್ರೆಯನು ||
ತೆರಳಿ ಶಿಷ್ಯರುಸಹಿತ ರಾಮೇ |
ಶ್ವರಕೆ ಪಯಣವನೆಸಗಿ ಮಾರ್ಗದೆ |
ದೊರೆವ ಸುಕ್ಷೇತ್ರಗಳನೀಕ್ಷಿಸುತೈದಿದನು ಮುದದೆ || ೬

ಅಲ್ಲಿಗಲ್ಲಿಗೆ ದೊರೆವತೀರ್ಥಗ |
ಳಲ್ಲಿ ಮೀಯುತ ಸುಜನನಿಕರ |
ಕ್ಕಲ್ಲಸದೊಳದ್ವೈತ ಸಿದ್ಧಾಂತವನು ಬೋಧಿಸುತ ||
ಖುಲ್ಲಮತವಾದಿಗಳ ಸಂಗಡ |
ವೆಲ್ಲವನು ಜಯಿಸುತ್ತ ಯತಿಪತಿ |
ಸಲ್ಲಲಿತ ಮಧ್ಯಾರ್ಜುನಕ್ಷೇತ್ರವನುಸಾರಿದನು || ೭

ಮೋದದಿಂ ಶಂಕರನು ತಾಂ ಸ್ನಾ |
ನಾದಿಕರ್ಮವ ರಚಿಸುತಭವನ |
ಪಾದಪದ್ಮಂಗಳನು ಪೂಜಿಸಿ ಬಹುಳವಿಭವದಲಿ ||
ಸಾದರದೊಳದ್ವೈತ ತತ್ವವ |
ಭೂದಿವಿಜಸಂತತಿಗೆ ಬೋಧಿಸಿ |
ವಾದಿಗಳಸಂಶಯುವ ಪರಿಹರಿಸಿದನು ವಿನಯದಲಿ || ೮

ದ್ವೈತಮತವಾದಿಗಳು ಪರಮಾ |
ದ್ವೈತತತ್ವಾಮೃತವನಾಲಿಸಿ |
ಭೂತನಾಥಯತೀಶಪದಪಂಕೇರುಹಂಗಳನು ||
ಪ್ರೀತಿಯಿಂ ಸೇವಿಸುತಲನುಭವ |
ರೀತಿಯಿಂ ಪರಿಕಿಸಲು ನೆರೆಯ |
ದ್ವೈತತತ್ವಮದೆಂತು ನಿಜವಹುದೆಂದು ಶಂಕಿಸಲು || ೯

ಇದನು ಯತಿಸರ್ವಜ್ಞನರಿದತಿ |
ಮುದದೆ ಮಧ್ಯಾರ್ಜುನಮಹೇಶನ |
ಪದವ ಭಜಿಸುತ ಭಕ್ತಿಭಾವದೊಳೆರಗಿ ಕೈಮುಗಿದು ||
ಸದಯನಾಗುತ ತತ್ವವಿಷಯವು |
ವಿದಿತಮಪ್ಪಂದದಲಿ ಜನತತಿ |
ಗಿದನು ಬೋಧಿಪುದೆನುತ ವಿನಯದೆ ಬೇಡಿದನುಶಿವನ || ೧೦

ಯತಿಪನೀಪರಿ ಬೇಡಲಾ ಪಶು |
ಪತಿಯು ಲಿಂಗವನೊಡೆದು ದಿವ್ಯಾ |
ಕೃತಿಯನಂಗೀಕರಸಿ ದರ್ಶನವಿತ್ತುಸರ್ವರಿಗೆ ||
ಕ್ಷಿತಿಯನುರರಾಲಿಸುವ ತೆರದಿಂ |
ದತಿಶಯುಪ್ರೀತಿಯಲಿ ನುಡಿದನು |
ಮತಿಯುತರು ಲಾಲಿಪುದುವಾಕ್ಯವ ಸತ್ಯಮದ್ವೈತಂ || ೧೧

ಎಂದು ಮೂರಾವರ್ತಿ ಸಾರುತ |
ಲಿಂದುಧರನಾ ಲಿಂಗದೊಳು ತಾ |
ನಂದು ಗಮಿಸುತದೃಶ್ಯನಾಗಲು ಕೇಳಿ ಜನನಿವಹ ||
ಕಂದುಗೊರಲನ ಚರಣದರ್ಶನ |
ದಿಂದ ಸಂಶಯುವಡಗಿ ಬಹುಳಾ |
ನಂದದಿಂದದ್ವೈತಪರಮಾರ್ಥವನು ನಂಬಿದುದು || ೧೨

ತೆರಳುತಲ್ಲಿಂ ಬಳಿಕ ಶಿಷ್ಯರು |
ವೆರೆಸಿ ಸುಕ್ಷೇತ್ರಗಳಚರಿಸುತ |
ಬರುತಿರಲು ಗಿರಿಜಾರ್ಚನಾತತ್ಪರರು ಭೂಸುರರು ||
ಬರಲು ವಾದದೊಳವರ ಜಯಿಸುತ |
ಸುರುಚಿರಾದ್ವೈತವನು ಬೋಧಿಸಿ |
ಪರಮಪಂಚಾಯತನ ಪೂಜೆಯನರುಹಿದನು ಯತಿಪ || ೧೩

ಪಂಕಜಾಲಯೆಯನ್ನು ಪೂಜಿಪ |
ಕುಂಕುಮಾಂಕಿತಮಸ್ತಕರು ಬರೆ |
ಶಂಕರನು ಬಳಿಕವರಿಗದ್ವೈತವನು ಬೋಧಿಸುತ ||
ಶಂಕೆಯನು ಪರಿಹರಿಸೆ ಯತಿಪದ |
ಪಂಕಜಕೆ ನಮಿಸುತ್ತ ಶಂಕರ |
ಕಿಂಕರರು ತಾವಾಗಿ ಶುದ್ಧಸ್ಮಾರ್ತರೆನಿಸಿದರು || ೧೪

ಶಾರದಾರಾಧಕರು ಬರಲಾ |
ಪಾರಿಕಾಂಕ್ಷಿಯು ಮುದದೊಳವರಿಗೆ |
ಸಾರತರದದ್ವೈತತತ್ವದಪಾರಮಹಿಮೆಯನು ||
ತೋರಲವದಿರು ಬಳಿಕ ವಿಗತವಿ |
ಕಾರಿಗಳು ತಾವಾಗಿ ವೇದಾ |
ಚಾರತತ್ಪರರಾಗಿ ಶಂಕರಶಿಷ್ಯರೆನಿಸಿದರು || ೧೫

ಇಂತು ಶಾಕ್ತೇಯರನು ಜಯಿಸುತ |
ಸಂತಸದೊಳೈತರಲು ಬಂದರು |
ಕಂತುಹರಸನ್ನಿಧಿಗೆ ವಾಮಾಚಾರಪರರಾಗ ||
ಭ್ರಾಂತಿಯಿಂದೊಡಗೂಡಿ ವಾದಕೆ |
ನಿಂತು ಯತಿವರನಿಂ ಪರಾಜಯ |
ವಾಂತು ಶಂಕರಗೆರಗುತಾತನ ಶಿಷ್ಯರೆನಿಸಿದರು || ೧೬

ಕಲಿಮಲಧ್ವಂಸಕನು ಬಂದನು |
ಬಳಿಕ ರಾಮೇಶ್ವರಕೆ ಗಂಗಾ |
ಜಲವನಭಿಷೇಕಿಸುತ ವಂದಿಸಿ ರಾಮನಾಥನಿಗೆ ||
ಸುಲಭದಿಂದದ್ವೈತತತ್ವವ |
ನೊಲಿದು ಬೋಧಿಸಿ ಸುಜನನಿಕರಕೆ |
ಬಲುಜನರನೊಡಗೊಂಡು ಪೊಕ್ಕನು ಪಾಂಡ್ಯದೇಶವನು || ೧೭

ಅಲ್ಲಿ ಭೂಸುರಜನಕೆ ತತ್ವವ |
ನೆಲ್ಲ ಬೋಧಿಸಿ ಜಯವನಾರ್ಜಿಸು |
ತುಲ್ಲಸದೆ ಯತಿವರನುಪೊಕ್ಕನು ಚೋಳದೇಶವನು ||
ಸಲ್ಲಲಿತ ವೇದಾಂತವಾಕ್ಯವ |
ನಲ್ಲಿಬೋಧಿಸಿ ಬಳಿಕಬೀಳ್ಕೊಂ |
ಡೆಲ್ಲರಿಂದೊಡಗೂಡಿ ಬಂದನು ತಮಿಳುನಾಡಿನಲಿ || ೧೮

ದ್ರವಿಡದೇಶದ ವಿಪ್ರರೈತರ |
ಲವರಿಗಾ ವೇದಾಂತತತ್ವವ
ಶಿವನು ಕುರುಣಿಸಿ ಬಳಿಕ ಕಾಂಚೀನಗರಕೈತಂದು ||
ಭವನ ಭೀಮೇಶ್ವರನ ಪಾದವ |
ನವಿರಳಪ್ರೀತಿಯಲಿ ಸೇವಿಸಿ |
ಶಿವನ ಪೂಜಿಪ ವೀರಶೈವರನಲ್ಲಿ ಜಯಿಸಿದನು || ೯

ಮುಂದುಮುಂದಕೆ ಗಮಿಸುತಿರೆ ಯತಿ |
ಬಂದರಲ್ಲಿಗೆ ಲಿಂಗಧಾರಿಗ |
ಳಿಂದುಧರನನು ಕಂಡು ನಮಿಸುತ ತಮ್ಮ ಮತದನುವ ||
ಅಂದವೆನೆ ವಿವರಿಸಲು ಶಂಕರ |
ನಂದು ಖಂಡಿಸಿ ಮತವ ಪರನಾ |
ನಂದದಿಂಬೋಧಿಸಲು ಶಂಕರಶಿಷ್ಯರೆನಿಸಿದರು || ೧೦

ತೆರಳುತಲ್ಲಿಂಬಳಿಕ ಶಂಕರ |
ಗುರುವು ಬಂದನನಂತಶಯನಕೆ |
ಪರಮಭಕ್ತಿಯೊಳೆರಗಿ ನಿಂದನು ಪದ್ಮನಾಭನಿಗೆ ||
ಗುರುವಿನೆಡೆಗೈತಂದು ಷಡ್ವಿಧ |
ದುರುತರದ ವೈಷ್ಣವರು ವರಯತಿ |
ಚರಣಕಾನತರಾಗಿ ವಿಸ್ತರಿಸಿದರು ನಿಜಮತವ || ೧೧

ಅವರೊಳಗೆ ನೆರೆ ಭಕ್ತ ವರಭಾ |
ಗವತ ವೈಷ್ಣವ ಪಾಂಚರಾತ್ರಿಕ |
ನಿವಹ ವೈಖಾನಸಿಕ ಮತ್ತಾ ಕರ್ಮಹೀನರೆನೆ ||
ಭುವನದೊಳು ತಾವಾರುವಿಧವಿಹ |
ರಿವರು ಚಕ್ರಾಂಕಿತರು ಯತಿಪುಂ |
ಗವನ ನುತಿಸುತಲಿರಲು ಕಂಡನು ಮುದದೊಳಾ ಯತಿಪ || ೧೨

ಇಂತೆಸೆವ ಷಡ್ವಿಧದ ವೈಷ್ಣವ |
ಸಂತತಿಯು ಶಂಕರನು ಕಾಣುತ |
ಸಂತಸದೆ ಬೋಧಿಸುತಲಾ ಜೀವೇಶ್ವರೈಕ್ಯವನು ||
ಸ್ವಾಂತಶುದ್ಧರಗೈಯುಲವದಿರು |
ಕಂತುಮಥನನಿಗೆರಗಿ ವಿಗತ |
ಭ್ರಾಂತರಾಗುತ ಶಿಷ್ಯವರ್ಗಕೆ ಸೇರಿದರು ಮುದದೆ || ೨೩

ಸಾರಿ ಸುಬ್ರಹ್ಮಣ್ಯವನು ಕಾ |
ಮಾರಿಯತಿಸಂಭ್ರಮದೆ ದಿವ್ಯಕು |
ಮಾರಧಾರಾನದಿಯೊಳವಗಾಹನವನಾಚರಿಸಿ ||
ಭೂರಿಶಿಷ್ಯರು ಸಹಿತ ಶಂಭುಕು |
ಮಾರಪದದರ್ಶನವನೆಸುಗುತ |
ಪಾರಸಂತೋಷವನು ಕಲ್ಪಿಸುತಿರ್ದನನಿಬರಿಗೆ || ೨೪

ಯತಿಪನೆಡೆಗೈದುತ ಚತುರ್ಮುಖ |
ಮತದವರು ಕೈಮುಗಿದು ನಮಿಸುತ |
ಲತಿಶಯದ ಭಕ್ತಿಯಲಿ ನುಡಿದರು ವಿನಯವಚನದಲಿ ||
ಕ್ಷಿತಿಯುಮರರಾವೆಲ್ಲ ವೇದ ||
ಪ್ರತತಿಯಿಂ ಸಂಸ್ತುತ್ಯನಾಗಿಹ |
ಚತುರ ಚತುರಾನನ ಪೂಜಿಪೆವೆನುತ ಗುರುವರಗೆ || ೨೫

ಬ್ರಹ್ಮಕುಲಜರ ನುಡಿಯ ಕೇಳ್ದಾ |
ಬಹ್ಮವಿದನಿಂತೆಂದನಮಲ |
ಬ್ರಹ್ಮವನು ಭಾವಿಸುತ ಮೋಕ್ಷವ ಪಡೆಯುವುದನುಳಿದು ||
ಬ್ರಹ್ಮನನು ಭಜಿಸಿದೊಡೆ ಬಹುದೇ |
ಬ್ರಹ್ಮಪದ ವಿಪ್ರನಿಗೆ ಭರಿತ |
ಬ್ರಹ್ಮತಾನೆಂದರಿಯೆ ಮೋಕ್ಷವು ಕರತಲಾಮಲಕ || ೨೬

ಎನಲು ಕೇಳುತಲಾಗ ವಿಪ್ರರು |
ಸನುಮತಿಸಿ ಜೀವೇಶ್ವರೈಕ್ಯವ |
ಮನದೊಳತುಲಾನಂದ ತುಂದಿಲರಾಗಿ ಯತಿಪತಿಗೆ ||
ವಿನಯದಿಂದಭಿನಮಿಸುತಾಗಲು |
ವಿನುತವಹ ವೇದಾಂತಮತವೇ |
ಘನವೆನುತ ನೆರೆ ತಿಳಿದು ಶಂಕರಶಿಷ್ಯರೆನಿಸಿದರು || ೨೭

ಜ್ವಲನಮತದವರೈದಿ ಯತಿಕುಲ |
ತಿಲಕಪಾವನಪಾದಪದ್ಮಂ |
ಗಳಿಗೆ ನಮಿಸುತಲಮಲತರದದ್ವೈತತತ್ವವನು ||
ತಿಳಿದು ಶಂಕರಶಿಷ್ಯಸಂಕುಲ |
ದೊಳಗೆ ಸೇರಲು ಬಳಿಕ ಯತಿಪದ |
ನಳಿನದೆಡೆಗೈದಿದರು ಭಾಸ್ಕರಮತದ ಭೂಸುರರು || ೨೮

ಬರುತ ಗುರುವರಗೆರಗಿ ತರಣಿಯೆ |
ಧರೆಗೆ ತಾಂ ಪ್ರತ್ಯಕ್ಷದೈವವು |
ನಿರತವಾವಾರಾಧಿಸುತ್ತಿಹೆವಾ ವಿಭಾಕರನ ||
ಖರಕಿರಣಗಿಂದಧಿಕರಾರೆನೆ |
ಗುರುವು ನಸುನಗೆಯಿಂದಲವದಿರಿ |
ಗೊರೆದನತಿಕರುಣದಲಿ ಪಂಚಾಯತನ ಪೂಜೆಯನು || ೨೯

ಅವರು ಸಮ್ಮುದಿಂದಲದ್ವೈ |
ತವನು ಕೈಗೊಳೆ ಮುಂದೆ ಬರುತಾ |
ಶಿವನು ಸಾರ್ದನು ವಿಮಲತರ ವಿಘ್ನೇಶ್ವರಾಶ್ರಮವ ||
ಪ್ರವಹಿಸುವ ಕೌಮುದಿಯ ಜಲದೊಳ |
ಗವಿರಳಪ್ರೀತಿಯಲಿ ಮೀಯುತ |
ಭುವನವಂದ್ಯನ ವಿಘ್ನರಾಜನ ಪೂಜಿಸಿದನೊಲಿದು || ೩೦

ಅಲ್ಲಿ ಗಾಣಾಪತ್ಯಮತದವ ।
ರುಲ್ಲಸದೊಳೈತಂದು ಯತಿಪದ ।
ಪಲ್ಲವದೊಳಭಿನಮಿಸಿ ತನ್ಮ್ರಯ ಮತವ ವಿವರಿಸಲು ॥
ಸೊಲ್ಲಿಗಾಸ್ಪದವಿಲ್ಲದಂತಿರೆ ।
ಸಲ್ಲಲಿತದದ್ವೈತತತ್ವವ ।
ನೆಲ್ಲ ಬೋಧಿಸುತವರ ಗೆಲಿದನು ಮನ್ಮಥಾರಾತಿ ॥ ೩೧

ತೆರಳುತಲ್ಲಿಂ ಮತ್ತೆ ಕಾಂಚೀ ।
ಪುರಕೆ ಬಂದನು ಯತಿವರೇಣ್ಯನು ।
ವರದರಾಜೇಶ್ವರನ ಪೂಜಿಸುತತುಲ ಭಕ್ತಿಯಲಿ ॥
ಸುರುಚಿರದ ಪೂಜಾದಿ ಕಾರ್ಯಕೆ ।
ಧರಣಿಯಮರರ ನಿಯಮಿಸುತ್ತಾ।
ಪುರವ ಕರೆದನು ವಿಷ್ಣುಕಾಂಚೀನಾಮದಲಿ ಯತಿಪ ॥ ೩೨

ಬಲಿಕಲಲ್ಲಿಂ ತೆರಳಿ ಬಂದನು ।
ಲಲಿತೆ ಕಾಮಾಕ್ಷಿಯನು ವಂದಿಸು ।
ತೊಲವಿನಿಂ ಶ್ರೀಚಕ್ರಸಂಸ್ಥಾಪನೆಯನಲ್ಲಿಸಗಿ ॥
ನೆಲೆಗೊಳಿಸುತೇಕಾಮ್ರನಾಥನ ।
ಸಲೆ ನಿಗಮಮತದಿಂದೆ ಬಳಿಕೀ ।
ಸ್ಥಳಕೆ ಶಿವಕಾಂಚ್ಯಾಭಿಧಾನವನೊರೆದನಾ ಯತಿಪ ॥ ೩೩

ಅಲ್ಲಿ ತಾಂತ್ರಿಕ ವಿಧದಪೂಜೆಯ ।
ನಿಲ್ಲಿಸುತ ವರನಿಗಮಮತದೊಳು ।
ಸಲ್ಲಲಿತ ಪೂಜೆಗಳು ನಡೆವಂದದಲಿ ನೇಮಿಸುತ ॥
ಖುಲ್ಲಮತಗಳನೊರೆಸಿ ಯತಿಕುಲ ।
ವಲ್ಲಭನು ಸಂಭ್ರಮದಲಲ್ಲಿರ ।
ಲುಲ್ಲಸದೊಳೈತಂದರಾಗಲು ಭೂಸುರೋತ್ತಮರು ॥ ೩೪

ವರಯತಿಯ ದರ್ಶನಕೆ ಬಂದಾ |
ಪುರದ ಸುತ್ತಣ ವಿಪ್ರವರ್ಯರು |
ನೆರೆದಿರಲು ವರತಾಮ್ರಪರ್ಣೀತೀರವಾಸಿಗಳು ||
ಹರುಷದಿಂದೈದಿದೊಡೆ ಯತಿಪತಿ |
ಕರುಣದಿಂ ದರ್ಶನವನೀಯುತ |
ಧರಣಿಯಮರರಿಗೊರೆದನದ್ವೈತವನು ವಿಸ್ತರದೆ || ೩೫

ಸಾರಿದರು ಬಳಿಕಾಂಧ್ರದೇಶದ |
ಧಾರಣೀಸುರವರರು ಗುರುಚರ |
ಣಾರವಿಂದವ ಕಂಡು ಸೇವಿಸುತಿರಲು ಭಕ್ತಿಯಲಿ ||
ಮಾರವೈರಿಯು ವಿಪ್ರವರರಿಗ |
ಪಾರಕರುಣವ ತೋರುತಲ್ಲಿಂ |
ಸಾರಿದನು ವರವೇಂಕಟಾಚಲಕಾಗ ನಲವಿನಲಿ || ೩೬

ವರದ ವೇಂಕಟಪತಿಯ ಪಾವನ |
ಚರಣಕಭಿನಮಿಸುತ್ತಲಲ್ಲಿಂ |
ತೆರಳಿ ಯತಿಪ ವಿದರ್ಭದೇಶವನೈದಿ ಹರುಷದಲಿ |
ದುರುಳರಾ ಕ್ರಥಕೇಶರೆಂಬುವ |
ಮರುಳುಭೈರವ ಮತವ ಶಿಷ್ಯರು |
ಪರಿಭವಿಸಲವರೆಲ್ಲ ಶಂಕರಶಿಷ್ಯರೆನಿಸಿದರು || ೩೭

ಬಳಿಕಲಾ ಕ್ರಥಕೇಶರಧಿಪನು |
ನಳಿನಪಾದಪ್ರಮುಖಶಿಷ್ಯರ |
ಬಳಗದೊಡನೆ ವಿವಾದಗೈಯುತ ಸೋತ ವಿವರನು ||
ತಿಳಿಯುತಾಕ್ಷಣ ಬಂದು ಗುರುಪದ |
ಜಲಜಕಾನತನಾಗಿ ಯತಿಕುಲ |
ತಿಲಕನಿಂದದ್ವೈತತತ್ವವ ತಿಳಿದನತಿಮುದದೆ || ೩೮

ಮುಂದೆ ಕರ್ನಾಟಕಕೆ ಗಮಿಸುವೆ |
ನೆಂದು ಗುರುವರ ಪೇಳೆ ಕೇಳುತ |
ಬಂದು ನಿಂದು ವಿದರ್ಭದೇಶಾಧಿಪನು ಕೈಮುಗಿದು ||
ವಂದಿಸುತ ಕಾಪಾಲಿಕರ ಪಡೆ |
ಯಿಂದ ತುಂಬಿದ ದೇಶವದು ತ |
ನ್ನಿಂದವವರಿಗಗಮ್ಯನಾಗಿಹುದೆಂದು ಪೇಳಿದನು || ೩೯

ಕೇಳುತಿದನು ಸುಧನ್ವನೇಳುತ |
ಶೂಲಪಾಣಿಗೆ ನಮಿಸಿ ನಿಜಕರ |
ವಾಳವನು ಝಳಿಪಿಸುತ ನುಡಿದನು ವಿನಯವಚನದಲಿ ||
ಲಾಲಿಸೈ ಗುರುವರನೆ ದುಷ್ಟಕ |
ಪಾಲಕರಿಗಂಜುವುದೆ ಸೈನ್ಯವ |
ನೇಳವಿಸುತೊಡನಿರಲು ಭವದೀಯಾಂಘ್ರಿಸೇವಕನು || ೪೦

ದುರುಳ ಕಾಪಾಲಿಕರನೆಲ್ಲರ |
ತರಿದು ಬಿಸುಡುವೆ ತಾನು ತಮ್ಮೀ |
ಚರಣಕರುಣಕಟಾಕ್ಷ ಪವಿಪಂಜರವಲೇ ತನಗೆ ||
ದುರುಳರನು ಮರ್ದಿಸುತ ಧರೆಯೊಳು |
ಸುರುಚಿರಾದ್ವೈತವನು ನೆರವಿ |
ಸ್ತರಿಸಿ ಧರ್ಮವ ಪೊರೆಯ ಬೇಕೆಂದರಗಿದನು ಪದಕೆ || ೪೧

ಉಚಿತಕಾರ್ಯಮಿದೆಂದು ಶಿಷ್ಯ |
ಪ್ರಚಯವೊಪ್ಪಿದುದಾಗ ಸದ್ವಿಜ |
ನಿಚಯದಿಂದೊಗೂಡಿ ಶಂಕರನಧಿಕಹರ್ಷದಲಿ ||
ಶಚಿಯವಲ್ಲಭ ತನ್ನಸೇನಾ |
ನಿಚಯದಿಂದೊಡಗೂಡಿ ಬರುತಿರ |
ಲಚಲಮತಿಯೈದಿದನು ಕರ್ಣಾಟಕಕೆ ಮಹಿಲದಲಿ || ೪೨

ಪಾರಿಕಾಂಕ್ಷಿಪ್ರವರ ನೀಪರಿ ।
ಸಾರಿಬರೆ ಕರ್ಣಾಟದೇಶದೆ ।
ಕಾರೊಡಲ ಕೆಂಗಣ್ಣ ಶವಭಸ್ಮಾನುಲೇಪನದ ॥
ಕ್ರೂರಕಾಪಾಲಿಕನು ಕರದೆ ಕ ।
ಠೋರಶೂಲವ ಪಿಡಿದು ಬಂದನು ।
ಘೋರರೂಪವ ತಳೆದ ನಿಜಪರಿವಾರದೊಡಗೂಡಿ ॥ ೪೩

ಕ್ರಕಚನೀಪರಿ ತನ್ನಪೋಲುವ ।
ವಿಕೃತವೇಷಿಗಳೊಡನೆ ಬದ್ಧ ।
ಭ್ರುಕುಟಭೀಷಣನಾಗಿ ಕರದೆ ಕರೋಟಿಯನು ಧರಿಸಿ ॥
ಅಕುಟಿಲಾಂತಃಕರಣರಿಗೆ ಬಾ ।
ಧಕವನೆಸಗುವೆನೆಂಬ ದುಷ್ಟ ।
ಪ್ರಕೃತಿಯಿಂದೊಡಗೂಡಿ ಬಂದನು ದೈತ್ಯನಂದದಲಿ ॥ ೪೪

ಬಂದು ಕಂಡನು ಯತಿಸಮೂಹವ ।
ನಿಂದನಿದಿರಲಿ ಕರದಶೂಲವ ।
ನಂದು ತಿರುಹುತ ಬರಸಿಡಿಲ ತೆರದಿಂದಲಾರ್ಭಟಿಸಿ ॥
ಬಂದುದೊಳ್ಳಿತು ನಿಮ್ಮನೆಲ್ಲರ ।
ಬಂಧಿಸುತ ಕಾಪಾಲಿಭೈರವ ।
ಗಿಂದು ನರಬಲಿಯೀವೆ ತಾನೆಂದೆನುತ ಗರ್ಜಿಸಿದ ॥ ೪೫

ಕಿಡಿಗೆದರೆ ಕಂಗಳಲಿ ತನ್ನಯ ।
ಪಡೆಯು ಕರೆದಾ ಕ್ರಕಚ ವಿಪ್ರರ
ಗಡಣವನು ಸಂಹರಿಸಿ ನೀವೆಂದೆನುತ ನೇಮಿಸಲು ॥
ಹಿಡಿದು ಶೂಲವನಾಗ ವಿಪ್ರರ ।
ಬಡಿದು ಪೀಡಿಸುತಿರಲು ಬಳಕೀ ।
ಗಡಬಡೆಯು ಕಾಣುತ್ತ ಕೋಪವ ತಾಳಿದನು ಸುರಪ ॥ ೪೬

ಕೆಂಡವನು ಕಾರಿದವು ಕಂಗಳು |
ಭಂಡರಿವದಿರ ಕಡಿದು ಶಿರಗಳ |
ಚೆಂಡನಾಡುವುದೆನುತ ನೇಮಿಸಿ ತನ್ನ ಸುಭಟರಿಗೆ ||
ಚಂಡಬಲ ಸುರಪತಿಯು ನಿಜಕೋ |
ದಂಡವನು ಜೇವಡೆದು ಶರಗಳ |
ತಂಡವನು ಕೆದರಿದನು ಕಾಪಾಲಿಕರ ಪಡೆಯೊಳಗೆ || ೪೭

ಒಂದು ಕಡೆಯಲಿ ನೃಪಸುಧನ್ವನು |
ಕೊಂದು ಬಿಸುಡುತ್ತಿರಲು ಸೇನಾ |
ವೃಂದ ಮತ್ತೊಂದೆಡೆಯಲಾ ಕಾಪಾಲಿಕರ ಪಡೆಯ ||
ಅಂದು ಕೊಲ್ಲುತಲಿರಲು ಕಾಣುತ |
ಮಂದಮತಿಯಾ ಕ್ರಕಚ ಕೋಪದೊ |
ಳಿಂದುಶೇಖರನೆಡೆಗೆ ಬಂದಿಂತೆಂದು ಗರ್ಜಿಸಿದ || ೪೮

ಎಲವೊ ಕುಮತಾಶ್ರಯನೆ ತನ್ನಯ |
ಬಲುಮೆಯನು ನೀನರಿಯೆ ತೋರುವೆ |
ನಲಘುತರವೆಂದೆನಿಪ ಕಾಪಾಲಿಕರ ಮಹಿಮೆಯನು ||
ಬಲುಹ ನೋಡೆಂದೆನುತಲಾ ಬಹು |
ಕಲುಷಹೃದಯನು ನರಕಪಾಲವ |
ತಳೆದು ಜಾನಿಸುತಿರ್ದನಾ ಕಾಪಾಲಿಭೈರವನು || ೪೯

ಎಡದ ಕೈಯಲಿ ಮದ್ಯಪಾತ್ರೆಯ |
ಪಿಡಿದು ಕಣ್ಗಳ ಮುಚ್ಚಿ ಜಾನಿಸು |
ತಡಿಗಡಿಗೆ ಕಂದೆರೆದು ಮದ್ಯವನೀಂಟಿ ಕಣ್ಮುಚ್ಚಿ ||
ಜಡಿದು ಚಷಕವ ತೇಗಿ ಕೂಗುತ |
ಕುಡಿಕುಡಿದು ಮದ್ಯವನು ಪಾತ್ರೆಯ |
ಬಡಿಯುತಿರ್ದನು ಭೈರವಾಗಮರೀತಿಯಲಿ ಬಿಡದೆ || ೫೦

ಒಡನೆ ಗೋಚರವಾದುದಿದಿರೊಳು ।
ಮೃಡನ ಮೂರ್ತಿಯು ತನ್ನಕೈಯೊಳು ।
ಪಿಡಿದು ಮನುಜಕಪಾಲಪಾತ್ರೆಯನಾ ತ್ರಿಶೂಲವನು ॥
ಅಡಿಗಡಿಗೆ ಹೂಂಕರಿಸಿ ಕಿಡಿಗಳ ।
ಗಡಣವನು ಜಟೆಯಿಂದಲೆರಚುತ ।
ಕಡು ಭಯಂಕರವಾಗಿ ನರಶಿರ ಮಾಲೆಯನು ಧರಿಸಿ ॥ ೫೧

ಕಂಡನಾ ಕ್ರಕಚಾಖ್ಯ ಹರನು ।
ದ್ದಂಡಮೂರ್ತಿಯು ತನ್ನದೇಹವ ।
ದಂಡದಂತಿರೆ ವರಕಪಾಲಿಯು ಚರಣದಲಿ ಚಾಚಿ ॥
ಮುಂಡೆಯಲಿ ಕರಗಳನು ಜೋಡಿಸು ।
ತಂಡಲೆದನೀ ಯತಿಯು ಶಿರವನು ।
ಖಂಡಿಸುತ ಭವದೀಯ ಭಕ್ತರ ಕಾಯಬೇಕೆನುತ ॥ ೫೨

ನುಡಿಯ ಕೇಳುತ ಕೋಪದಿಂದಾ ।
ಮೃಡನು ಘುಡಿಘುಡಿಸುತ್ತ ಕಂಗಳು ।
ಕಿಡಿಯನುಗುಳಲು ನೋಡುತಾ ಕಾಪಾಲಿಕಾಧಮನ ॥
ಮೃಡಯತಿಯು ತನ್ನಂಶದಿಂದೀ ।
ಪೊಡವಿಯನು ರಕ್ಷಿಸಲು ಬಂದಿರೆ ।
ಕೆಡೆನುಡಿವೆ ನೀನೆಂದು ಗರ್ಜಿಸುತಿದ್ದನಡಿಗಡಿಗೆ ॥ ೫೩

ಎನ್ನಪರರೂಪಿನಲಿ ಬಂದಿಹ ।
ಸನ್ನುತನಿಗಪರಾಧ ಗೈದಿಹ ।
ಕುನ್ನಿ ಪೋಗೆಂದೆನುತಲಾತನ ಶಿರವ ಛೇದಿಸುತ ॥
ನನ್ನಿಯಿಂ ಯತಿಸಾರ್ವಭೌಮನ ।
ಮನ್ನಿಸುತ ಕೊಂಡಾಡಿ ಬೀಳ್ಕೊಂ ।
ಡುನ್ನತದ ರಜತಾದ್ರಿಗೈದಿದನಾಗಲಾ ಮೃಡನು ॥ ೫೪

ಬಳಿಕುಳಿದ ಕಾಪಾಲಿಕರ ಪಡೆ ।
ಯಳುಕಿ ಕೈಮುಗಿದೆರಗಿ ಯತಿಕುಲ ।
ತಿಲಕ ರಕ್ಷಿಸ ಬೇಹುದೆಮ್ಮನೆನುತ್ತ ಬೇಡುತಿರೆ ॥
ಸಲೆ ದಯಾಪರನಾಗುತಿನದಿರ ।
ಕಲುಷವನು ಪರಿಹರಿಸಿ ಪೊರೆಯುಲಿ ।
ನಲವಿನಿಂ ಶ್ರೀಕಂಠನೆನ್ನುತ ಹರಸಿದನು ಯತಿಪ ॥ ೫೫

ಸಂಧಿ ಮೂವತ್ತನಾಲ್ಕಕ್ಕೆ ಪದ್ಯ ೧೭೧೩ ಕ್ಕೆ ಮಂಗಳ.

## ಮೂವತ್ತೈದನೆಯ ಸಂಧಿ

ಸೂಚನೆ :—ಸಕಲದುರ್ಮತಖಂಡನಾಪೂ ।
ರ್ವಕದೊಳದ್ವೈತವನು ಲೋಕ ।
ಪ್ರಕಟಗೈಯುತ ವೇದಮತವನು ಪೊರೆದನಾ ಯತಿಪ ॥

ಕೇಳು ಶೌನಕಮುನಿ ನಿಶಾಧಿಪ ।
ಮೌಳಿಯಾ ಕರ್ಣಾಟದೇಶವ ।
ಪಾಲಿಸುತಲದ್ವೈತತತ್ವವನಲ್ಲಿ ನೆಲೆಗೊಳಿಸಿ ॥
ಬೀಳುಕೊಂಡಲ್ಲಿಂದ ಬಹುಳ ವಿ ।
ಶಾಲವಹ ವರಗೌಡದೇಶವ ।
ಲೀಲೆಯಿಂದೈತಂದು ಪೊಕ್ಕನು ಶಿಷ್ಯಜನವೆರೆಸಿ ॥ ೧

ಅಲ್ಲಿ ವೇದಾಚಾರಶಾಸ್ತ್ರಗ ।
ಳಲ್ಲಿ ನಂಬುಗೆ ಚಿತ್ತವೃತ್ತಿಯೊ ।
ಳಿಲ್ಲದಿಹ ನಾಸ್ತಿಕರೆನಿಪ ಚಾರ್ವಾಕಮತದವರು ॥
ಉಲ್ಲಸದೊಳೈತಂದು ಶಂಕರ ।
ನಲ್ಲಿ ವಾದಿಸಿ ಜಯವ ಕಾಣದೆ ।
ಹಲ್ಲಕಿತ್ತಹಿಯಂತೆ ಭಂಗಿತರಾದರಾಕ್ಷಣದೆ ॥ ೨

ಕ್ಷಪಣಕರು ಜೈನಾಖ್ಯಮತದವ ।
ರಪರಿಮಿತ ಗರ್ವಿತರು ವಿದ್ಯಾ ।
ನಿಪುಣರಂದೈತಂದು ಶಂಕರಯತಿಯ ಶಿಷ್ಯರಲಿ ॥
ವಿಪುಲ ವಾದವಗೈದು ತಾಳಿದ ।
ರಪಜಯವನದ್ವೈತ ಮಾರ್ಗದೊ ।
ಳುಪಗಮಿಸುತಲಿ ಶಿಷ್ಯರಾದರು ಯತಿಕುಲೋತ್ತಮಗೆ ॥ ೩

ಬಳಿಕಲನುಮಲ್ಲಾಖ್ಯ ಪುರಕಾ ।
ಜಲಜವಿಶಿಖವಿರೋಧಿಯೈತರು ।
ತೊಲವಿನಿಂದಲ್ಲಿದ್ದು ಶಿಷ್ಯರು ಸೇವಿಸುತ್ತಿರಲು ॥
ಕಳೆಯುತಿಪ್ಪತ್ತೊಂದು ದಿನಗಳ ।
ಸುಲಭದಿಂದಾ ಸ್ಥಳದ ವಿಪ್ರರ ।
ಬಳಗವನು ಕೇಳಿದನು ನಿಮ್ಮಾಚರಣೆಯೆಂತೆನುತ ॥ ೪

ಯತಿಪನಿಂತೆನೆಕೇಳ್ದು ವಿಪ್ರ ।
ಪ್ರತತಿಯಾ ಶಂಕರನ ಚರಣ ।
ಕ್ಕತಿಶಯದ ಭಕ್ತಿಯಲಿ ನಮಿಸುತ ಕೈಗಳನು ಮುಗಿದು ॥
ಸತತವಾವನುವರ್ತ್ತಿಸುತ್ತಿಹ ।
ಮತವ ವಿಜ್ಞಾಪಿಪೆವು ಲಾಲಿಸು ।
ಯತಿಕುಲಾಂಬುಜತರಣಿ ನೀನೆಂದುದು ಸರಾಗದಲಿ ॥ ೫

ಮಲ್ಲನೆಂಬಸುರಾಧಮನು ಬಲು ॥
ಬಲ್ಲಿದನು ಪೂರ್ವದಲಿ ವಿಪ್ರರ ।
ನೆಲ್ಲ ಬಾಧಿಸುತಿರಲು ಗಿರಿಜಾಪ್ರಾಣನಾಯಕನು ॥
ಖುಲ್ಲನನು ಸಂಹರಿಪೆನೆಂದ ।
ತ್ಯುಲ್ಲಸದೆ ಕುಕ್ಕುರನನೇರುತ ।
ಮಲ್ಲರಿಪುನಾಮದಲಿ ಕೊಂದನು ರಾಕ್ಷಸಾಧಮನ ॥ ೬

ಆ ವಿಗಡರಕ್ಕಸನ ಕೊಂದಿಹ ।
ದೇವಮಲ್ಲಾರಿಯನು ಮನದೊಳು ।
ಭಾವಿಸುತಲಾತನನು ಮೇಣಾ ಸಾರಮೇಯನನು ॥
ಆವಗಂ ಪೂಜಿಸುತ ವರವಾ ।
ದ್ಯಾವಳಿಯ ಗೀತದಲಿ ನಾಟ್ಯದ ।
ಲಾವಿಹೆವು ನಿಜವೆಂದರಾ ಮಲ್ಲಾರಿಮತದವರು ॥ ೭

ಧರಣಿಯಮರರ ಮಾತನಾಲಿಸಿ ।
ವರಯತಿಪ ಮನನೊಂದು ವಿಪ್ರರು ।
ಧರೆಯೊಳಾ ಬ್ರಾಹ್ಮಣ್ಯವಂ ತ್ಯಜಿಸುತ್ತ ನಾಟ್ಯದಲಿ ॥
ಇರಲು ಸಂಸ್ಕಾರದಲಿ ಪಾಪಕೆ ।
ಪರಿಹರವು ತಾನಹುದು ನೀವಾ ।
ಪರಿಯನಂಗೀಕರಿಪುದೆಂದನು ಶಾಸ್ತ್ರವನು ತೋರಿ ॥ ೮

ಯತಿಪನೆಂದುದಕವರು ನೆರೆ ಸಂ ।
ಮತಿಸುತಯುತಸ್ನಾನ ಮೊದಲೆನಿ ।
ಪತುಲಕರ್ಮಗಳಿಂದ ಸಂಸ್ಕಾರಗಳನೆಲ್ಲವನು ॥
ಹಿತದೊಳಾಗ ಸನಂದನಾದಿಗ ।
ಳತಿಶಯದೆ ವಿರಚಿಸಲು ಪಂಚಾ ।
ಯತನಪೂಜಾನಿರತರಾದರು ಬಳಿಕಲಾ ದ್ವಿಜರು ॥ ೯

ಬಳಿಕಲಲ್ಲಿಂ ತೆರಳಿ ಯತಿಪತಿ ।
ಯೊಲಿದು ವಿಷ್ವಕ್ಸೇನಮತವನು ।
ಗೆಲಿದು ಪಶ್ಚಿಮುಕ್ಕೈದಿ ಮನ್ಮಥಮತವ ಖಂಡಿಸುತ ॥
ಅಲಸದಾ ಮಗಧಾವನೀಮಂ ।
ಡಲಕೆ ದಯೆಗೈದೈಂದ್ರಮತವನು ।
ಗೆಲಿದು ಯಕ್ಷಾಧಿಪನ ಮತವನು ನೆರೆ ವಿಭಾಡಿಸಿದ ॥ ೧೦

ಆಗಮೋಕ್ತದ ಮತವ ಬೋಧಿಸಿ ।
ಮಾಗಧವ ಬೀಳ್ಕೊಂಡು ಬರುತಾ ।
ಯೋಗಿವರನೈದಿದನು ಶಮನಪ್ರಸ್ಥಪುರವರವ ॥
ಆಗಲಾ ಯಮುಮತವ ಖಂಡಿಸಿ ।
ಬೇಗ ಗಂಗಾಯಮುನಸಂಗಮ ।
ಕಾಗಿ ಬಂದನು ವಾಯುವರುಣರ ಮತವ ನೆರೆ ಗೆಲಿದ ॥ ೧೧

ಬಳಿಕಲಾ ಶೂನ್ಯಾಖ್ಯಮತವನು ।
ಸಲೆ ವಿಭಾಡಿಸಿ ಸಾಂಖ್ಯಮತವನು ।
ಗೆಲಿದು ಗುಣಮತವನ್ನು ನೆರೆ ವಾರಾಹಮತಗಳನು ॥
ಜಲಜಪಾದಾದಿಗಳ ಮುಖದಿಂ ।
ಗೆಲಿಸಿ ಪರಮಾದ್ವೈತಮತವನು ।
ನೆಲೆಗೊಳಿಸಿ ತಾನಲ್ಲಿ ಕಾಪಿಲಮತವ ಜೈಸಿದನು ॥ ೧೨

ಯತಿಪ ತಾನಂದಣುಕವೆಂಬಾ ।
ಮತವ ಖಂಡಿಸಿ ಶೇಷನಾಮಕ ।
ಮತವ ಜಯಿಸುತ ಬಳಿಕಲಾ ಶಶಿಮತವಿಭಜಂನೆಯ ॥
ಅತಿಶಯದಲೆಸಗುತ್ತ ಮತ್ತಾ ।
ಪಿತೃಮತವನುರೆ ಗೆಲಿದು ಬಂದೀ ।
ಕ್ಷಿತಿಯೊಳುತ್ತಮ ವೆನಿಪ ಗೋಕರ್ಣವನು ಸಾರಿದನು ॥ ೧೩

ಬಂದು ಗೋಕರ್ಣದಲಿ ಮಹಿಮಾ ।
ಸಿಂಧುವಾ ಪಶ್ಚಿಮಸಮುದ್ರದೆ ।
ಮಿಂದು ಶಿಷ್ಯರುಸಹಿತ ಗೋಕರ್ಣೇಶ್ವರಾಲಯವ ॥
ಬಂದು ಹೊಕ್ಕನು ಪಾರ್ವತೀಶಗೆ ।
ವಂದಿಸುತ ಭಕ್ತಿಯಲಿ ಸುರಕುಲ ।
ವಂದಿತನ ನುತಿಸಿದನು ನಾನಾ ಶ್ಲೋಕರಚನೆಯಲಿ ॥ ೧೪

ತದುಪರಿಯೊಳದ್ವೈತತತ್ವವ ।
ಪದುಳದಿಂದಲ್ಲಿರುವ ಸುಜನಕೆ ।
ವಿದಿತಮಪ್ಪಂದದಲಿ ಬೋಧಿಸುತಿರ್ದನೊಲವಿನಲಿ ॥
ಇದನು ಹರದತ್ತಾಖ್ಯವಿಪ್ರನು ।
ಮುದದೆ ಕಂಡನು ಬಳಿಕ ನಿಜಗುರು ।
ಸದನವನು ಸೇರುತ್ತ ಬಿನ್ನವಿಸಿದನು ಗುರುವರಗೆ ॥ ೧೫

ಭೂವಿಬುಧವರವಿಶ್ವರೂಪನ ।
ಕೈವಶದೆ ಪಡೆದಿರ್ಪ ಯತಿಪತಿ ।
ದೇವಮಂದಿರಕೈದಿ ನಿನ್ನನು ವಾದದಲಿ ಗೆಲುವ ॥
ಭಾವದಿಂದಿಹನೆನಲು ಕೇಳ್ದಾ ।
ಶೈವವರ್ಯನು ನೀಲಕಂಠನು ।
ತೀವಿದತಿಗರ್ವದಲಿ ನುಡಿದನು ಮುಗುಳುನಗೆಯೊಡನೆ ॥ ೧೬

ಜಲಧಿಯನು ಶೋಷಿಸಲು ಬಹುದತಿ ।
ಸುಲಭದಿಂದಾದಿತ್ಯಬಿಂಬವ ।
ನೆಲಕೆ ಕೆಡಹಲು ಬಹುದು ಗಗನವ ವಸ್ತ್ರದಂದದಲಿ ॥
ಸಲೆ ಧರಿಸಬಹುದಲ್ಲದಾ ಯತಿ ।
ಕುಲಲಲಾಮನು ತನ್ನ ವಾದದೆ ।
ಗೆಲುವಪರಿ ಪುಸಿಯೆಂದು ನುಡಿದನು ನೀಲಕಂಠಕವಿ ॥ ೧೭

ವೇದಭಾಷ್ಯವ ರಚಿಸುತಾ ಪ್ರತಿ ।
ವಾದಿ ತಿಮಿರಸಮೂಹಭಾಸ್ಕರ ।
ನಾದ ತನ್ನೊಳು ವಾದಗೈಯುವ ನಾವನೆಂದೆನುತ ॥
ಭೂದಿವಿಜ ಕೋಪದಲಿ ಬಹುವಿಧ ।
ವಾದ ಪುಸ್ತಕತತಿಯು ಸಹಿತಂ ।
ವೈದಿದನು ನಿಜಶಿಷ್ಯರಿಂದೊಡಗೂಡಿ ಯತಿಯೆಡೆಗೆ ॥ ೧೮

ಕೊರಳೊಳಗೆ ರುದ್ರಾಕ್ಷಮಾಲಿಯು ।
ಸುರುಚಿರದ ಸಿತಭಸ್ಮ ದೇಹದೆ ।
ಮೆರೆಯುತಿರೆ ಬಹುಶಿಷ್ಯರಿಂದೊಡಗೂಡಿ ಗರ್ವದಲಿ ॥
ಬರುತಲಿರಲಾ ಶೈವಶಾಸ್ತ್ರದ ।
ಪರಮಪಂಡಿತ ನೀಲಕಂಠನ ।
ಪರಿಯನೀಕ್ಷಿಸುತಿರ್ದನಾ ಯತಿಪತಿಯು ಹರ್ಷದಲಿ ॥ ೧೯

ಅಂದು ವೇದವ್ಯಾಸಮುನಿಕೃತ ।
ವೆಂದೆನಿಪ ಶಾರೀರಸೂತ್ರದ ।
ಮುಂದೆ ಕಪಿಲಾಚಾರ್ಯ ತನ್ನಭಿಮತವನಿಟ್ಟಂತೆ ॥
ಇಂದುಚೂಡನ ಮುಂದೆ ಕುಳಿತಾ ।
ನಂದದಿಂ ನಿಜಮತವ ವಿಸ್ತರ ।
ದಿಂದ ವಿವರಿಸುತಿರ್ದನಾಗಲು ನೀಲಕಂಠಕವಿ ॥ ೨೦

ಕಂಡನಿದನಾ ಸಕಲವಿದ್ಯಾ ।
ಪಂಡಿತೋತ್ತಮ ವರಸುರೇಶ್ವರ ।
ಖಂಡಶಶಿಧರಗೆರಗಿ ನೇಮವಕೊಂಡು ತಾಂ ಬಳಿಕ ॥
ಖಂಡಿಸಲು ಪರಮತವ ಕುಳಿತಿರೆ ।
ಕಂಡುಬಲ್ಲೆನು ನಿನ್ನನೆನ್ನೊಳು ।
ದಂಡಿಯೇ ವಾದಿಸಲಿ ನೀಂ ಬೇಡೆಂದನಾ ಶೈವ ॥ ೨೧

ಇಂತುಸಿರಲಾ ನೀಲಕಂಠನು ।
ಕಂತುಮಥನನು ತಾನೆ ತನ್ನ ದು ।
ರಂತವಹ ವಾಗ್ಜಾಲದಿಂ ಪರಮತವ ಖಂಡಿಸಲು ॥
ಸ್ವಂತಮತ ರಕ್ಷಣೆಯಬಿಟ್ಟ ।
ತ್ಯಂತಗರ್ವದಲವನು ಮತಿವಿ ।
ಭ್ರಾಂತನಾಗುತ ಕುಳಿತನದ್ವೈತವನು ಖಂಡಿಸಲು ॥ ೨೨

ಅಮಿತಕರುಣಾಸಿಂಧು ವರತ |
ತ್ತ್ವಮಸಿವಾಕ್ಯದ ವಿವರವೆಲ್ಲವ |
ಮಮತೆಯಿಂ ಬೋಧಿಸಲು ಕೇಳ್ದಾ ನೀಲಕಂಠಮುನಿ ||
ವಿಮಲಮಾನಸನಾಗಿ ಗುರುಪದ |
ಕಮಲಕಾನತನಾಗಿ ಬಳಿಕಂ |
ದಮಿತ ಶಿಷ್ಯರುಸಹಿತ ಶಂಕರಶಿಷ್ಯನೆನಿಸಿದನು || ೨೩

ತೆರಳುತಲ್ಲಿಂ ಬಳಿಕ ಗುರುಶಂ |
ಕರನು ಸೌರಾಷ್ಟ್ರಕವು ಮೊದಲಾ ||
ದುರುತರದ ದೇಶಗಳ ಸಂಚರಿಸುತ್ತಲಲ್ಲಲ್ಲಿ ||
ಕರುಣದಿಂದದ್ವೈತತತ್ವವ |
ನೊರೆದು ದುರ್ಮತಗಳನನೇಕವ |
ನೊರೆಸುತ್ತೈದಿದನೊಲವಿನಿಂ ದ್ವಾರಾವತೀಪುರವ || ೨೪

ಬಂದು ಸೇರುತಲಲ್ಲಿ ವೈಷ್ಣವ |
ವೃಂದವನು ನೆರೆ ಗೆಲಿದು ಬಹುಮುದ |
ದಿಂದಲಾ ಶಾಕ್ತೇಯಮತವನು ಖಂಡಿಸುತ ಬಳಿಕ ||
ಇಂದುಶೇಖರನದನು ಬೀಳ್ಕೊಳ |
ಮುಂದೆ ಗೋಚರಿಸಿದುದು ಬಹುಸಿರಿ |
ಯಿಂದಲುಜ್ಜಯಿನೀಮಹಾಪುರವಧಿಕತೇಜದಲಿ || ೨೫

ಪುರವನದ ಸೇರುತ್ತ ಶಂಕರ |
ಪರಮಸಂಭ್ರಮದಿಂದ ಸಾರಸ |
ಚರಣ ಮೊದಲಾದಖಿಳಶಿಷ್ಯರ ನೆರವಿಯೊಡಗೂಡಿ ||
ಪುರದ ಮಧ್ಯದೆ ಶೋಭಿಸುತ್ತಿಹ |
ಪರಿಪರಿಯ ಗೋಪುರವನಾಂತಿಹ |
ವರಮಹಾಕಾಳೇಶ್ವರಾಲಯಕಾಗಿ ನಡೆತಂದ || ೨೬

ಬಂದು ಪರಮೇಶ್ವರಪದಾಬ್ಜಕೆ |
ವಂದಿಸುತ ಯತಿಪತಿಯು ಬಹುಳಾ |
ನಂದದಿಂ ನಡೆತಂದು ಮುಖಮಂಟಪದೆ ಕುಳ್ಳಿರ್ದು ||
ನಂದ ಭಯಭಕ್ತಿಯಲಿ ಶಿಷ್ಯರ |
ವೃಂದ ಸೇವಿಸುತಿರಲು ಬಳಿಕರ |
ವಿಂದಚರಣನು ಬಹುಳ ವಿನಯದೆ ನುಡಿದನಿಂತೆಂದು| ೨೭

ಗುರುವೆ ಕೇಳುಜ್ಜಯಿನಿಯೆಂಬೀ |
ಪುರದಳೊಬ್ಬನು ಧರಣಿಯಮರನು |
ಭರಿತಗರ್ವನು ಭಟ್ಟಭಾಸ್ಕರನೆಂಬ ಪೆಸರಿನಲಿ ||
ಇರುವನಾತನು ಕರ್ಮವಾದದೆ |
ಪರಿಣತನು ವಾದದೊಳಗಾತನ |
ನೆರೆ ಗೆಲಲು ಲೋಕಕ್ಕೆ ಮಹದುಪಕಾರವಹುದೆಂದ || ೨೮

ಎಂದ ಮಾತನು ಕೇಳುತಾಗ ಸ |
ನಂದನನ ಮೊಗನೋಡಿ ನಸುನಗೆ |
ಯಿಂದ ನೀನೇ ಪೋಗಿ ಪಂಡಿತಭಟ್ಟಭಾಸ್ಕರನ ||
ಇಂದು ನಮ್ಮೆಡೆಗಾಗಿ ಕರೆತಾ |
ರೆಂದು ನೇಮಿಸಲಾಗ ಸಮ್ಮುದ |
ದಿಂದ ಯತಿಪಂಗೆರಗಿ ಸಾರಸಚರಣ ಬೀಳ್ಕೊಂಡ || ೨೯

ಜಲಜಪಾದನು ಭಟ್ಟಭಾಸ್ಕರ |
ನಿಲಯಕೈದುತಲಾತನಿದಿರೊಳು |
ನಿಲುತಲತಿಗಂಭೀರವಾಕ್ಯದೆ ನುಡಿದನಾತಂಗೆ ||
ಬಲುತೆರದ ದುರ್ಮತಗಳೆಲ್ಲವ |
ಗೆಲಿದು ವರವೇದಾಂತಮತವನು |
ಸಲೆ ಪೂರೆದ ಶಂಕರಯತೀಶ್ವರ ಬಂದಿರುವನೆಂದು || ೩೦

ವಿನಯದಿಂದೈತಂದು ಯತಿಕುಲ |
ವನಜಭಾಸ್ಕರನೆಡೆಗೆ ನೀನಿಂ |
ದನುವಿನಿಂದದ್ವೈತತತ್ವಾಮೃತವ ನೆರೆ ಕೇಳ್ದು||
ಅನುಸರಿಸು ತನ್ಮತವ ನಿನಗದು |
ಮನಕೆ ಸರಿಬಾರದೊಡೆ ವಾದವ |
ನನುಸರಿಸಿ ನಿಜಮತವ ರಕ್ಷಿಪುದೆಂದನಾ ಯತಿಪ || ೩೧

ಸಾರಸಾಂಖ್ಯಯ ನುಡಿಯ ಕೇಳ್ದಾ |
ಸೂರಿಯತಿಗರ್ವದಲಿ ನುಡಿದನು |
ಧಾರಿಣಿಯೊಳುಳ್ಳಖಿಳ ವಿದ್ವಜ್ಜನವ ವಾದದಲಿ ||
ಭೂರಿವಿಭವದಿ ಗೆಲಿದ ಪರಮತ |
ಭೂರುಹಂಗಳ ಕಡಿವ ನಿಶಿತಕು |
ಠಾರನೆನ್ನೊಳು ನಿಮಗೆ ಜಯವೆಂತಹುದು ಪೇಳೆನುತ || ೩೨

ಭೂರಿಗರ್ವದ ನುಡಿಯ ಕೇಳ್ದಾ |
ಸಾರಸಾಂಖ್ಯಯು ನಗುತ ಕೇಳ್ಕೈ |
ಸೂರಿವರ ತರುಗಳನು ಕಡಿವ ಕುಠಾರ ಭಾವಿಸಲು ||
ಹೀರಮಣಿಯನು ಕೊರೆಯಲಹುದೇ |
ಸಾರಿ ಬಂದಾ ಯತಿಪನಿದಿರೊಳು|
ತೋರು ನಡೆ ಸಾಹಸವ ನೀನೇನುತತ್ತ ತಿರುಗಿದನು || ೩೩

ಬಂದು ಗುರುಪದಕೆರಗಿ ಭಾಸ್ಕರ |
ನೆಂದ ಗರ್ವದ ನುಡಿಯ ಪೇಳುತ |
ನಿಂದಿರಲಿಕೈತಂದನಾಕ್ಷಣ ಭಟ್ಟಭಾಸ್ಕರನು ||
ಇಂದುಶೇಖರನೊಡನೆ ವಾದಕೆ |
ನಿಂದನಿಬ್ಬರಿಗಾಯ್ತು ವಾದವು |
ಹಿಂದೆ ಮಂಡನಮಿಶ್ರಶಂಕರವಾದ ನಡೆದಂತೆ || ೩೪

ಸೂರಿವರ ಮಸ್ಕರಿಗಳಿಬ್ಬರ |
ಪಾರವಾದವು ನಡೆಯುತಿರ್ದುದು |
ಸಾರಸಾಂಖ್ಯಪ್ರಮುಖ ಶಿಷ್ಯರ ನೆರಪಿ ಬೆರಗಾಗೆ ||
ಘೋರತರಭವದುರಿತಪಾರಾ |
ವಾರಬಾಡಬ ಯತಿಪ ಪರಮೋ |
ದಾರವಾಕ್ಯಗಳಿಂದ ಗೆಲಿದನು ಭಟ್ಟಭಾಸ್ಕರನ || ೩೫

ಶರದ ಚಂದ್ರನ ಕಿರಣ ಸೋಕಲು |
ಸರಸಿಜಂಗಳು ಮುಖವ ಮುಚ್ಚುವ |
ತೆರದೊಳಾ ಶಂಕರನ ಶಾಂತತೆಯಾಂತ ವಾಗ್ಮಿತೆಯು ||
ಕಿರಣ ಪಸರಿಸೆ ಭಟ್ಟಭಾಸ್ಕರ |
ನೆರೆ ಪರಾಜಿತನಾಗಿ ಮುಖವನು |
ಧರೆಗೆ ಬಾಗಿಸಿ ದುಗುಡದಿಂ ತೆರಳಿದನು ನಿಜಗೃಹಕೆ || ೩೬

ವರಯತಿಪನುಜ್ಜಯಿನಿಯೆಂಬಾ |
ಪುರವ ಬೀಳ್ಕೊಂಡೈದಿ ಮುಂದಕೆ |
ಬರುತಲಿರಲಾ ತಪ್ತಮುದ್ರಾಂಕಿತರ ವೈಷ್ಣವರ ||
ನೆರವಿಯನು ಕಾಣುತ್ತ ದೇಹವ |
ನುರುಹಿ ಕೊಂಬುದ ಬಿಡಿಸುತವರಿಗೆ |
ಪರಮ ಪಂಚಾಯತನ ಪೂಜಾಕ್ರಮವನರುಹಿದನು || ೩೭

ಲಿಂಗಧಾರಿಗಳಾದ ಶೈವರ |
ಪಂಗಡವು ಬರಲವರ ಕಾಣುತ |
ಲಂಗಜಾಂತಕನವರಿಗಾ ಪಂಚಾಯತನವಿಧಿಯ ||
ವಿಂಗಡದಲರುಹುತ್ತ ದೇಹದೆ |
ಲಿಂಗಧಾರಣೆ ಬೇಡವೆನುತು |
ತ್ತುಂಗಮಹಿಮನು ಶೈವಮತವನು ಪೊರೆದನತಿಹಿತದೆ || ೩೮

ಬಂದರಾ ಶಾಕ್ತೇಯಮತದವ |
ರಿಂದುಧರನೆಡೆಗಾಗಲವದಿರಿ |
ಗೆಂದನಾಗಲು ನೀವು ವಾಮಾಚಾರಪದ್ಧತಿಯ ||
ಒಂದ ಸಂತ್ಯಜಿಸುವುದು ಸಮ್ಮುದ |
ದಿಂದ ಪಂಚಾಯತನ ಪೂಜೆಯು |
ನಂದದಿಂದೆಸಗುವುದು ಸದ್ಗತಿಯಹುದು ನಿಮಗೆಂದು || ೩೯

ಬಳಿಕ ಗಾಣಾಪತ್ಯಜನಸಂ |
ಕುಲವು ನಡೆತರಲಾಗ ಶಂಕರ |
ನೊಲವಿನಿಂ ಕಾಣುತ್ತ ನೀವುಚ್ಛಿಷ್ಟಭೋಜನವ ||
ಉಳಿದು ಪಂಚಾಯತನ ಪೂಜೆಯ |
ನೊಲವಿನಿಂದಾಚರಿಸೆ ಸದ್ಗತಿ |
ಸುಲಭದಿಂದಹುದೆನುತಲವರನು ಬೋಧಿಸಿದನಾಗ || ೪೦

ಸೌರಮತದವರೈದಲವರಿಗೆ |
ಮಾರಹರ ಕರುಣಿಸಿದ ನೀವಾ |
ಸೂರಿಯನ ಪಂಚಾಯತನ ವಿಧಿಯಿಂದ ಪೂಜಿಸಿರಿ ||
ದೂರಮಾಡಿರಿ ರಕ್ತಗಂಧವ |
ಸೇರುವಿರಿ ಮೋಕ್ಷವನು ನಿಜವೆನು |
ತಾ ರವಿಯ ಮತದವರನುದ್ಧರಿಸಿದನು ಧರೆಯೊಳಗೆ || ೪೧

ಬರಲು ಕಾಪಾಲಿಕರು ಕಾಣುತ |
ನರಬಲಿಯನೀಯುವುದ ನೀವ್ನೆರೆ |
ತೊರೆದು ಭೈರವಪಾದಪದ್ಮವ ಪೂಜಿಸುತ್ತಿರಲು ||
ಪರದೆ ಸದ್ಗತಿಯಹುದು ನಿಮಗೆಂ |
ದೊರೆದು ಪಂಚಾಯತನ ಪೂಜೆಯ |
ಕರುಣದಿಂ ರಕ್ಷಿಸಿದನವರನು ಶಂಕರಾಚಾರ್ಯ || ೪೨

ಇಂತು ಷಣ್ಮತಗಳನು ಯತಿವಿ |
ಕ್ರಾಂತ ಸಂಸ್ಥಾಪಿಸುತ ಮುಂದಕೆ |
ಸಂತಸದೆ ನಡೆತರುತ ಬಾಹ್ಲಿಕದೇಶವನು ಸೇರಿ ||
ಭ್ರಾಂತರಾದರ್ಹತರನೆಲ್ಲರ |
ಶಾಂತಿಯಿಂ ಜಯಿಸುತ್ತ ವರವೇ |
ದಾಂತಮತವನು ಬೋಧಿಸುತಲಲ್ಲಿಂದ ತೆರಳಿದನು || ೪೩

ಬಳಿಕ ಕುರು ಪಾಂಚಾಲದೇಶವ |
ಬಳಿಸಿ ಬರುತದ್ವೈತಮತವನು |
ನೆಲೆಗೊಳಿಸುತಲ್ಲಿಂದ ಬರುತಾ ಶೂರಸೇನದಲಿ ||
ಸಲೆ ಸುಬೋಧೆಗಳಿಂದ ದುರ್ಮತ |
ಗಳ ವಿಭಾಡಿಸಿ ಗೆಲಿದು ಧರೆಯೊಳ |
ಗಲಘುತರಕೀರ್ತಿಯನು ತಳೆದನು ಯತಿಕುಲಾಗ್ರಣಿಯು || ೪೪

ರಾಮಸೇತುವು ಮೊದಲು ವರಹಿಮ |
ಧಾಮಶೈಲವು ಕೊನೆಯೆನಿಪ್ಪೀ |
ಸೀಮೆಯಲಿ ಸಂಚರಿಸಿ ಮೂರಾವರ್ತಿ ಸಮ್ಮುದದೆ ||
ಕಾಮರಿಪುವದ್ವೈತತತ್ತ್ವೋ |
ದ್ದಾಮಪೀಯೂಷವನು ಬಹುಸು |
ಪ್ರೇಮದಿಂ ಕರುಣಿಸುತಲಿರ್ದನುದಾರಲೀಲೆಯಲಿ || ೪೫

ನೆರೆದ ತಿಮಿರವ ಮುರಿದು ತನ್ನಯ |
ಕಿರಣದಿಂದಲಿ ಬೆಳಕ ಧರೆಯೊಳು |
ಹರಹುತಿಹ ಸಿತಭಾನುಮಂಡಲದಂತೆ ಪರಿಕಿಸಲು ||
ಪರಿಪರಿಯ ಕುಮತಾಂಧಕಾರವ |
ಪರಿಹರಿಸಿ ಸುಜ್ಞಾನದೀಪ್ತಿಯ |
ಹರಹಿದನು ಸದ್ಬೋಧಕಿರಣದೆ ಯತಿಸುಧಾಸುಪ್ತಿ || ೪೬

ಈ ತೆರದೆ ಯತಿಸಾರ್ವಭೌಮನು |
ಭೂತಳದ ದುರ್ಮತಗಳೆಲ್ಲವ |
ತಾ ತರಿದು ನಿಜಮತವ ಸಂಸ್ಥಾಪಿಸಲಿಕಾ ಬಳಿಕ ||
ಖ್ಯಾತಿಯಾಂತದ್ವೈತಮತವನು |
ಭೂತಳದ ಜನರೆಲ್ಲ ಬಹುಸಂ |
ಪ್ರೀತಿಯಿಂದನುಸರಿಸುತಿರ್ದರು ಬಹುಳವಿಭವದಲಿ || ೪೭

ಬಳಿಕಲಭಿನವಗುಪ್ತನಾಮದ |
ತಳೆದಿರುವ ಶಾಕ್ತೇಯನೊಬ್ಬನು |
ನಲವಿನಿಂದ್ವೈತಂದು ಯತಿಕುಲಕಮಲಭಾಸ್ಕರನ ||
ಬಲುಹ ಕಾಣುತಲಾಭಿಚಾರದ |
ಬಲದಲೀ ಯತಿಪತಿಯ ತಾ ನೆರೆ |
ಗೆಲುವೆನೆಂದನು ಮನದೆ ಕಪಟೋಪಾಯಕೋವಿದನು || ೪೮

ಇಂತು ಕಪಟವ ಮನದೆ ನೆನೆಯುತ |
ಲಂತಕಾಂತಕನೆಡೆಗೆ ತಾನ |
ತ್ಯಂತವಿನಯವ ನಟಿಸುತೈತಂದೆರಗಿ ಕೈಮುಗಿದು ||
ಭ್ರಾಂತಿಯಿಂದೊಡಗೂಡಿ ಯತಿಪಂ |
ಗಂತರಂಗದೆ ಕೇಡಬಯಸಿ ನಿ |
ರಂತರವು ಸೇವಿಸುತಲಿರ್ದನು ಕಪಟವೃತ್ತಿಯಲಿ || ೪೯

ಆಸುರದ ಬುದ್ಧಿಯಲಿ ತನ್ನವಿ |
ನಾಶವನು ತಾನರಿಯದಾ ಬಲು |
ಮೋಸವನು ಯೋಚಿಸುತ ಶಿಷ್ಯರ ಸಂಕುಲವ ಬೆರೆದು ||
ಭೂಸುರಾಧಮನಿರಲು ಮನದೊಳ |
ಗೀಸಮಸ್ತವನರಿದು ಯತಿಕುಲ |
ವಾಸವಶ್ರೀಕಂಠನಿರ್ದನು ತೀರ್ಥಯಾತ್ರೆಯಲಿ || ೫೦

ಸಂಧಿ ಮೂವತ್ತೈದಕ್ಕೆ ಪದ್ಯ ೧೭೬೩ಕ್ಕೆ ಮಂಗಳ

# ಮೂವತ್ತಾರನೆಯ ಸಂಧಿ

ಸೂಚನೆ :— ನಿಜಶರೀರದೊಳೊದಗಿದದ್ಭುತ ।
ರುಜೆಯು ನೆರೆ ಪರಿಹರಿಸಿ ಕೊಂಡನು ।
ಸುಜನವಂದ್ಯನ ಗೌಡಪಾದನ ಕಂಡನಾ ಯತಿಪ ॥

ಕೇಳು ಶೌನಕಮುನಿಪ ಬಳಿಕ ಕ ।
ರಾಳಮತಿ ಶಾಕ್ತೇಯನಾ ಶಶಿ ।
ಮೌಳಿಯನು ಸೇವಿಸುತ ಕಪಟೋಪಾಯವೃತ್ತಿಯಲಿ ॥
ಕಾಲಪುರಕ್ಕೈದಿಸುವೆ ಯತಿಕುಲ ।
ಮೌಳಿಯನು ತಾನೆನುತ ಬಹುದು ।
ಶ್ಶೀಲನಭಿನವಗುಪ್ತನೆಸಗಿದನಾಭಿಚಾರವನು ॥ ೧

ದುಷ್ಟಮಾಂತ್ರಿಕನಿಂತು ಕೃತಪರಿ ।
ಶಿಷ್ಟಪಾಲಗೆ ಜಗದೊಳತ್ಯು ।
ತ್ಕೃಷ್ಟಚರಿತಗೆ ಪರಮಹಂಸಶ್ರೇಷ್ಠಶಂಕರಗೆ ॥
ಕಷ್ಟತರದ ಭಗಂದರಾಭಿದ ।
ದುಷ್ಟರೋಗವು ಜನಿಸಿ ಶೋಣಿತ ।
ನಷ್ಟವಪ್ಪಂದದಲಿ ರಚಿಸಿದನಾಭಿಚಾರವನು ॥ ೨

ರೋಗವಿದು ಭವರೋಗವೈದ್ಯಗೆ ।
ತಾಗುವಂದದೊಳಾಭಿಚಾರವ ।
ನಾಗಲಭಿನವಗುಪ್ತನೆಸಗಲು ತಿಳಿದು ಮನದೊಳಗೆ ॥
ನಾಗಭೂಷಣ ನಗುತ ಮನದ ವಿ ।
ರಾಗದಿಂದಾಶ್ರಯವ ಕೊಡೆ ತ ।
ದ್ರೋಗವಾವರಿಸಿದುದು ಮೃತ್ಯುಂಜಯನ ದೇಹದಲಿ ॥ ೩

# ಮೂವತ್ತಾರನೆಯ ಸಂಧಿ

ಶಕ್ತಿಯುಡುಗುವ ತೆರದೆ ದೇಹದ ।
ರಕ್ತವೆಲ್ಲವು ಪೋಗುತಿರಲಾ ।
ಮುಕ್ತಿದಾಯಕನದನು ಲೆಕ್ಕಿಸದಿರಲು ಮನದೊಳಗೆ ॥
ಭಕ್ತಿಯಿಂ ವಸ್ತ್ರಗಳ ತೊಳೆಯುತ ।
ರಕ್ತಕಲೆಗಳ ಕಂಡು ಚಿಂತಾ ।
ಸಕ್ತನಾದನು ಶಿಷ್ಯವರ್ಯನು ತೋಟಕಾಚಾರ್ಯ ॥ ೨

ಕಂಡು ರೋಗದ ಚಿನ್ಹೆಯಿದನಾ ।
ಪುಂಡರೀಕಪದಾದಿ ಶಿಷ್ಯರ ।
ತಂಡಕಂದರುಹಿದನು ತೋಟಕನಧಿಕಚಿಂತೆಯಲಿ ॥
ಚಂಡತರ ಜಾಡ್ಯಕೆ ಚಿಕಿತ್ಸೆಯು ।
ಕಂಡವರದಾರುಂಟು ಧರಣೀ ।
ಮಂಡಲದೊಳೆಂದೆನುತ ಮರುಗಿತು ಶಿಷ್ಯಸಂದೋಹ ॥ ೩

ಮರುಗುತೀ ಪರಿ ಸಕಲಶಿಷ್ಯರು ।
ಗುರುವಿನಡಿಗೆರಗುತ್ತ ತಮ್ಮಯ ।
ಕರಗಳನು ಜೋಡಿಸುತ ನುಡಿದರು ಭಕ್ತಿಭಾವದಲಿ ॥
ಗುರುವರನೆ ಲಾಲಿಪುದು ರೋಗಕೆ ।
ಪರಿಹರವ ನೆಸಗದಿರೆ ರಿಪುಗಳ ।
ತೆರದೆ ಪೆರ್ಚುತ ದೇಹಶೋಷಣೆಗೈವುದೆಂದೆನುತ ॥ ೪

ಗದೆಯು ದೇಹದೆ ತೋರಲಾಕ್ಷಣ ।
ವದಕೆ ತಕ್ಕ ಚಿಕಿತ್ಸೆಯನು ಕೋ ।
ವಿದರೆನಿಪ ವೈದ್ಯರಲಿ ತಿಳಿಯುತಲೌಷಧಾದಿಗಳ ॥
ಮುದದೆ ಕೈಗೊಳಬೇಹುದೆಂಬುದು ।
ವಿದಿತವಾಗಿಹುದೈಸೆ ಜಗದೊಳ ।
ಗಿದನುಪೇಕ್ಷಿಸಲೇನುಗತಿ ನಮಗೆಂದಗವರಾಗ ॥ ೫

ತೊರೆದು ನಿಜದೇಹಾಭಿಮಾನವ |
ಗುರುವು ದುಃಖವ ಮನಕೆ ತಾರದೆ |
ಯಿರಲು ಗುರುವರಗೊದಗಿದದ್ಭುತಜಾಡ್ಯವಿವರವನು ||
ಅರಿತು ತತ್ಪರಿಹರವ ಶಿಷ್ಯರು |
ನೆರೆ ರಚಿಸಬೇಕೆನುತ ಶಾಸ್ತ್ರಗ |
ಳರುಹುತಿಹವದರಿಂದ ವೈದ್ಯರ ಕರೆತರುವೆವಾವು || ೮

ಎಂದು ಶಿಷ್ಯರು ಪೇಳೆ ಕೇಳುತ |
ಲಿಂದುಧರನವದಿರನು ಕುರಿತಿಂ |
ತೆಂದನೆಲೆ ಶಿಷ್ಯರಿರ ಕೇಳಿರಿ ರೋಗಗಳು ನರಗೆ ||
ಹಿಂದಣಾ ಪ್ರಾರಬ್ಧ ಕರ್ಮಗ |
ಳಿಂದ ಬರುವುವದಲ್ಲದಿರ್ದೊಡೆ |
ಬಂದಪವು ಧಾತುಪ್ರಭೇದಗಳಿಂದ ಭಾವಿಸಲು || ೯

ಇದರೊಳಗೆ ಕರ್ಮಾವಶೇಷದೊ |
ಳೊದಗುವಾ ವ್ಯಾಧಿಗಳ ಪರಿಹರಿ |
ಪುದಕೆ ಸಾಧನೆ ಬೇರೆಯಿಲ್ಲನುಭವದೆ ತೀರುವುದು ||
ಮುದದೆ ತಿಂದಾಹಾರಭೇದದ |
ಲ್ಕೊದಗುತಿಹ ರುಜೆಗಳೆನು ಪರಿಹರಿ |
ಪುದಕೆ ಸಾಧನವೌಷಧಾದಿಗಳೆಂದನಾ ಯತಿಪ || ೧೦

ತನುವನಾವರಿಸಿರ್ಪ ರೋಗವು |
ಜನಿತವಾಗಿರೆ ಕರ್ಮಶೇಷದ |
ಲನುಭವಿಸಿ ಮುಗಿಸುವೆನು ಮೇಣಾಹಾರಭೇದದಲಿ ||
ಜನಿತಮಾಗಿರೆ ಪತನವೈದುವ |
ತನುವನಿದನುಪಚರಿಸಿ ರಕ್ಷಿಪ |
ಮನವು ತನಗಿಲ್ಲೆಂದು ನುಡಿದನು ಶಿಷ್ಯರಿಗೆ ಯತಿಪ || ೧೧

ಎಂದ ಮಾತನು ಕೇಳಿ ಶಿಷ್ಯರ |
ವೃಂದವಾ ಬಾಲೇಂದುಧರನಿಗೆ |
ವಂದಿಸುತ ಕೈಮುಗಿದು ಬಿನ್ನವಿಸಿದುದು ವಿನಯದಲಿ ||
ತಂದೆ ನೀ ದೇಹಾಭಿಮಾನವ |
ಪೊಂದದಿಹುದತಿಸಹಜವಾಗಿಹು |
ದಿಂದು ನಮ್ಮಯ ಬಿನ್ನಪವನವಧರಿಸ ಬೇಕೆನುತ || ೧೨

ಉದಕವನು ಬಿಟ್ಟೆಂತು ಧರೆಯೊಳು |
ಬದುಕ ಬಲ್ಲವು ಜಲಚರಂಗಳು |
ಬದುಕುವೆವು ನಾವೆಂತು ನಿನ್ನ ಪದಾಶ್ರಯವನುಳಿದು ||
ಸದಯನಾಗುತ ನೇಮವೀಯುವು |
ದೊದಗಿಪೆವು ವೈದ್ಯರನು ದಿವ್ಯಾ |
ಷಧದೆ ರುಜೆಯಿದು ಹರಿವುದೆಂದುದು ಶಿಷ್ಯಸಂದೋಹ || ೧೩

ಈ ತೆರದೆ ಸಂಪ್ರಾರ್ಥಿಸುತ್ತಿಕೆ |
ಭೂತನಾಥನು ನಗುತ ಶಿಷ್ಯ |
ವ್ರಾತಕನುಮತಿಯಿತ್ತನಾ ವೈದ್ಯರನು ಕರೆತರಲು ||
ಪ್ರೀತಿಯಿಂದಾ ಶಿಷ್ಯಸಮುದಯ |
ವಾತತುಕ್ಷಣ ತೆರಳಿ ವೈದ್ಯದ |
ರೀತಿಯನು ಬಲ್ಲವರನರಸುತ್ತಿರ್ದುದಲ್ಲಲ್ಲಿ || ೧೪

ದೇಶದೇಶವನರಸಿ ವೈದ್ಯಾ |
ಭ್ಯಾಸಿಗಳ ಕರೆತಂದರಂತೇ |
ವಾಸಿಗಳು ಬಳಿಕವರು ಜಾಡ್ಯವ ನೆರೆ ಪರೀಕ್ಷಿಸುತ ||
ಆಸುರದ ರೋಗವಿದು ನಾವಿದ |
ಕೌಷಧಿಯ ಕಂಡರಿಯೆವೆನ್ನುತ |
ದೇಶಿಗನ ಬೀಳ್ಕೊಂಡು ಸಾರ್ದರು ನಿಜ ನಿಕೇತನಕೆ || ೧೫

ಹಲಬರೀ ಪರಿ ತೆರಳುತಿರ್ದರು ।
ಕೆಲರು ತಾವೀ ಪ್ರಬಲರೋಗ ।
ಕ್ಕಲಘುತರದೌಷಧವ ಬಲ್ಲೆವೆನುತ್ತ ಯತ್ನಿಸುತ ॥
ಬಲುತೆರದ ಲೇಪಗಳ ಮತ್ತಾ ।
ಹಲವು ವಿಧ ಮೂಲಿಕೆ ಕಷಾಯವ ।
ಸಲೆ ರಚಿಸಿ ಯತಿವರನಿಗಿತ್ತರು ಭಕ್ತಿಭಾವದಲಿ ॥ ೧೬

ಪರಿಪರಿಯ ದಿವ್ಯೌಷಧಂಗಳ ।
ವರಯತಿಪಗಿತ್ತಡೆಯು ರೋಗಕೆ ।
ಪರಿಹರವ ತಾವ್ಕಾಣದತಿಶಯ ಖೇದವನು ತಳೆದು ॥
ಹರಿಯದಿದು ತಮ್ಮಿಂದಲೆನುತಲೆ ।
ಸರಸಿಜಾಂಘ್ರಿಪ್ರಮುಖ ಶಿಷ್ಯರಿ ।
ಗೊರೆದು ಭಿಷಜರು ಬೀಳುಕೊಂಡರು ನಿಜಪುರಂಗಳಿಗೆ ॥ ೧೭

ಬಳಿಕ ಶಿವನಾಜ್ಞೆಯಲಿ ಧರಿಣೀ ।
ತಳಕೆ ಬಂದರು ವಿಪ್ರವೇಷವ ।
ತಳೆಯುತಮೃತಾಂಧಸಭಿಷಗ್ವರರಶ್ವಿನೀಸುರರು ॥
ಬಲದ ಕೈಯಲಿ ಪುಸ್ತಕಂಗಳ ।
ಸಲೆ ಧರಿಸಿ ಯತಿಪತಿಯ ಸನಿಹದೆ ।
ಕುಳಿತು ರುಜೆಯ ಪರಿಕ್ಷೆಗೈಯುತ ನುಡಿದರಿಂತೆಂದು ॥ ೧೮

ಇದು ಶರೀರಜರುಜೆಯು ತಾನ ।
ಲ್ಲಿದು ಚಿಕಿತ್ಸೆಗೆ ಸಾಧ್ಯವಹುದ ।
ಲ್ಲಿದಕೆ ಪರಿಹರವಹುದು ಮಂತ್ರ ಜಪಾದಿ ಕರ್ಮದಲಿ ॥
ಇದು ಪರೈಃಕೃತದಾಭಿಚಾರದ ।
ಲುದಿತವಾಗಿಹುದೆಂದು ಪೇಳುತ ।
ಪದಕೆರಗಿ ಬೀಳ್ಕೊಂಡರವರಾ ಯತಿಕುಲೋತ್ತಮನ ॥ ೧೯

ಸಾರಸಾಂಘ್ರಿಯು ಬಳಿಕ ರುಜೆ ಪರಿ |
ಹಾರಮಪ್ಪಂದದಲಿ ಜಪಗಳ |
ಸೂರಿಗಳ ದೆಶೆಯಿಂದ ವಿರಚಿಸಿದನು ಯಥಾಕ್ರಮದೆ ||
ಕ್ರೂರನಭಿನವಗುಪ್ತನಾಕ್ಷಣ |
ಘೋರನರಕವ ಪಡೆದನಿತ್ತಲು |
ಮಾರಹರ ರಾಜಿಸಿದನಂದಾರೋಗ್ಯ ಭಾಗ್ಯದಲಿ || ೨೦

ಇರುತಿರಲು ಮತ್ತೊಂದುದಿನ ಶಂ |
ಕರನು ಸಂಜೆಯ ವೇಳೆ ಗಂಗಾ |
ವರನದೀತೀರದಲಿ ತಂಗಾಳಿಯನು ಸೇವಿಸುತ ||
ಹರುಷದಿಂ ತಾನೊಬ್ಬನೇ ಸಂ |
ಚರಿಸುತಾತ್ಮಧ್ಯಾನನಿಷ್ಠೆಯೊ |
ಳಿರುತ ಕಂಡನಪೂರ್ವತೇಜದ ಯತಿಯನೋರ್ವನನು || ೨೧

ಮೆರೆವ ಸಂಧ್ಯಾರಾಗಮಧ್ಯದೊ |
ಳುರುತರದ ತೇಜದಲಿ ಶೋಭಿಪ |
ತರಣಿಯಂತಿರೆ ಪಾಟಲಾಂಬರಮಧ್ಯದಲಿ ಮುಖವು ||
ನೆರೆ ವಿರಾಜಿಸುತಿರಲು ಲೀಲಾ ||
ಸರಸಿಜವ ಪೋಲ್ವಂತೆ ಕರದೊಳು |
ಕರಕ ರಂಜಿಪ ಪರಮಹಂಸನ ಕಂಡನಾ ಯತಿಪ || ೨೨

ಭಾಸಿಸುವ ಭಸ್ಮತ್ರಿರೇಖಾ |
ಭಾಸಿತಾನನಕಮಲನನು ಸ |
ನ್ಯಾಸಿಕುಲಶೇಖರನ ಧೃತರುದ್ರಾಕ್ಷಮಾಲನನು ||
ದೇಶಿಕಾಗ್ರಣಿಯೆನಿಪ ವರವೈ |
ಯಾಸಕಿಯ ಶಿಷ್ಯನನು ಯತಿಕುಲ |
ವಾಸವನು ಕಾಣುತ್ತಲರಿದನು ಪರಮಗುರುವೆಂದು || ೨೩

ತನ್ನ ಗುರು ಗೋವಿಂದಪಾದಂ |
ಗುನ್ನತದ ಮಂತ್ರೋಪದೇಶವ |
ನನ್ನಿಯಿಂ ಕರುಣಿಸಿದ ಗುರುವರ ಗೌಡಪಾದನನು ||
ಸನ್ನುತನು ಕಾಣುತ್ತ ಹರ್ಷೋ |
ತ್ಪನ್ನಬಾಷ್ಪಗಳುದುರೆ ನೇತ್ರದೊ |
ಳುನ್ನತದ ಭಕ್ತಿಯಲಿ ಬಂದೆರಗಿದನು ಗುರುಪದಕೆ || ೨೪

ಗುರುವರನೆ ಭವದೀಯಚರಣಾಂ |
ಬುರುಹದರ್ಶನವಪ್ರಯತ್ನದೆ |
ದೊರಕಿದುದು ಜನ್ಮಾಂತರಾರ್ಜಿತಸುಕೃತಫಲದಿಂದೆ ||
ನೆರೆ ಕೃತಾರ್ಥನು ನಾಂ ಪ್ರಶಿಷ್ಯನ
ಕರುಣದಿಂದೀಕ್ಷಿಸುತ ಪೊರೆವುದು |
ಪರಮಗುರು ನೀನೆನುತಲಾ ಶಂಕರನು ಕೈಮುಗಿದ || ೨೫

ಕಂಡನಾ ಗುರುಗೌಡಪಾದನ |
ಖಂಡಮುಹಿಮಾರ್ಣವನು ಗಿರಿಕೋ |
ದಂಡನಾ ಖಂಡೇಂದುಮೌಳಿಯು ಸುರತರಂಗಿಣಿಯು ||
ಮಂಡೆಯೊಳು ಧರಿಸಿರ್ಪ ಶಿವ ತಾಂ |
ದಂಡಿಯಾಗಿಹನೆನುತ ಕರದ ಕ |
ಮಂಡುಲವ ತಳಕಿರಿಸಿ ತಕ್ಕೈಸಿದನು ಶಂಕರನ || ೨೬

ಕೇಳು ಶಿಷ್ಯವರೇಣ್ಯ ನಿನ್ನಯ |
ಶೀಲವನು ಗೋವಿಂದಪಾದನು |
ಪೇಳಿಹನು ಪರಮಾರ್ಥತತ್ವಾಮೃತದ ಸಾರವನು ||
ಲೀಲೆಯಿಂ ಬೋಧಿಸುತ ಧರೆಗನು |
ಕೂಲವಂ ಕಲ್ಪಿಸಿದೆ ನಿನಗೆ ವಿ |
ಶಾಲಕೀರ್ತಿಯು ಬಂದುದೆಂದನು ಗೌಡಪಾದಮುನಿ || ೨೭

ಗುರುವರನೆ ತವಚರಣಕಮಲದ |
ಕರುಣ ದೊರೆಯಲು ಮೂಕನಾದವ |
ಸುರುಚಿರದ ತತ್ವವನು ಬೋಧಿಪ ಶಕ್ತನಹನೆನಲು ||
ಅರಿವಹುದೆ ಭವದೀಯಶಿಷ್ಯನ |
ಚರಣಸೇವಕನೆನಗೆ ತತ್ವವ |
ಧರೆಗೆ ಬೋಧಿಪ ಶಕ್ತಿಯನುತೆರಗಿದನು ಶಂಕರನು || ೨೮

ಬಳಿಕ ತಾಂ ರಚಿಸಿರ್ಪ ಭಾಷ್ಯಂ|
ಗಳ ಸಮರ್ಪಿಸೆ ಶಿವನು ಯತಿಕುಲ |
ಜಲಜಭಾಸ್ಕರಗೌಡಪಾದನು ಭಾಷ್ಯಗಳ ನೋಡಿ ||
ಒಲವಿನಿಂ ಸಮ್ಮತಿಸುತೆಲ್ಲವ |
ನಲಘುಸಂಭ್ರಮದಿಂದ ಯತಿಕುಲ |
ತಿಲಕನೊಡನಿಂತೆಂದನತಿಕಾರುಣ್ಯ ಭಾವದಲಿ || ೨೯

ಧರೆಗೆ ಹಿತವನು ಬಯಸುತೆನ್ನಯ |
ಪರಮಗುರುವಾ ಬಾದರಾಯಣ |
ವಿರಚಿಸಿರುವೀ ಬ್ರಹ್ಮಸೂತ್ರಕೆ ಭಾಷ್ಯವನು ನೀನು ||
ಹರುಷದಿಂ ರಚಿಸಿರುವ ವಿವರವ |
ನರುಹಿದನು ಗೋವಿಂದಪಾದನು |
ಪರಿಕಿಸಿದೆನಿಂದಿನಲಿ ಬಹು ಪರಿತೋಷವಾದುದಲಿ || ೩೦

ಸೂತ್ರಕಾರನು ವರಪರಾಶರ |
ಪುತ್ರನೀ ಭಾಷ್ಯವನು ಪರಮಪ |
ವಿತ್ರಮಾಗಿಹುದೆಂದು ಸಮ್ಮತಿಸಿಹನು ಪೂರ್ವದಲಿ ||
ಮಿತ್ರಶಶಿತಾರೆಗಳು ಮೇಣು ಧ |
ರಿತ್ರಿಯಿಹ ಪರ್ಯಂತ ಕೀರ್ತಿಗೆ |
ಪಾತ್ರನಾದೆಯೆನುತ್ತ ನುಡಿದನು ಗೌಡಪಾದಮುನಿ || ೩೧

ಲಾಲಿಸೈ ಶಂಕರನೆ ಪರಮುನಿ ।
ಶಾಲತರಭಾಷ್ಯಗಳ ಮಧ್ಯದೆ ।
ಮೇಲೆನಿಪ ಮಾಂಡೂಕ್ಯಭಾಷ್ಯದ್ವಯವ ನೆರೆ ನೋಡಿ ॥
ತಾಳಿದೆನು ಹರ್ಷವನು ಕೊಡುವೆನು ।
ಕೇಳು ವರಗಳನೆನಲು ಬಳಿಕಾ ।
ಫಾಲನೇತ್ರನು ನಗುತ ನುಡಿದನು ಗೌಡಪಾದನಿಗೆ ೩೨

ಗುರುವರನೆ ಭವದೀಯ ಚರಣಾಂ ।
ಬುರುಹದರುಶನಲಾಭವಿದು ತಾಂ ।
ದೊರಕಿದುದು ಜನ್ಮಾಂತರಾರ್ಜಿತಸುಕೃತಫಲದಿಂದೆ ॥
ವರವು ಬೇರಿನ್ನೇನು ಕರುಣಿಸು ।
ನಿರತವೆನ್ನಯ ಮನವು ಪರಮನೊ ।
ಳೆರಕವಾಗಿಹ ತೆರದೊಳೆನ್ನುತ ಯತಿಪನೆರಗಿದನು ॥ ೩೩

ಎನಲು ಸಂಭ್ರಮದಿಂದ ಯತಿಪನ ।
ವಿನಯದಿಂ ತೆಗೆದಪ್ಪಿ ನಿನ್ನಯ ।
ಮನವು ಸಂತತ ಪರಮನೊಳು ತಾನೈಕ್ಯಮಾಗಿರಲಿ ॥
ಎನುತ ಕರುಣಿಸಿ ಗೌಡಪಾದನು ।
ನೆನೆದನಂತರ್ಧಾನವನು ನಿಜ ।
ಮನದೊಳಾ ಶಂಕರನ ಸಂಭಾವಿಸುತಲತಿಮುದದೆ ॥ ೩೪

ಬಳಿಕಲಾ ಶಂಕರನು ಗುರುಪದ ।
ನಳಿನದರ್ಶನಲಾಭದೊರಕಿದು ।
ದಲಘುಪುಣ್ಯವೆನುತ್ತ ಮನದೊಳಗತುಲಸಂಭ್ರಮವ ॥
ತಳೆಯುವನು ತಾನೊಮ್ಮೆ ಗುರುಪದ ।
ಜಲಜವಿರಹದೊಳೊಮ್ಮೆ ಮನದೊಳ ।
ಗಳಲಿ ತಾಂ ಬೆಂಡಾಗುತಿರ್ದನು ಖೇದ ಮೋದದಲ್ಲಿ ॥ ೩೫

ಅಲಘುಮಹಿಮನು ಬಳಿಕ ಚಿಂತೆಯು |
ತೊಲಗಿಸುತ ಮನದೊಳಗೆ ಗುರುಪದ |
ಜಲಜದರ್ಶನ ದೊರೆತ ವಾರ್ತೆಯ ತನ್ನ ಶಿಷ್ಯರಿಗೆ ||
ತಿಳುಹ ಬೇಕೆಂದೆನುತಲವದಿರ |
ಬಳಿಗೆ ಪರಿತೋಷದಲಿ ಬಂದನು |
ಜಲಜಪಾದಪ್ರಮುಖಶಿಷ್ಯರಿಗೊರೆದನಿಂತೆನುತ || ೩೬

ಸರಸಿಜಾಂಘ್ರಿ ಪ್ರಮುಖಶಿಷ್ಯರ |
ನೆರವಿಯಾಲಿಪುದಿಂದು ನಾನಾ |
ಸುರನದೀತೀರದಲಿ ಚರಿಸುತಲಿರಲು ಸಂಜೆಯಲಿ ||
ಪರಮಗುರು ವರಗೌಡಪಾದನ |
ಚರಣದರ್ಶನವಾಯ್ತು ತನ್ನನು |
ಹರುಷದಿಂದೋವಿದನು ಕರುಣಾಜಲಧಿ ಗುರುನಾಥ || ೩೭

ನೋಡಿದನು ಭಾಷ್ಯಗಳನೆಲ್ಲವ |
ನೀಡಿರಿವ ಕೃಪೆಯಿಂದ ನೆರೆ ಕೊಂ |
ಡಾಡಿದನು ಮಾಂಡೂಕ್ಯಭಾಷ್ಯದ್ವಯವನತಿಮುದದೆ ||
ಬೇಡದಿರೆ ತಾನಾಗಿ ವರಗಳ |
ನೀಡಿದನು ಮಹಿಮಾಂಬುನಿಧಿಯಾ |
ಗೌಡಪಾದನೆನುತ್ತ ನುಡಿದನು ನಗುತ ಮದನಾರಿ || ೩೮

ಕೇಳುತೀ ವೃತ್ತಾಂತವೆಲ್ಲವ |
ತಾಳುತತಿ ಸಂಭ್ರಮವ ಶಿಷ್ಯರ |
ಜಾಲವಿರಲಾ ಬಳಿಕ ಸಮ್ಮುದವಾಂತು ಚಿತ್ತದಲಿ ||
ಲೀಲೆಯಿಂದ್ವೈತಂದು ಗಂಗಾ |
ಕೂಲದಲಿ ಚರಿಸುತ್ತ ಯತಿವರ |
ಫಾಲಲೋಚನನಿದ್ದನಾತ್ಮಧ್ಯಾನಪರನಾಗಿ || ೩೯

ಇರುತಿರಲು ಯತಿಯಿಂತು ಜನಗಳ |
ನೆರವಿಯೊಳಗಲ್ಲಲ್ಲಿ ವಾರ್ತೆಯು |
ಹರೆದುದಾ ಕಾಶ್ಮೀರಪುರದೊಳು ಶೋಭಿಸುತ್ತಿರುವ ||
ಸುರುಚಿರದ ಸರ್ವಜ್ಞಪೀಠವ |
ಪರಿಪರಿಯ ಮತಗಳನು ಜಯಿಸುತ |
ವರಯತಿಪನೇರಿದೊಡೆ ಕೀರ್ತಿಯು ದೊರೆವುದೆಂದೆನುತ || ೪೦

ಉತ್ತಮಾಮಲಕೀರ್ತಿ ದುರ್ಮತ |
ಮತ್ತವಾರಣಸಿಂಹ ಯತಿಪ |
ವೋತ್ತಮನು ಸರ್ವಜ್ಞಪೀಠವನೇರಿ ಶೋಭಿಸಲು ||
ಉತ್ತರಾಶಾದೇಶದೊಳಗ |
ತ್ಯುತ್ತಮದ ಸತ್ಕೀರ್ತಿ ದೊರೆವುದೆ |
ನುತ್ತ ಹಬ್ಬಿತು ವಾರ್ತೆಯಾ ಯತಿಪತಿಯ ಸಮ್ಮುಖದೆ || ೪೧

ಕೇಳಿ ಜನಜನಿತವನು ಮನದೊಳು |
ತಾಳುತತಿಹರ್ಷವನು ನಿಜಶಿ |
ಷ್ಯಾಳಿಯಿಂದೊಡಗೂಡಿ ವರಕಾಶ್ಮೀರದೇಶವನು ||
ಲೀಲೆಯಿಂದೈದುತ್ತಲಲ್ಲಿ ವಿ |
ಶಾಲಪೀಠವನೇರಿ ಕೀರ್ತಿಯ |
ತಾಳುವೆನು ತಾನೆನುತಲಾ ಶ್ರೀಕಂಠಯತಿ ನೆನೆದ || ೪೨

ಸಂಧಿ ಮೂವತ್ತಾರಕ್ಕೆ ಪದ್ಯ ೧೮೦೫ ಕ್ಕೆ ಮಂಗಳ



# ಮೂವತ್ತೇಳನೆಯ ಸಂಧಿ

ಸೂಚನೆ :—ಭೂರಿ ಮಹಿಮಾರ್ಣವನು ಪರಮೋ ।
ದಾರಮತಿ ಯತಿಪತಿಯು ವರಕಾ ।
ಶ್ಮೀರದೇಶದೊಳೆಸೆದನಾ ಸರ್ವಜ್ಞಪೀಠದಲಿ ॥

ಕೇಳು ಶೌನಕಮುನಿಪ ಯತಿಕುಲ ।
ಮೌಳಿಯಾ ಕಾಶ್ಮೀರದೇಶದ ।
ಮೇಲೆನಿಪ ಸರ್ವಜ್ಞಪೀಠವಿಚಾರವೆಲ್ಲವನು ॥
ಪೇಳುತಿರೆ ಜನತತಿಯು ತಾನದ ।
ನಾಲಿಸುತ ಸಪ್ರೇಮದಿಂ ಶಿ ।
ಷ್ಯಾಳಿಯನು ಕರೆದಾಗ ನುಡಿದನು ಮಧುರವಚನದಲಿ ॥ ೧

ಸರಸಿಜಾಂಘ್ರಿಪ್ರಮುಖ ಶಿಷ್ಯರ ।
ನೆರವಿಯಾಲಿಪುದಿದನು ನಮ್ಮೀ ।
ಭರತಖಂಡದೊಳೆಸೆವ ವರಕಾಶ್ಮೀರದೇಶದಲಿ ॥
ಸರಸತಿಯ ಸಂಸ್ಥಾನದಂತಿರೆ ।
ಮೆರೆಯುವಾ ಶ್ರೀನಗರ ಮಧ್ಯದೆ ।
ನೆರೆ ವಿರಾಜಿಸುತಿಹುದು ಮಂದಿರವೊಂದು ಸೊಗಸಿನಲಿ ॥ ೨

ಅದಕೆ ನಾಲ್ದೆಸೆಗಳಲಿ ರಂಜಿಪ ।
ಸದಮಲದ್ವಾರಂಗಳಿಹವಾ ।
ಪದುಳಗೃಹದೊಳಗಿಹುದು ಜಾಂಬೂನದವರಾಸನವು ॥
ಇದ ಬಳಸಿ ಕುಳಿತಿಹರು ಬಹು ಕೋ ।
ವಿದರು ವಾದದೊಳವರ ಜಯಿಸಿದ ।
ವಿದುಷವರನೇರುವನು ವರಸರ್ವಜ್ಞಪೀಠವನು ॥ ೩

ಸಕಲಮತವಾದಿಗಳ ವಿದ್ವ |
ನ್ನಿಕರಮಧ್ಯದೆ ಗೆಲಿದು ಲೋಕ |
ಪ್ರಕಟಕೀರ್ತಿಯ ತಳೆದು ವರಸರ್ವಜ್ಞಪೀಠವನು ||
ಸುಕರದಿಂದೇರುವುದು ಬಹುವಿಧ |
ಸುಕೃತಶಾಲಿಗೆ ಲಭಿಪುದಲ್ಲದೆ |
ವಿಕಳಮತಿಗಳಿಗೆಂತು ಲಭಿಸುವುದೆಂದನಖಿಳೇಶ || ೪

ಚಾರುತರ ಮಂದಿರದ ಚಾತು |
ರ್ದ್ವಾರಗಳೊಳಾ ಪೂರ್ವಪರ ಕು |
ಬೇರದಿಕ್ಕುಗಳೊಳಗೆ ಬಾಗಿಲುಗಳನು ತೆರೆದಿಹರು ||
ಭಾರತದ ದಕ್ಷಿಣದ ದೇಶದೆ |
ಸೂರಿವರರಿಲ್ಲೆನುತ ಯಾಮ್ಯ |
ದ್ವಾರವನು ಮುಚ್ಚಿಹರು ಕಾಶ್ಮೀರದ ಮಹಾಜನರು || ೫

ತೆರಳುತಲ್ಲಿಗೆ ದಕ್ಷಿಣಾಶಾ |
ವರಕವಾಟವ ತೆಗೆಸಿ ನಾವಾ |
ಪರಿಪರಿಯ ಮತವಾದಿನಿಕರವ ಗೆಲಿದು ಸಂಭ್ರಮದೆ ||
ಸುರುಚಿರದ ಸರ್ವಜ್ಞಪೀಠವ |
ಭರದಲೇರಲು ಯಾಮ್ಯದೇಶ |
ಕ್ಕರುತರದ ಸತ್ಕೀರ್ತಿ ದೊರೆಯುವುದೆಂದನಾ ಯತಿಪ || ೬

ಎಂದ ಯತಿವಾಕ್ಯವನು ಕೇಳ್ದು ಸ |
ನಂದನಾದಿಪ್ರಮುಖಶಿಷ್ಯರ |
ವೃಂದವಾಕ್ಷಣವೆದ್ದು ಗುರುಚರಣಾರವಿಂದದಲಿ ||
ವಂದಿಸುತ ಕೈಮುಗಿದು ವಿನಯದೊ |
ಳೆಂದರಾ ಕಾಶ್ಮೀರದೇಶ |
ಕ್ಕಿಂದೆ ಪಯಣವಗೈದು ಕೀರ್ತಿಯ ಗಳಿಸಬೇಕೆನುತ ||

ಎಂದ ಮಾತನು ಕೇಳಿ ನಗುತರ ।
ವಿಂದಪಾದಪ್ರಮುಖಶಿಷ್ಯರ ।
ವೃಂದದಿಂದೊಡಗೂಡಿ ಪಯಣವಗೈದು ಪಥದಲಿ ॥
ಸುಂದರದ ಭಾಗೀರಥೀನದಿ ।
ಯಿಂದ ಶೋಭಿಪ ವಾರಣಾಸಿಯು ।
ಬಂದು ಹೊಕ್ಕನು ಬಹುಳಸಂಭ್ರಮದಿಂದಲಾ ಯತಿಪ ॥ ೮

ದೇವಧುನಿಯೊಳು ಶಿಷ್ಯಚಯಸಹ ।
ದೇವವಂದಿತ ಪಾದಪದ್ಮ ಕೃ ।
ಪಾವನಧಿ ಶಂಕರಯತೀಶನು ಮಿಂದು ಹರ್ಷದಲಿ ॥
ಭೂವಿಬುಧಸಮುದಾಯ ಸಹಿತಲೆ ।
ದೇವದೇವನ ವಿಶ್ವನಾಥನ ।
ಪಾವನತರಾಲಯವ ಪೊಕ್ಕನು ವಿಪುಲ ಭಕ್ತಿಯಲಿ ॥ ೯

ಪುರಹರನ ಮಂದಿರವ ಪೊಗುತಾ ।
ಹರನ ಚರಣಕ್ಕೆರಗಿ ಭಕ್ತಿಯ ।
ಭರದೊಳಾ ಯತಿವರನು ಕೈಗಳ ಮುಗಿದು ನಿಂದಿರುತ ॥
ಕರುಣಿಸೈ ಕಾಮಾರಿ ಜಗದೀ ।
ಶ್ವರ ಭವಾನೀರಮಣ ಗಂಗಾ ।
ಧರ ಪುರಾಂತಕ ಕಾಲಕಾಲ ಕೃಪಾಂಬುನಿಧಿ ಗಿರಿಶ ॥ ೧೦

ಶಾಂತ ವರಪದ್ಮಾಸನಸ್ಥ ಕೃ ।
ತಾಂತಹರ ಶಶಿಚೂಡ ವರವೇ ।
ದಾಂತವಿಗ್ರಹ ಪಂಚವಕ್ತ್ರ ಧನಾಧಿಪತಿಮಿತ್ರ ॥
ಭ್ರಾಂತಿರಹಿತ ಮಹೇಶ ಗಿರಿಜಾ ।
ಕಾಂತ ಸದಸದ್ರೂಪ ಲಕ್ಷ್ಮೀ ।
ಕಾಂತಪೂಜಿತಚರಣ ಕೃಪೆಮಾಡೆಂದನಾ ಯತಿಪ ॥ ೧೧

ಎಂದು ನಮಿಸುತಲಿರಲು ವರಬಾ |
ಲೇಂದುಶೇಖರನಾಗಲತುಲಾ |
ನಂದದಿಂ ಪ್ರತ್ಯಕ್ಷರೂಪವ ತಳೆದು ರಂಜಿಸುತ ||
ಮಂದಹಾಸವ ತಳೆದು ನಿಜಕರ |
ದಿಂದ ಯತಿಪನನೆತ್ತಿ ಬಹುಕೃಪೆ |
ಯಿಂದ ನುಡಿದನು ವಿನಯಮಧುರವಚೋವಿಲಾಸದಲಿ || ೧೨

ಯತಿಪತಿಯೆ ಲಾಲಿಪುದು ನೀನೀ |
ಕ್ಷಿತಿಯೊಳದ್ವೈತವನು ಬೋಧಿಸಿ |
ಮತಿರಹಿತರರ್ಹತರ ಬೌದ್ಧರ ಪಾಪಮಿಶ್ರಿತರ ||
ಹತಿಸಿ ವರವೇದಾಂತ ಮಾರ್ಗ |
ಸ್ಥಿತಿಯನೆಸಗುತ ಜಗವ ಪಾಲಿಸ |
ಲತಿಹಿತದೆ ಜನಿಸಿರ್ಪೆ ತನ್ನಂಶವನು ಕೈಕೊಂಡು || ೧೩

ಎನ್ನ ನಿಜತೇಜದಲಿ ರಂಜಿಪ |
ನಿನ್ನ ದೆಸೆಯಿಂದಾದ ಭಾಷ್ಯದ |
ಲುನ್ನತಿಯನಾಂತಿಹುದು ವೇದವ್ಯಾಸಕೃತಸೂತ್ರ ||
ಇನ್ನು ನೀಂ ಕಾಶ್ಮೀರದೇಶದೊ |
ಳುನ್ನತದ ಸರ್ವಜ್ಞಪೀಠವ |
ನನ್ನಿಯಿಂದೇರುವುದು ಪಡೆವುದು ವಿಮಲತರಯಶವ || ೧೪

ಧರಣಿಯೊಳಗವತರಿಸಿ ಮೂವ |
ತ್ತೆರಡು ವತ್ಸರ ಕಳೆದ ಬಳಿಕೆಲಿ |
ವರಯತಿಯೆ ನೀಂ ಸಾರು ರಜತಾದ್ರಿಯನು ಶೀಘ್ರದಲಿ ||
ಕರವ ನೀಡೆನುತಾಗ ವಿಶ್ವೇ |
ಶ್ವರನು ಲಿಂಗಗಳೈದ ತೆಗೆದತಿ |
ಕರುಣದಿಂ ನೀಡಿದನು ಗಿರಿಜಾದೇವಿ ಸಂಭ್ರಮಿಸೆ || ೧೫

ಯತಿಪ ನಿನೀದಿವ್ಯಲಿಂಗ |
ಪ್ರತತಿಯನು ಕೈಗೊಂಡು ಹರ್ಷೋ |
ನ್ನತಿಯಲಿವ ಪೂಜಿಪುದು ಮೂರಾವರ್ತಿಯನುದಿನದಿ ||
ಸಿತಭಸಿತರುದ್ರಾಕ್ಷಮಾಲಾ |
ಯುತನೆನೆಸಿ ಪಂಚಾಕ್ಷರಿಯನತಿ |
ಹಿತದೆ ಜಪಿಸುತ ಸತತ ಶತರುದ್ರಾಭಿಷೇಕದಲಿ || ೧೬

ತರುಣಪಲ್ಲವ ಬಿಲ್ವದಳದಿಂ |
ಪರಿಪರಿಯ ವರಕುಸುಮಚಯದಿಂ |
ಪರಿಕಲಿತ ನೈವೇದ್ಯವೊದಲಾದಮಿತ ಪರಿಕರದಿಂ ||
ಪರಮಲಿಂಗಂಗಳನು ಪೂಜಿಸು |
ತಿರಲು ಸಕಲಾಭೀಷ್ಟಸಿದ್ಧಿಯು |
ದೊರೆವುದೆಂದರುಹುತ್ತ ಮತ್ತಿಂತೆಂದನಾ ಶಿವನು || ೧೭

ಇವನು ರಜತಗ್ರಾವದಿಂದೀ |
ಭುವಿಗೆ ನಿನಗೋಸುಗವೆ ತಂದೆನು |
ಧವಳಶಶಿಮೌಳೀಶನಾಮಕ ಲಿಂಗಪಂಚಕವ ||
ಅವಿರಳದ ಭಕ್ತಿಯಲಿ ಯತಿ ನೀ |
ನಿವನು ಪೂಜಿಪುದೆನುತ ಕರುಣಾ |
ರ್ಣವನು ತಿಳುಹುತಲಾಗಲಂತರ್ಧಾನಪರನಾದ || ೧೮

ಕಾಶಿಯೊಳಗೀತೆರದೆ ವರವಿ |
ಶ್ವೇಶತನಗಿತ್ತಮಲ ಶಶಿಮೌ |
ಳೀಶಲಿಂಗಂಗಳನು ಕೈಕೊಂಡತುಲಹರ್ಷದಲಿ ||
ಕಾಶಿಯನು ಬೀಳ್ಕೊಂಡು ಬಂದನು |
ದೇಶಿಕಾಗ್ರಣಿ ಬಳಿಯೊಳಂತೇ |
ವಾಸಿಗಳು ಬರುತಿರಲು ವರಕಾಶ್ಮೀರವಂ ಕುರಿತು || ೧೯

ಯತಿಶಿರೋಮಣಿ ಬಂದ ಸತ್ಯ |
ವ್ರತನು ಬಂದನು ಪರಮನಿಶ್ಚಲ |
ಮತಿಯು ಬಂದನು ಸಕಲದುರ್ಮತವಾದಿಸಂಕುಲವ ||
ಅತಿಶಯದ ವಾದದಲಿ ಜಯಿಸುತ |
ಹಿತದೊಳದ್ವೈತವನು ಸುಜನ |
ಪ್ರತತಿಗತಿವಿಸ್ತರದೆ ಬೋಧಿಸಿದಾತನಿದೊ ಬಂದ || ೨೪

ವಾದಿನಿಚಯಮದೇಭಮದನಿ |
ರ್ಭೇದನೈಕಸಮರ್ಥಕೇಸರಿ |
ಯೈದುತಿದೆ ಗುರುಶಂಕರಾಖ್ಯೆಯತಳೆದು ಗರ್ಜಿಸುತ ||
ವಾದಿಗಜಸಂಕುಲವು ದೂರ |
ಕ್ಕೈದುವುದು ಸನಿಹದಲಿ ನಿಂದೊಡೆ |
ಭೇದಿಪುದು ಸನ್ಯಾಸದಂಷ್ಟ್ರಾಯುಧದೆ ಮುಳಿಸಿನಲಿ || ೨೫

ಎಂದು ನಾನಾವಿಧದೆ ಪೊಗಳುತ |
ಮುಂದೆ ಬರುತಿರೆ ಸಕಲಶಿಷ್ಯರ |
ವೃಂದವಾ ಮಂದಿರದ ತೆಂಕಣದೆಸೆಯ ಬಾಗಲಿಗೆ ||
ಇಂದುಧರನೈತಂದು ಬಾಗಿಲ |
ನಂದದಿಂ ತೆಗೆಯೆನುತಲೊಳಪೊಗ |
ಲಂದು ಮುತ್ತಿತು ವಾದಿಚಯವಾ ಯತಿನೃಗಾಧಿಪನ || ೨೬

ಏನಿದೇನೆಲೆ ದಂಡಿ ಬಹುಸು |
ಮ್ಮಾನವೇತಕದೇತಕಿಲ್ಲಿಗೆ |
ನೀನು ಬಂದಿಹೆ ಕಾರ್ಯವೇನಿಹುದನು ನಮ್ಮೊಡನೆ ||
ಸಾನುರಾಗದೆ ಪೇಳ್ವುದೆಂದೆನ |
ಲಾ ನಳಿನಪದಮುಖ್ಯರೈತಂ |
ದಾ ನಿಖಿಳವಾದಿಗಳಿಗಿತ್ತರು ನಗುತಲುತ್ತರವ || ೨೭

ಈತನೀ ಜಗದೊಳಗೆ ಬಹುವಿ |
ಖ್ಯಾತಯತಿಸರ್ವಜ್ಞ ಶಂಕರ |
ನೀತನೊಳು ವಾದಿಸುತ ಬಹುಮತವಾದಿ ನಿಕುರುಂಬ ||
ಸೋತಿಹುದು ಲಾಲಿಪುದು ನೀವು ಮ |
ಹಾತಿಶಯ ಸರ್ವಜ್ಞಪೀಠವ |
ನೀತನೇರಲು ಬಂದನೆಂದುದು ಶಿಷ್ಯಸಂದೋಹ || ೨೮

ಆದೊಡೆಮ್ಮಯ ಮತಸುಧರ್ಮವ |
ಸಾದರದೊಳೀ ಯತಿಪ ವಿವರಿಸೆ |
ಮೇದಿನಿಯೊಳೀತಂಗೆ ಸರ್ವಜ್ಞತ್ವ ಸಿದ್ಧಿಪುದು ||
ಮೋದದಿಂದಾ ಬಳಿಕ ಪೀಠವ |
ನೈದುತೇರಲು ಬೇಹುದಲ್ಲದೊ |
ಡೈದುವುದು ದುಸ್ಸಾಧ್ಯವೆಂದುದು ವಾದಿಸಂದೋಹ || ೨೯

ಎಂದ ಮಾತನು ಕೇಳಿ ಬಳಿಕರ |
ವಿಂದಚರಣಾದ್ಯಖಿಳ ಶಿಷ್ಯರ ||
ವೃಂದವನು ಕೆಲಕಿಕ್ಕಿ ವಾದಿವ್ರಜದ ಸಮ್ಮುಖಕೆ ||
ಇಂದುಶೇಖರನೈದಿ ನಗುತಿಂ |
ತೆಂದನೆಲೆ ಮುನಿ ಕೇಳು ವಿದ್ವ |
ದ್ವೃಂದದೊಡನತಿ ವಿನಯಮಧುರವಚೋವಿಲಾಸದಲಿ || ೩೦

ಕವಿಜನೋತ್ತಂಸರಿರ ಲಾಲಿಪು |
ದವನಿಯಲಿ ಸರ್ವಜ್ಞನಾದವ |
ಶಿವ ವಿನಹ ಬೇರೊಬ್ಬನುಂಟೇ ಮನದೆ ಭಾವಿಸಲು ||
ಭವನ ಕರುಣಾಲೋಕದಿಂದಾಂ |
ವಿವರಿಸುವೆನರಿತನಿತ ನೀವತಿ |
ತವಕದಿಂ ಪ್ರಶ್ನಿಸುವುದೆಂದನು ಯತಿಕುಲೋತ್ತಂಸ || ೩೧

ಬರಬರಲು ಕಣ್ಣಿದಿರೊಳೆಸೆದುದು |
ಸಿರಿಯುಸೊಂಪಿನ ರಾಜಧಾನಿಯು |
ಪರಿರಚಿತತೋರಣದ ಭವನಂಗಳ ವಿಲಾಸದಲಿ ||
ಪುರವರದ ಮಧ್ಯದಲಿ ಶೋಭಿಸಿ |
ತುರುತರದ ಸರ್ವಜ್ಞಪೀಠವ |
ನೆರೆ ತಳೆದು ರಾರಾಜಿಸುತ್ತಹ ದಿವ್ಯಮಂದಿರವು || ೨೦

ಮೂರುದಿಕ್ಕಿನ ಬಾಗಿಲೊಳು ನೆರೆ |
ಸೇರಿಹರು ಸೂರಿಗಳು ಯಾವ್ಯ |
ದ್ವಾರವನು ಮುಚ್ಚಿಹರು ವಾದಕೆ ಬರುವರಿಲ್ಲೆನುತ ||
ಚಾರುಮಂದಿರವಿದನು ಕಾಣುತ |
ಭೂರಿಸಂಭ್ರಮದಿಂದ ಯತಿಪನು |
ಸಾರಸಾಂಖ್ಯಪ್ರಮುಖರೊಡನೈತಂದನೊಲವಿನಲಿ || ೨೧

ಮುಂದೆ ಶಿಷ್ಯರ ವೃಂದವಾ ಬಾ |
ಲೇಂದುಧರಯತಿವರನ ಬಹುವಿಧ |
ದಿಂದ ನುತಿಸುತ ಬರುತಲಿರ್ದುದು ಬಹುಳವಿಭವದಲಿ ||
ಮಂದಿರದ ಬಾಗಿಲಿಗೆ ಬರಲರ |
ವಿಂದಪಾದ ಸುರೇಶ್ವರಾದಿಗ |
ಳಂದವಿಗೆ ಪೊಗಳುತ್ತಲಿರ್ದರು ಯತಿಯ ಮಹಿಮೆಗಳ || ೨೨

ವೇದವಿದ ಯತಿಪತಿಯು ಬಂದನು |
ವೇದದರ್ಥವಿಚಾರಿ ಬಂದನು |
ವೇದಸಾರವ ಬೋಧೆಗೈವ ಜಗದ್ಗುರುವು ಬಂದ ||
ವೇದಮತರಕ್ಷಕನು ಬಂದನು |
ವಾದಿಗಳ ಹೃಚ್ಛೂಲ ಬಂದನು |
ಭೇದವಾದವಿಭಾಡ ಬಂದನು ಯತಿವರನು ಬಂದ || ೨೩

ಯತಿಪ ನೀಂ ಸರ್ವಜ್ಞನೆನ್ನುತ।
ಪತಿಕರಿಸುತೀ ನಿನ್ನ ಶಿಷ್ಯ ।
ಪ್ರತತಿ ಪೊಗಳುತಲಿಹುದು ನೀಂ ಸರ್ವಜ್ಞನಾಗಿರಲು ॥
ಕ್ಷಿತಿಯೊಳೀ ಷಡ್ಭಾವವಾದದ ।
ಮತರಹಸ್ಯವನೊಂದ ನೀ ಸ ।
ಮ್ಮತದಿ ಪೇಳುವುದೆಂದುದಾಗ ಕಣಾದ ಸಂದೋಹ ॥ ೩೨

ಪರಿಕಿಸಲ್ಪರಮಾಣುಯುಗ್ಮವು ।
ಬೆರೆದು ಕೊಳಲಾದ್ವ್ಯಣುಕವೆಂಬುದ ।
ನರಿತಿಹೆವು ನಾವೀಗಣುತ್ವವು ಬಂದುದೆಂತೆಂಬ ॥
ವರರಹಸ್ಯವ ಪೇಳ್ವುದೆನಲಾ ।
ಹರನುಡಿದನಾದ್ವ್ಯಣುಕಗತವಾ ।
ಗಿರುವಣುತ್ವ ದ್ವಿತ್ವಸಂಖ್ಯೆಯೊಳಾದುದೆಂದೆನುತ ॥ ೩೩

ಎಂದುದನು ಕೇಳುತ ಕಣಾದರ ।
ವೃಂದವಾ ಶಂಕರಪದಾಬ್ಜಕೆ ।
ವಂದಿಸುತ ಯತಿಪತಿಯೆ ನೀಂ ಸರ್ವಜ್ಞನಹುದೆನಲು ॥
ಬಂದು ನೈಯಾಯಿಕರು ಯತಿಪಂ ।
ಗೆಂದರೆಲೆ ಯತಿ ನೀನು ಪೇಳುವು ।
ದಿಂದು ನಮ್ಮೀಪ್ರಶ್ನೆಗೊಂದುತ್ತರವನೆಂದೆನುತ ॥ ೩೪

ವರಕಣಾದರ ಮತಕು ಮೇಣೀ ।
ಪರಮಗೌತಮ ಮತದತತ್ವ ।
ಕ್ಕಿರುವ ಮುಕ್ತಿಯ ಭೇದವೇನದ ನೀನು ವಿವರಿಸಲು ॥
ದೊರೆವುದೈ ಸರ್ವಜ್ಞನೆಂಬುವ ।
ಸುರುಚಿರದ ಸತ್ಕೀರ್ತಿ ನಿನಗೆಂ ।
ದರುಹಲಾ ಯತಿಪತಿಯು ನುಡಿದನು ನಗುತಲವರೊಡನೆ ॥ ೩೫

ಆರು ಭಾವಗಳೊಂದಭಾವವು ।
ಸೇರಿ ಸಪ್ತಪದಾರ್ಥದಿಂದಲಿ ।
ತೋರುವೀ ಧರೆಯೊಳಗೆ ದುಃಖವಿನಾಶವೆಂಬುವುದು ॥
ಭೂರಿ ಮೋಕ್ಷವಿದೆಂಬ ತತ್ವದ ।
ಸಾರವಿದುವೆ ಕಣಾದಮತ ಹದಿ ।
ನಾರುವಸ್ತುಗಳೆಂದು ಗೌತಮಮತದ ನಿರ್ಣಯವು ॥ ೩೬

ಬರಿಯ ದುಃಖವಿನಾಶ ಮುಕ್ತಿಯು ।
ಪರಿಯು ತಾನಲ್ಲದರ ಸಂಗಡ ।
ದೊರೆಯೆ ಸುಖಸಂಪ್ರಾಪ್ತಿ ತಾನದು ಮುಕ್ತಿಯಹುದೆಂಬ ॥
ಪರಿಯು ನೈಯಾಯಿಕರ ಮತವೆಂ ।
ದರುಹಲಾ ಯತಿವರನ ಚರಣ ।
ಕ್ಕೆರಗಿ ನೀ ಸರ್ವಜ್ಞನಹುದೆನುತವರು ಪೊಗಳಿದರು ॥ ೩೭

ಆಲಿಸುತಲಾ ಬಳಿಕ ಸಾಂಖ್ಯರು ।
ಫಾಲಲೋಚನನೊಡನೆ ನುಡಿದರು ।
ಮೂಲಯೋನಿಯು ತಾಂಸ್ವತಂತ್ರೆಯೊ ಮೇಣಧಿಷ್ಠಿತೆಯೊ ॥
ಪೇಳು ನೀಂ ಸರ್ವಜ್ಞನಾದೊಡೆ ।
ಪೇಳದಿರಲಿದ ನೀನು ವರದೇ ।
ವ್ಯಾಲಯುವ ಪೊಗಲಾಗದೆನ್ನುತ ಗರ್ವಮುಬ್ಬಿನಲಿ ॥ ೩೮

ವಾದಿಗಳ ಮಾತುಗಳನಾಲಿಸು ।
ತಾದಿಶಂಕರನಾಗ ಪೇಳಿದ ।
ನಾದಿಮಾಯೆಯು ತಾಂ ಸ್ವತಂತ್ರತೆಯಾಂತು ಭುವನದಲಿ ॥
ಮೋದದಿಂದಿಹಳೆಂದು ಕಾಪಿಲ ।
ವಾದಿಗಳ ಮತವೆಮ್ಮಮತದೊಳ ।
ಗಾದಿಮಾಯೆಯು ತಾನಧೀನೆಯು ಪರಮಶಿವಗೆನುತ ॥ ೩೯

ಎನಲು ಕೇಳುತಲಾಗ ಸಾಂಖ್ಯರು |
ಮನದೆ ಸಂತಸವಾಂತು ತೆರಳಲು |
ಘನತರದ ಬಾಹ್ಯಾರ್ಥ ವೈಜ್ಞಾನಕವು ಶೂನ್ಯಕವು ||
ಎನಿಪ ವಾದದೆ ಪರಮಪಂಡಿತ |
ರೆನಿಸಿ ಕೊಂಡಿಹ ಬೌದ್ಧರೆಲ್ಲರು |
ವಿನುತ ಯತಿಯಡೆಗೈದಿ ನುಡಿದರು ಬಹುಳ ಗರ್ವದಲಿ || ೪೦

ಘನತರದ ಬಾಹ್ಯಾರ್ಥವಾದಿಗ |
ಳೆನಿತು ವಿಧವಾಗಿಹರು ಮತ್ತಿವ |
ರನುವಿನಿಂ ಸಾಧಿಸುವ ಮತದೊಳು ಭೇದಮೇನಿಹುದು ||
ಅನವರತ ವಿಜ್ಞಾನವಾದಿಯ |
ನೆನಹದೇಂ ಭವದೀಯ ಮತದೊಳು |
ಘನತೆಯಾವುಹು ತಿಳುಹಿ ಮುಂದಕೆ ನೀನು ಗಮಿಸುವುದು || ೪೧

ಎಂದು ಸೌಗತರಧಿಕ ಗರ್ವದೆ |
ನಿಂದು ಮಾರ್ಗವ ತಡೆಯೆ ವರಬಾ |
ಲೇಂದುಮೌಳಿಯು ನಗುತ ನುಡಿದನು ಮಧುರವಚನದಲಿ ||
ಒಂದೆನಿಪ ಬಾಹ್ಯಾರ್ಥವಾದಿಗ |
ಳಿಂದೆರಡು ವಿಧದಿಂದ ರಾಜಿಪ |
ರೊಂದು ಸೌತ್ರಾಂತಿಕವು ವೈಭಾಷಿಕವು ಮತ್ತೊಂದು || ೪೨

ಇದರೊಳನುಮಾನಪ್ರಮಾಣವ |
ನೊದಲಿನವರೊಪ್ಪುವರು ಮೇಣತಿ |
ಮುದದಿ ವೈಭಾಷಿಕರಿಗಾಪ್ರತ್ಯಕ್ಷನೇ ಸಾಕ್ಷಿ ||
ವಿದಿತವಾಗಿಹ ವಸ್ತುನಿಚಯ |
ಕ್ಕೊದವಿಪರು ತಾವ್ ಕ್ಷಣಿಕಭಾವವ |
ನಿದುವೆ ತಾಂ ಸಾಮಾನ್ಯಮಾಗಿಹುದೆರಡು ಪಂಗಡಕೆ || ೪೩

ಸಾರತರ ವಿಜ್ಞಾನ ಮಾತ್ರವೆ ।
ಭೂರಿ ಸಚರಾಚರದ ರೂಪದೆ ।
ತೋರುವುದು ವಿಜ್ಞಾನವಿದು ತಾಂ ಕ್ಷಣಿಕವಾಗಿಹುದು ॥
ಆರಯಲಿಕಿದು ತಾಂ ಬಹುತ್ವವ ।
ಸೇರಿಕೊಂಡಿಹುದೆಂದು ಯೋಗಾ ।
ಚಾರರೆನ್ನುವರಿದುವೆ ವರವಿಜ್ಞಾನವಾದವಲೆ ॥ ೪೪

ಆವುದನು ವಿಜ್ಞಾನವೆನ್ನುತ ।
ಭಾವಿಪರೊ ವಿಜ್ಞಾನವಾದಿಗ ।
ಳಾ ವಿಗಡವಸ್ತುವನು ವರವೇದಾಂತವಾದಿಗಳು ॥
ತಾವು ನೆರೆ ಪರಮಾತ್ಮನೆನ್ನುತ ।
ಭಾವಿಸುವರಾತ್ಮನಿಗೆ ಸಲ್ಲದು ।
ಸಾವು ಮೇಣು ಬಹುತ್ವವಾತನಭೇದನಾಗಿಹನು ॥ ೪೫

ಇದು ವಿಶೇಷವೆನುತ್ತ ಯತಿಪತಿ ।
ಮುದದೆ ಪೇಳಲು ಕೇಳಿ ಸೌಗತ ।
ರೊದವಿದತಿ ಸಂತೋಷದಿಂದಲೆ ಮಾರ್ಗವನು ಬಿಡಲು ॥
ಒದಗಿ ಬರುತರ್ಹತರು ದೇವಿಯ ।
ಸದನವನು ನೀಂ ಪೊಗುವುದೆಂತೈ ।
ಸದರಮಪ್ಪುದೆನುತ್ತ ತಡೆದರು ಯತಿಕುಲೋತ್ತಮನ ॥ ೪೬

ವರಯತಿಪ ಪೇಳಾವ ಶಬ್ದೋ ।
ತ್ತರದೆ ಜೈನಮತಾನುಯಾಯಿಗ ।
ಳೊರೆಯುವರು ತಾವಸ್ತಿಕಾಯವನಿದರ ವಿವರವನು ॥
ನೆರೆ ತಿಳುಹಿ ಸರ್ವಜ್ಞಪೀಠಕೆ ।
ತೆರಳು ನೀನೆನೆ ಕೇಳ್ದು ಶಂಕರ ।
ನೊರೆದನವರಿಗೆ ವಿಪುಲಸಂಭ್ರಮದಿಂದಲುತ್ತರವ ॥ ೪೭

ಜೀವಪಂಚಕಶಬ್ದದೊತ್ತಿಲಿ ।
ನೀವು ಪೇಳಿದ ಶಬ್ದವನು ಸಲೆ ।
ಠೀವಿಯಿಂದಿಡೆ ಜೈನಮತಸಮ್ಮತವು ತಾನೆನಲು ॥
ಆ ವಿಗಡ ವಾದಿಗಳು ಯತಿಕುಲ ।
ದೇವನನು ಕೊಂಡಾಡಿ ವರವಾ ।
ಗ್ದೇವಿಯಾಲಯಕಾಗ ಮಾರ್ಗವ ಕೊಟ್ಟು ತೆರಳಿದರು ॥ ೪೮

ಬಳಿಕ ಮೀಮಾಂಸಕರು ಯತಿಕುಲ ।
ತಿಲಕನಲ್ಲಿಗೆ ಬಂದು ನುಡಿಸಿದ ।
ರೆಲೆಯತಿಪ ನೀಂಪೇಳು ವರಜೈಮಿನಿಯ ಮತದೊಳಗೆ ॥
ಲಲಿತ ಶಬ್ದಗಳೇನು ಗುಣವೋ ।
ತಿಳಿಯಲವು ತಾವ್ದ್ರವ್ಯವೋ ಯೆನ ।
ಲೊಲಿದು ಮಾರುತ್ತರವನಿತ್ತನು ಯತಿಪನವದಿರಿಗೆ ॥ ೪೯

ಪರಮಜೈಮಿನಿಮತದೆ ಮಂತ್ರದ ।
ಲಿರುವ ಸಬ್ದಗಳೆಲ್ಲ ನಿತ್ಯಗ ।
ಳುರುತರವ್ಯಾಪ್ಯಗಳು ತಾವಾಗಿಹವು ಭಾವಿಸಲು ॥
ನಿರತವಾಪರಿಪರಿಯ ಶಬ್ದದ ।
ನೆರವಿ ನಿತ್ಯದ್ರವ್ಯಮೆಂದೆನೆ ।
ಶಿರವ ಬಾಗಿದರವರು ಯತಿಕುಲ ಸಾರ್ವಭೌಮನಿಗೆ ॥ ೫೦

ಇಂತು ಬಹುಮತವಾದಿನಿಚಯವು ।
ಕಂತುಹರನೆಡೆಗೈದಿ ನಿಜಮತ ।
ದಂತರಾರ್ಥವ ತಿಳಿದು ಯತಿ ಸರ್ವಜ್ಞನಹುದೆನುತ ॥
ಸಂತಸದೆ ಕೊಂಡಾಡಿ ತೆರಳೆ ನಿ ।
ರಂತರಾಯದೆ ಯತಿಪ ಶಿಷ್ಯರ ।
ನಂತರಿಂ ತೆಗೆಸಿದನು ದೇವ್ಯಾಲಯ ಕವಾಟವನು ॥ ೫೧

ಬಳಿಕ ಸಾರಸಚರಣನಾ ಯತಿ ।
ತಿಲಕಗಂಗೈಕೊಟ್ಟು ಮುಂದಕೆ ।
ನಲವಿನಿಂ ಕರೆತರುತಲಿರ್ದನು ಬಹುಳ ಭಕ್ತಿಯಲಿ ॥
ಅಲಘುಮಹಿಮಸುರೇಶ ಹಸ್ತಾ ।
ಮಲಕ ತೋಟಕರಾಗ ಬಿರುದಾ ।
ವಳಿಯ ಪೊಗಳಲು ಯತಿಕುಲಾಧಿಪನೈದಿದನು ಮುದದೆ ॥ ೫೨

ಬಂದು ದಿವ್ಯಾಸನದ ಕೆಲದಲಿ ।
ನಿಂದು ಭಾಷ್ಯದ ಪುಸ್ತಕಂಗಳ ।
ನೊಂದುಗೂಡಿಸಿ ದಿವ್ಯಪೀಠದೊಳಿಟ್ಟು ಕೈಮುಗಿದು ॥
ಬಂಧುರದ ಸರ್ವಜ್ಞಪೀಠವ ।
ಸಿಂಧುಧರನೇರುತಿರೆ ಪಂಡಿತ ।
ವೃಂದ ಕೇಳ್ವಂದದಲಿ ವಾಚಿಸಿದುದು ನಭೋನಿನದ ॥ ೫೩

ಏರದಿರು ಸರ್ವಜ್ಞಪೀಠವ ।
ನೇರುವೊಡೆ ಸರ್ವಜ್ಞತೆಯು ನೆರೆ ।
ಸೇರೆ ಸಾಲದು ಬಹುಳ ಪರಿಶುದ್ಧತೆಯು ಬೇಹುವಲೆ ॥
ಮಾರಕಲೆಗಳನರಿಯಲೋಸುಗ ।
ನಾರಿಯುರ ಸೇರುತ್ತ ಧರ್ಮವ ।
ಮೀರಿರುವ ನೀನರ್ಹನಲ್ಲೆಂದುದು ನಭೋನಿನದ ॥ ೫೪

ಎಂದು ಪೇಳಿದ ವಾಣಿ ವಾಣಿಯ ।
ದೆಂದು ತಿಳಿದನು ಬಳಿಕ ಸಂತಸ ।
ದಿಂದ ನುಡಿದನು ಶಾರದಾಂಬೆಯ ಕುರಿತು ಶಂಕರನು ॥
ಒಂದು ದೇಹದ ಕರ್ಮಫಲ ಮ ।
ತ್ತೊಂದು ದೇಹಕೆ ಘಟಿಸದೆಂಬುದು ।
ಸಂದ ಲೌಕಿಕ ಶಾಸ್ತ್ರದಿಂದಲೆ ಸಿದ್ಧವೆಂದೆನುತ ॥ ೫೫

ಇಂತೆನಲು ಲಾಲಿಸುತ ಸಂತಸ |
ವಾಂತು ಯತಿಕುಲತಿಲಕ ಪರಿಶು |
ದ್ಧಾಂತರಂಗನು ನೀನು ವರಸರ್ವಜ್ಞಪೀಠವನು ||
ಸಂತಸದೊಳೇರೆನುತ ಕಮಲಜ |
ಕಾಂತೆ ದಿವ್ಯಾಕಾರದಿಂದಲೆ |
ಕಂತುಮಥನಗೆ ತೋರಿ ನುಡಿದಳು ಮಧುರವಚನದಲಿ || ೫೬

ಮೇರುಶಿಖರವನಮೃತಕರ ತಾ |
ನೇರುವಂದದೆ ದಿವ್ಯಪೀಠವ |
ನೇರಿದನು ಶಶಿಮೌಳಿಯಾಗಲು ಶಿಷ್ಯಸಂದೋಹ ||
ಭೂರಿ ಬಿರುದಾವಳಿಯ ಪೊಗಳುತ |
ಪಾರಸಂಭ್ರಮದಿಂದಲಿರೆ ಗಂ |
ಭೀರ ಭೇರೀನಾದವೆಸೆದುದು ಗಗನ ದೇಶದಲಿ || ೫೭

ಧರೆಯನಾವರಿಸಿರ್ಪ ತಿಮಿರವ |
ಪರಿಹರಿಸುತಾ ಗಗನಮಧ್ಯದೆ |
ತರಣಿ ರಂಜಿಸಿ ದಿವ್ಯಕಿರಣವ ಹರಹುವಂದದಲಿ ||
ಪರಿಪರಿ ಯದುರ್ಮತಗಳೆಲ್ಲವ |
ಪರಿಹರಿಸಿ ಸುಜ್ಞಾನದೀಪ್ತಿಯ |
ಹರಹಿ ಶಂಕರನೆಸೆದನಾ ಸರ್ವಜ್ಞಪೀಠದಲಿ || ೫೮

ಸುರಪದಿಗ್ಭಾಗದಲಿ ರಂಜಿಸು |
ವರುಣವರ್ಣಚ್ಛವಿಯ ಮಧ್ಯದೆ |
ತರಣಿಮಂಡಲ ಶೋಭಿಸುತ್ತಿಹ ತೆರದೆ ಭಾವಿಸಲು ||
ಸುರುಚಿರದ ಪಾಟಲಸುವರ್ಣಾಂ |
ಬರದ ಮಧ್ಯದೆ ಯತಿಕುಲೇಶನ |
ವರಮುಖವು ಶೋಭಿಸಿತು ಸಲೆ ಸರ್ವಜ್ಞಪೀಠದಲಿ || ೫೯

ಕಿರಣಲಹರಿಯ ಕಾಂತಿಯಿಂದಲಿ ।
ತರಿತರಿದು ಗಾಢಾಂಧಕಾರವ ।
ತರಣಿ ನಿಜರಥಮಧ್ಯದೊಳು ನೆರೆ ಶೋಭಿಸಂದದಲಿ ॥
ವಿರಚಿಸಿದ ವರಸೂತ್ರಭಾಷ್ಯದ ।
ಕರದಿ ದುರ್ಮತಗಳನು ತರಿದಾ ।
ಪರಮಹಂಸನು ಮೆರೆದನಾ ಸರ್ವಜ್ಞಪೀಠದಲಿ ॥ ೬೦

ಎಂತು ಗಾರ್ಗ್ಯ ಕಹೋಲ ಮುಖ್ಯರ ।
ನಂತರಿಂ ಸಂಸ್ತುತ್ಯನಾಗುತ ।
ಕಂತುಹರಸಮತೇಜನಾ ವರಯಾಜ್ಞವಲ್ಕ್ಯಮುನಿ ॥
ಸಂತಸವ ತಳೆದಿರ್ದನಂತೀ ।
ಸಂತರಿಂ ಸಂಸ್ತುತ್ಯನಾಗಿಯೆ ।
ಕಂತುರಿಪು ಶೋಭಿಸಿದನಾ ಸರ್ವಜ್ಞಪೀಠದಲಿ ೬೧

ಸುರರು ಪೂಮಳೆಗರೆಯುತಿರ್ದರು ।
ಸುರರ ದುಂದುಭಿ ಮೊಳಗುತಿರ್ದುದು ।
ಸುರಮುನಿಗಳಭ್ರದಲಿ ಪೊಗಳುತಲಿರ್ದರತಿಶಯದೆ ॥
ಸುರಪಮುಖ್ಯಾಮರರು ಧರಿಣೀ ।
ಸುರರು ನೆರೆ ಕೊಂಡಾಡುತಿರ್ದರು ।
ಸುರನುತ ಶ್ರೀಕಂಠನಿರೆ ಸರ್ವಜ್ಞಪೀಠದಲಿ ॥ ೬೨

—ಸಂಧಿ ಮೂವತ್ತೇಳಕ್ಕೆ ಪದ್ಯ ೧೮೬೭ಕ್ಕೆ ಮಂಗಳ—

# ಮೂವತ್ತೆಂಟನೆಯ ಸಂಧಿ

ಸೂಚನೆ :— ಮುದದೆ ಶಿಷ್ಯವ್ರಜಕೆ ಕಾರ್ಯದ ।
ಹದನ ವಿಸ್ತರಿಸಿದನು ಯತಿಪತಿ ।
ಬದರಿಗೈತಂದಲ್ಲಿ ಭಾಷ್ಯವನೊಲಿದು ಬೋಧಿಸಿದ ॥

ಕೇಳು ಶೌನಕಮುನಿಪ ಕೀರ್ತಿವಿ ।
ಶಾಲನಹ ಶಂಕರಯತೀಶನ ।
ಲೀಲೆಯನು ಸರ್ವಜ್ಞಪೀಠದೊಳಿದ್ದು ಹರ್ಷದಲಿ ॥
ಫಾಲನೇತ್ರನು ವರಸುಧನ್ವ ನೃ ।
ಪಾಲನನು ಮನ್ನಿಸುತ ಸೇನಾ ।
ಜಾಲಸಹ ನಿಜಪುರಕೆ ನಡೆಯೆಂದಿತ್ತನಾಣತಿಯ ॥ ೧

ಚರಣಕೆರಗಿ ಸುಧನ್ವನಾ ಶಂ ।
ಕರಯತೀಶನ ಬೀಳುಕೊಂಡನು ।
ಪರಿಜನಂಗಳ ಕೂಡಿ ಸಾರ್ದನು ನಿಜನಿವಾಸವನು ॥
ವರಯತೀಶನ ದಿವ್ಯಲೀಲಾ ।
ಚರಿತೆಯನು ಕೊಂಡಾಡುತಿರ್ದಾ ।
ನರಪತಿಯು ತಾಂ ಬಳಿಕ ಪಡೆದನು ಸುರಪತಿಯ ಪದವ ॥ ೨

ಇತ್ತಲಾ ಸಂಯಮಿಯ ರೂಪಿನ ॥
ಕೃತ್ತಿವಾಸನು ತನ್ನ ವರಶಿ ।
ಷ್ಯೋತ್ತಮನನಾ ವಿಶ್ವರೂಪನನಧಿಕಹರ್ಷದಲಿ ॥
ಹತ್ತಿರಕೆ ಕರೆಯುತ್ತಲಾತನ ।
ನೆತ್ತಿಯಲಿ ಕರವಿಟ್ಟು ಲಾಲಿಸೆ ।
ನುತ್ತ ನುಡಿದನು ಸಕಲಶಿಷ್ಯರು ಕೇಳುವಂದದಲಿ ॥ ೩

ತುಂಗಭದ್ರಾನದಿಯ ತೀರದ |
ಶೃಂಗಗಿರಿಯೊಳು ಕಮಲಸಂಭವ |
ನಂಗನೆಯ ನೆಲೆಗೊಳಿಸಿ ರಚಿಸಿದ ದಿವ್ಯಮಠದೊಳಗೆ ||
ಅಂಗಜಾರಿಯ ಪೂಜಿಸುತ್ತು |
ತ್ತುಂಗಮುಹಿಮನೆ ನೀನು ಧರ್ಮ |
ಕ್ಕಂಗರಕ್ಷೆಯನೆಸಗುತಿರುವುದು ಲೋಕಹಿತಕಾಗಿ || ೪

ವರಸದಾಚಾರಪ್ರವರ್ತನೆ |
ಸುರುಚಿರದವರ್ಣಾಶ್ರಮೋಚಿತ |
ಪರಮಧರ್ಮಂಗಳನು ಮೇಣದ್ವೈತತತ್ವವನು ||
ಧರೆಯ ಜನತತಿಯರಿತು ತಾವತಿ |
ಹರುಷದಿಂ ವರ್ತಿಸುವ ತೆರದೊಳು |
ವರಸುರೇಶನೆ ನೀನು ಬೋಧಿಸುತಿಹುದು ಸಂತತವು || ೫

ಅಲ್ಲಿಗೈತಹ ಕವಿಜನಕ್ಕ |
ತ್ಯಲ್ಲಸದೊಳಾಶ್ರಯವ ನೀಯುತ |
ಸಲ್ಲಲಿತ ವೇದಾಂತಶಾಸ್ತ್ರವನವರದೆಸೆಯಿಂದ ||
ಎಲ್ಲ ನಾಡಿನೊಳುಳ್ಳ ಸಜ್ಜನ |
ರೆಲ್ಲರಿಗೆ ಬೋಧಿಸುತಲೀ ಜಗ |
ಕೆಲ್ಲ ನೀನಾಚಾರ್ಯನಾಗಿಯೆ ಪೂಜ್ಯನಾಗಿಹುದು || ೬

ಎಂದರುಹುತಾ ಬಳಿಕ ಕಾಶಿಯೊ |
ಳಂದು ವರವಿಶ್ವೇಶನಿತ್ತವು |
ಳೇಂದುಮೌಳೀಶಾಖ್ಯಲಿಂಗಗಳೈವರೊಳಗಾಗ ||
ಒಂದನಾತಂಗಿತ್ತು ನೀನಿದ |
ನಂದದಿಂ ಪೂಜಿಸುವುದೆನುತಾ |
ನಂದದಿಂ ಕರುಣಿಸಿದನಾತಗೆ ಬಾಲಶಶಿಮೌಳಿ || ೭

ಮಾರವೈರಿಯು ಬಳಿಕಲಾ ವರ |
ಸಾರಸಾಂಘ್ರಿಯ ಕರೆದು ನೀನಾ |
ದ್ವಾರಕಾಪುರದೊಳಗೆ ನಿಲ್ಲುತಲಲ್ಲಿ ಸಜ್ಜನಕೆ ||
ಸಾರತರ ವೇದಾಂತಶಾಸ್ತ್ರದ |
ಸಾರಮಹಿಮೆಯನರುಹೆನುತ್ತಾ |
ಮಾರಜಿಲ್ಲಿಂಗವನು ಕೊಟ್ಟನು ಬಹುಳ ಕರುಣದಲಿ || ೮

ಬಳಿಕಲಾ ಯತಿವರ್ಯ ಹಸ್ತಾ |
ಮಲಕನಂ ಕರೆಯುತ್ತ ಪೂರ್ವದ |
ಜಲನಿಧಿಯ ತೀರದೆ ಮಹೋನ್ನತಮಹಿಮೆಯನು ಪಡೆದು ||
ಸಲೆ ಜಗನ್ನಾಥಾಭಿಧೇಯುವ |
ತಳೆದ ಪರಮಕ್ಷೇತ್ರದೊಳು ನೀಂ |
ನೆಲೆಸುವುದು ಸದ್ಯಶವ ಪಡೆವುದು ಭರತಖಂಡದಲಿ || ೯

ಎಂದರುಹಿ ಶಶಿಮೌಳಿಲಿಂಗವ |
ನೊಂದನಾತಂಗಿತ್ತು ಬಳಿಕಾ |
ನಂದದಿಂದಾನಂದಗಿರಿಯನು ಕರೆದು ಕರುಣದಲಿ ||
ಒಂದು ಲಿಂಗವನಿತ್ತು ವರಬಾ |
ಲೇಂದುಧರ ಪೇಳಿದನು ಸಜ್ಜನ |
ವೃಂದದಿಂದೊಡಗೂಡಿ ಬದರಿಯ ಸಾರು ನೀನೆನುತ || ೧೦

ನೀವು ನಾಲ್ವರು ನಿಮಗೆ ಪೇಳಿಹ |
ಠಾವಿನಲಿ ನೆಲೆಸುತ್ತ ವರಧ |
ರ್ಮಾವಳಿಯ ರಕ್ಷಿಸುತಲಿರುವುದು ಬಹುಳ ವಿಭವದಲಿ ||
ಕಾವನನಿಶವು ನಿಮ್ಮ ವರರಾ |
ಜೀವನಾಭನೆನುತ್ತಲಾ ಕರು |
ಣಾವನಧಿ ಬೆಸೆಸುತ್ತ ಮತ್ತಿಂತೆಂದನವರೊಡನೆ || ೧೧

ಸಕಲವರ್ಣಾಶ್ರಮಸುಧರ್ಮ |
ಪ್ರಕಟನಾಕಾರ್ಯವನು ಕೈಕೊಂ |
ಡಕುಟಿಲತ್ವದೆ ನಡೆಯುತಲಿ ಸದ್ಧರ್ಮಸೇತುವನು ||
ಸುಕರವೆನೆ ಪಾಲಿಸುತ ಲೋಕ |
ಪ್ರಕಟಕೀರ್ತಿಯ ತಳೆದು ಸಜ್ಜನ |
ನಿಕರಕಾಶ್ರಯವಿತ್ತು ರಂಜಿಸುತಿಹುದು ಸಂತತವು || ೧೨

ದೇಶದೇಶದೆ ಚರಿಸಿ ನೀವುಪ |
ದೇಶಿಸುತ ಧರ್ಮವನು ಲೋಕಕೆ |
ದೇಶಿಕರು ನೀವೆನಿಸಿ ಪರಮಾದ್ವೈತತತ್ವವನು ||
ದೇಶದೇಶದೆ ಹರಡಿ ನಿಗಮೋ |
ದ್ದೇಶವನು ಪಾಲಿಸುತ ಸಂತತ |
ದೇಶಪಾಲಕರಿಂದ ಪಡೆವುದು ಸಕಲಮನ್ನಣೆಯ || ೧೩

ನಿಗ್ರಹಾನುಗ್ರಹದ ಶಕ್ತಿ ಸ |
ಮಗ್ರವಾಗಿರುತಿರಲಿ ನಿಮ್ಮ ಕ |
ರಾಗ್ರಜಾತರು ನೆರೆ ಪರಂಪರೆಯಿಂದ ರಂಜಿಸಲಿ ||
ಉಗ್ರಕರ್ಮರು ನಿಮ್ಮ ಜರಿವ ದು |
ರಾಗ್ರಹಿಗಳವದಿರನು ಶಿವನ |
ಭ್ಯಗ್ರದಲಿ ಶಿಕ್ಷಿಸಲಿ ಪೊರೆಯಲಿ ನಿಮ್ಮ ಶಿಷ್ಯರನು || ೧೪

ಎಲ್ಲಿ ಧರ್ಮಕ್ಕೂಣಯವು ಬಹು |
ದಲ್ಲಿಗಲ್ಲಿಗೆ ಗಮಿಸಿ ವಿಪ್ರರಿ |
ಗೆಲ್ಲ ಶಿಕ್ಷೆಯನಿತ್ತು ವರಧರ್ಮೋಪದೇಶದಲಿ ||
ಸಲ್ಲಲಿತಧರ್ಮವನು ಪೊರೆಯುವು |
ದೆಲ್ಲಿ ವಿಪ್ರರು ಧರ್ಮದಿಂದಿಹ |
ರಲ್ಲಿ ನೆಲಸಿಹವಖಿಳ ವರ್ಣಾಶ್ರಮ ಸುಧರ್ಮಗಳು || ೧೫




ಶಿಷ್ಯಚತುಷ್ಟಯಸಮೇತಶ್ರೀಶಂಕರಃ

ಧರಣಿಯುಳ್ಳನ್ನಬರ ನಿಮ್ಮರಿಯು |
ಕರಕಮಲಸಂಜಾತಪಾಠಂ |
ಪರೆಯು ಪರಮಾದ್ವೈತತತ್ವಾಮೃತವ ಬೋಧಿಸುತ ||
ಇರಲಿ ಶಾಶ್ವತಮಾಗಿ ಗೌರೀ |
ವರನು ಮನಸಾಭೀಷ್ಟವೆಲ್ಲವ |
ಕರುಣಿಸಲಿ ತಾನೆನುತ ಶಿಷ್ಯರ ಹರಸಿದನು ಯತಿಪ || ೧೬

ವರಯತಿಪನಾ ಬಳಿಕ ಶಿಷ್ಯರ |
ನೆರವಿಯನು ನೋಡುತ್ತಲವರೊಳು |
ವರಚಿದಂಬರದಿಂದ ಬಂದಿಹ ವಿಪ್ರನೊಬ್ಬನನು ||
ಕರೆದು ನೀನೀ ಚಂದ್ರಮೌಳೀ |
ಶ್ವರಸುಲಿಂಗವ ವಂಶಪಾರಂ |
ಪರೆಯೊಳತಿಭಕ್ತಿಯಲಿ ಪೂಜಿಪುದೆನುತ ಕರುಣಿಸಿದ || ೧೭

ಬಳಿಕಲಾ ಯತಿವರ್ಯ ಶಿಷ್ಯರ |
ಬಳಗದಿಂದೊಡಗೂಡಿ ಬೇಳ್ಕೊಂ |
ಡಲಘುತರ ಕಾಶ್ಮೀರದೇಶವ ಮುಂದೆ ಪಯಣವನು ||
ಬೆಳಸಿ ಬಂದನು ಬಾದರಾಯಣ |
ನೊಲವಿನಿಂ ತಪಗೈವ ಪುಣ್ಯ |
ಸ್ಥಳವೆನಿಪ ಹಿಮಶೈಲದೊತ್ತಿನ ಬದರಿಕಾಶ್ರಮಕೆ || ೧೮

ಪುಣ್ಯಮಯತರುಗಳನು ಮತ್ತಾ |
ಪುಣ್ಯತೀರ್ಥಂಗಳನು ಬಹುವಿಧ |
ಪುಣ್ಯಮೃಗಸಂಚಯುವ ನೋಡಾಪೂರ್ವಪುಣ್ಯದಲಿ ||
ಪುಣ್ಯವಂತರ ನೆರವಿ ಬರೆ ಬಹು |
ಪುಣ್ಯವಂ ಕರುಣಿಸುವ ವರನೈ |
ಪುಣ್ಯತೆಯ ನಾಂತಿರುವ ಪುಣ್ಯಕ್ಷೇತ್ರ ರಂಜಿಸಿತು || ೧೯

ಇಂತೆಸೆವ ವರಬದರಿಕಾಶ್ರಮ ।
ಕಂತಕಾಂತಕನೈದಿ ಶಿಷ್ಯರ ।
ಸಂತರಿಂದೊಡಗೂಡಿ ಪುಣ್ಯಕ್ಷೇತ್ರಗಳ ಚರಿಸಿ ॥
ಸಂತಸದೊಳಲ್ಲಿರುವ ಜನರಿಗ ।
ನಂತಸದ್ಗತಿಯೀವ ವರವೇ ।
ದಾಂತತತ್ವಾಮೃತವ ಕರುಣಿಸುತಿರ್ದನೊಲವಿನಲಿ ॥ ೨೦

ಧರೆಯ ಜನರನು ಪೊರೆಯಲೋಸುಗ ।
ವರಪತಂಜಲಿಮುನಿಪ ಪೂರ್ವದಿ ।
ಕರುಣಿಸಿದ ವರಯೋಗಮಾರ್ಗವನತುಲಭಕ್ತಿಯಲಿ ॥
ನಿರತವನುಸರಿಸಿರ್ಪ ಮುನಿಗಳ ।
ವರಯುತಿಪ ಕಾಣುತ್ತಲವರಿಗೆ ।
ಕರುಣಿಸಿದನದ್ವೈತತತ್ವಾಮೃತವ ಹರುಷದಲಿ ॥ ೨೧

ಬಳಿಕ ಬದರೀಕ್ಷೇತ್ರವನು ತಾ ।
ಸುಳಿದು ಮುಂದುತ್ತರಕೆ ಸಂಯಮಿ ।
ಕುಲತಿಲಕನೈತರುತಲಾ ಕೇದಾರವೆಂದೆಂಬ ॥
ಅಲಘುತರ ಸುಕ್ಷೇತ್ರಕೈತರು ।
ತೊಲವಿನಿಂ ಕೇದಾರನಾಥನ ।
ಲಲಿತಪದಪಂಕೇರುಹಂಗಳನರ್ಚಿಸಿದನಾಗ ॥ ೨೨

ಇಂತು ವರಕೇದಾರನಾಥನ ।
ಸಂತಸದೊಳರ್ಚಿಸುತ ರಜನೀ ।
ಕಾಂತಶೇಖರನಿರಲು ವರಹಿಮಗಿರಿಯತಪ್ಪಲಲಿ ॥
ಸಂತತವು ಸುರಿಯುತ್ತಲಿಹ ಹಿಮ ।
ಸಂತತಿಯ ತಾವ್ತಡೆಯಲಮ್ಮದ ।
ನಂತಮುಹಿಮನ ಶಿಷ್ಯರುರೆ ಮುಳುಗಿದರು ಚಳಿಯೊಳಗೆ ॥ ೨೩

ಬರಿಯ ಹಿಮತುಂಬಿಹುದು ನೋಡಾ |
ತರಣಿಕಿರಣವು ಜಲಜವೈರಿಯ |
ಕಿರಣರೆಂದೊಲು ಶೈತ್ಯವನು ಬೀರುವುದಗ್ನಿಯಾ ಸ್ಥಳದೆ ||
ಉರಿಯಲಮ್ಮನು ಗಾಳಿ ತಂಪನು |
ಬೆರೆದುಕೊಂಡಿಹುದಲ್ಲಿ ದೇಹದ |
ನರಗಳೆಲ್ಲವು ಸೆಡೆದುಕೊಂಡವು ಚಳಿಯ ದಾಳಿಯುಲಿ || ೨೪

ಮೇಲೆ ಕವಿವುದು ಹಿಮವು ಧರಣಿಯು |
ಮೇಲೆ ಕಾಲಿಡೆ ಹಿಮ ತಗಲುತಂ |
ಗಾಲು ಬೆಂಡಾಗುವುದು ಸುತ್ತಲು ಬೀಸುತೈತರುವ ||
ಗಾಳಿಯಾಗಲು ಹಿಮತುಷಾರವ |
ಮೇಲೆಮೇಲೆರಚುತ್ತಲಿರೆ ಕೈ |
ಕಾಲುಗಳು ನಡನಡಗುತಿರ್ದವು ಚಳಿಯ ಹೊಡೆತದಲಿ || ೨೫

ಒಡಲಿನಲಿ ತಂಪೇರುತಿರ್ದುದು |
ಪೊಡೆಯೊಳಗ್ನಿಯು ಶೈತ್ಯವಾಂತುದು |
ಗಡಗಡನೆ ನಡಗುತ್ತಲಿರ್ದವು ತುಟಿಗಳೆಡೆವಿಡದೆ ||
ಸೆಡೆಯೆ ಕೈಕಾಲುಗಳು ಮುಂದ |
ಕ್ಕಡಿಯಿಡಲಿಕವಕಾಶವಿಲ್ಲದೆ |
ಮೃಡನಮುನಿಯ ನೆನೆಯುತ್ತ ಲಿರ್ದುದು ಶಿಷ್ಯಸಂದೋಹ || ೨೬

ಸಾರಸಾಂಘ್ರಿಪ್ರಮುಖರೀ ಪರಿ |
ಪಾರವಿಲ್ಲದ ಚಳಿಯ ಹೊಡೆತಕೆ |
ಧಾರಿಣಿಯ ಮೇಲೊರಗಿಕೊಂಡಿಹ ಹದನನಾ ಕ್ಷಣವೆ ||
ಮಾರವೈರಿಯು ಕಂಡು ಕರುಣಾ |
ವಾರಿನಿಧಿಯೆಂದಿನಿಪ ವರಕೇ |
ದಾರನಾಥನ ಬೇಡುತಿರ್ದನು ಬಹುಳ ಭಕ್ತಿಯುಲಿ || ೨೭

ದೇವದೇವವಯಾವಸಧಿ ಭ ।
ಕ್ತಾವಲಂಬನ ಪರಮಪಾವನ ।
ಭಾವಜಾಂತಕ ಪಾವಕಾಂಬಕ ಪತಿತಪಾವನನೆ ॥
ಪಾವನಾಂಘ್ರಿದ್ವಯವ ನಂಬಿಹ ।
ಸೇವಕರಿನಿಂದೊಲಿದು ವರಕರು ।
ಣಾವಲೋಕನದಿಂದ ಪೊರೆವುದು ಭಕ್ತನಿಚಯವನು ॥ ೨೮

ಅಕ್ಷಯಾತ್ಮನೆ ನೀನು ನಿಜನಿಟ ।
ಲಾಕ್ಷಿಯೊಳಗಗ್ನಿಯನು ಧರಿಸುತ ।
ಕುಕ್ಷಿಯೊಳು ನೀನಗ್ನಿರೂಪವಧರಿಸಿ ಜೀವಿಗಳು ॥
ಭಕ್ಷಿಸುವ ವಸ್ತುಗಳ ಜೀರ್ಣಿಸಿ ।
ರಕ್ಷಿಸುವೆ ನಿನಗೀಗ ಭಕ್ತರ ।
ರಕ್ಷಿಸುವುದೇನರಿದೆ ಕೃಪೆಮಾಡೆಂದನಾ ಯತಿಪ ॥ ೨೯

ಭೀಕರದ ಹಿಮಬಾಧೆಯಿಂದಲಿ ।
ಸೋಕುತಿದೆ ಬಲುಮೃತ್ಯುವಿದೊ ಜಗ ।
ದೇಕನಾಥನೆ ನೀನದೇತಕುಪೇಕ್ಷೆಯಿಂದಿರುವೆ ॥
ಶೋಕವನು ಕರುಣಿಸುತ ಭಕ್ತರ ।
ನೇಕರನು ಪೊರೆಯೆನುತ ವರಲೋ ।
ಕೈಕನಾಥನ ಬೇಡಿಕೊಂಡನು ಯತಿಕುಲಾಧಿಪನು ॥ ೩೦

ಯತಿಪನೀ ಪರಿ ಬೇಡುತಿರೆ ಪಶು ।
ಪತಿಯು ಕಾರುಣ್ಯದಲಿ ತನ್ನಯ ।
ಪತಿತಪಾವನವೆನಿಪ ಪಾದಪಯೋಜಯುಗ್ಮದಲಿ ॥
ಅತಿಶಯೋಷ್ಣಾಂಬುವನು ಸೃಜಿಸುತ ।
ಹಿತದೆ ಕಳುಹಿಸಲಾಗ ಭಕ್ತ ।
ಪ್ರತತಿಯಿರ್ಪೆಡೆಗಾಗಿ ಹರಿತರುತಿರ್ದುದಾ ತೊರೆಯು ॥ ೩೧

ಫಾಲನೇತ್ರದೊಳೊಗೆದ ಪರಮವಿ |
ಶಾಲಜಲಬಿಂದುಗಳು ನದಿಯನು |
ಪ್ರೋಲುವಂದದೆ ಬರುತಲಿಹವೆಂದೆಂಬ ರೀತಿಯಲಿ ||
ಹೇಳಲರಿದೆನಿಪುಷ್ಣಭಾವವ |
ತಾಳಿಕೊಂಡಿಹ ಜಲವು ತಾಂ ನಿಜ |
ಲೀಲೆಯಿಂದೈತಂದು ನಿಂದುದು ಸರಸಿಯಂದದಲಿ || ೩೨

ಸಾರಸಾಂಘ್ರಿಪ್ರಮುಖರಾ ಬಿಸಿ |
ನೀರು ಸೋಂಕಿದ ಮಾತ್ರದಿಂದ ಕ |
ಠೋರತರ ಹಿಮಬಾಧೆಯಿಂ ಬಿಡುಗಡೆಯ ಪೊಂದುತಲೆ ||
ಪಾರವಿಲ್ಲದ ಪರಮಸಂಭ್ರಮ |
ತೋರುತಿರೆ ಹೃದಯದಲಿ ತಮ್ಮ ಶ |
ರೀರವತಿಲಘುವಾಗೆ ಬಂದೆರಗಿದರು ಗುರುವರಗೆ || ೩೩

ನರರು ಕೇದಾರಪ್ರದೇಶಕೆ |
ಬರಲು ಹಿಮಬಾಧೆಯನು ನೆರೆ ಪರಿ |
ಹರಿಸಿಕೊಳ್ಳಲು ದಿವ್ಯತಪ್ತೋದಕದ ಕುಂಡವಿದು ||
ಇರಲಿ ಶಾಶ್ವತಮಾಗಿ ತಾನೀ |
ಧರೆಯೊಳೆನ್ನುತ ಯತಿಕುಲಾಂಬುಜ |
ತರಣಿ ನೇಮಿಸಲಿರುವುದೀಗಲು ತತ್ಸರೋವರವು || ೩೪

ವರಯತಿಪ ಶಂಕರನ ಕೀರ್ತಿಯು |
ಧರೆಯೊಳಗೆ ವಿಸ್ತರವ ಪೊಂದಿದ |
ತೆರದೊಳಿಹ ವರತಪ್ತತೋಯದ ಸರಸಿಯನು ಕಂಡು ||
ವರಸುರೇಶಪ್ರಮುಖಶಿಷ್ಯರು |
ಪರಿಪರಿಯ ವಿಧದಿಂದ ತಮ್ಮಯ |
ಗುರುವರಶ್ರೀಕಂಠದೇವನ ನುತಿಸಿದರು ಮುದದೆ || ೩೫

—: ಸಂಧಿ ಮೂವತ್ತೆಂಟಕ್ಕೆ ಪದ್ಯ ೧೯೦೨ ಕ್ಕೆ ಮಂಗಳ :—

# ಮೂವತ್ತೊಂಭತ್ತನೆಯ ಸಂಧಿ

ಸೂಚನೆ :— ಯತಿತನವ ಬೀಳ್ಕೊಂಡು ನಿಜಪಶು ।
ಪತಿತನವ ಕೈಕೊಂಡು ಗಿರಿಜಾ ।
ಪತಿಯು ಕೈಲಾಸಾದ್ರಿಗೈದಿದನತುಲವಿಭವದಲಿ ॥

ಕೇಳು ಶೌನಕಮುನಿಪ ಶಂಕರ ।
ಲೀಲೆಯನು ನಿಜಶಿಷ್ಯವರ್ಗವ ।
ಪಾಲಿಸಲು ವರತಪ್ತತೋಯದ ಕುಂಡವನು ರಚಿಸಿ ॥
ಕಾಲವನು ಕಳೆಯುತ್ತಲಿರಲಾ ।
ಶೂಲಪಾಣಿಯು ಮನುಜರೂಪವ ।
ತಾಳಿ ಮೂವತ್ತೆರಡು ವತ್ಸರವಾಯ್ತು ಧರೆಯೊಳಗೆ ॥ ೧

ಒಂದುದಿನ ಶಂಕರನು ಶಿಷ್ಯರ ।
ವೃಂದದಿಂದೊಡಗೂಡಿ ಸಂಭ್ರಮ ।
ದಿಂದ ವರವೇದಾಂತಶಾಸ್ತ್ರವ ಬೋಧಿಸುತಲಿರಲು ॥
ಬಂದನಲ್ಲಿಗೆ ಸಕಲಸುರಮುನಿ ।
ವೃಂದದಿಂದೊಡಗೂಡಿ ಕಮಲದ ।
ಕಂದನಾ ಯತಿಪತಿಯ ದರ್ಶನಕೆಂದು ಹರ್ಷದಲಿ ॥

ಸುರಪನೈತಂದನು ಧನೇಶ್ವರ ।
ವರುಣಯಮರೊಡಗೂಡಿ ಗಂಗಾ ।
ಧರನ ದರ್ಶನಕಾಗಿ ಕಮಲಜನೊಡನೆ ಭಕ್ತಿಯಲಿ ॥
ವರಯತಿಪನವರುಗಳ ಕಾಣುತ ।
ಪರಮಸಂತೋಷವನು ತಳೆದಾ ।
ಸರಸಿಜೋದ್ಭವ ಮುಖ್ಯರನು ಸನ್ಮಾನಿಸಿದನಾಗ ॥ ೩

ದೇವಕುಲಪೂಜಿತರು ನೀವಾ |
ದೇವರನು ಪೂಜಿಸುವ ಕಿಂಕರ |
ರಾವು ನಿಮ್ಮಯ ಚರಣದರ್ಶನದಿಂದ ಧನ್ಯರಲೆ ||
ಆವ ವಿಧದಿಂದೆನ್ನ ಕರುಣಿಸೆ |
ನೀವು ಬಿಜಯಂಗೈದಿರೆನೆ ರಾ |
ಜೀವಸಂಭವನಾಗ ನುಡಿದನು ಕರಗಳನು ಮುಗಿದು || ೪

ದೇವದೇವನೆ ನೀನು ವರಭೂ |
ದೇವಕುಲವನು ಪೊರೆಯ ಬೇಕೆನು |
ತಾವು ದೈನ್ಯದಿ ಬೇಡುತಿರಲದನೊಲಿದು ಕೈಕೊಂಡು ||
ಪಾವನತೆಯಾಂತಿರುವ ವರಭೂ |
ದೇವಕುಲದಲಿ ಜನಿಸಿ ಕೃಪೆಯಿಂ |
ದೋವಿದೈ ಜಗವಿದನು ಲಾಲಿಸು ಬಿನ್ನಪವನೀಗ || ೫

ಕರುಣದಿಂದವತರಿಸಿ ಧರೆಯನು |
ಪೊರೆದ ಕಾರ್ಯವಿದಾಯ್ತು ಧರೆಯೊಳ |
ಗುರುತರದ ಸದ್ಧರ್ಮ ನೆಲಸಿತು ಮುಂದೆ ಧರ್ಮವನು ||
ನೆರೆ ಪೊರೆಯೆ ವರಶಿಷ್ಯರಿಹರೀ |
ಪರಿಯ ಚಿತ್ತಕೆ ತಂದು ರಜತದ |
ಗಿರಿಗೆ ನೀಂ ದಯಗೈಯ ಬೇಕೆಂದಜನು ಕೈ ಮುಗಿದ || ೬

ಸುರಪಮುಖ್ಯಾಮರರು ಸಂಯಮಿ |
ವರನ ಚರಣಕ್ಕೆರಗಿ ಶಿರದೊಳು |
ಕರಪುಟಾಂಜಲಿ ಮೆರೆಯೆ ನಿಲ್ಲುತಲತುಲ ಭಕ್ತಿಯಲಿ ||
ಕರುಣಿ ಬಿಜಯಂಗೈದು ಭಕ್ತರ |
ಪೊರೆಯ ಬೇಹುದೆನುತ್ತ ಮೊರೆಯಿಡೆ |
ಹರನು ಕರುಣಾಲೋಕದಿಂದಮರರನು ಕಳುಹಿದನು || ೭

ಅಮಿತಕರುಣಾಸಿಂಧು ಬಳಿಕಾ |
ಪ್ರಮುಖಶಿಷ್ಯರನೆಲ್ಲ ಕರೆಯುತ |
ನಿಮಗೆ ಪೇಳಿಹೆ ಸಕಲವಿಷಯವನಿನ್ನು ನೀವೆಲ್ಲ ||
ಗಮಿಸುವುದು ನಿಮಗಾನು ಪೇಳಿಹ |
ವಿಮಲಸುಸ್ಥಳಗಳಿಗೆ ಧರ್ಮವ |
ಮಮತೆಯಿಂ ಪಾಲಿಸುತಲಿರುವುದು ವಿಪುಲಭಕ್ತಿಯಲಿ || ೮

ಆಗಲಿದೆನು ನಾನೆಂದು ಚಿತ್ತಕೆ |
ಬಗೆಯದಿರಿ ನಿಮ್ಮವನು ನಾನೆಂ |
ದಗಲಲಮ್ಮೆನು ನೀವು ನೆಲಸಿರ್ಪೆಡೆಗಳಲ್ಲಿಹೆನು ||
ನಿಗಮಮತವನು ಪೊರೆಯುತಿರಲಾ |
ನಿಗಮವಂದ್ಯನು ಪೊರೆವನೆಂದಾ |
ನಗವಿರೋಧಿಪ್ರಮುಖವಂದಿತಚರಣನುಸುರಿದನು || ೯

ಎಂದು ಪೇಳುತಲಿರಲು ವರಬಾ
ಲೇಂದುಶೇಖರನೆಡೆಗೆ ಸಮ್ಮುದ |
ದಿಂದಲತ್ರಿಯಪುತ್ರನೆನಿಸುವ ದತ್ತಮುನಿವರನು ||
ಬಂದು ಸಂಪ್ರೀತಿಯಲಿ ಯತಿಪನ |
ನಂದದಿಂ ಬಿಗಿಯಪ್ಪಿ ನಿಜಕರ |
ದಿಂದಲಾತನ ಕರವ ಪಿಡಿದೈದಿದನು ಗುಹೆಯೆಡೆಗೆ || ೧೦

ಬಂದು ಗುಹೆಯಾದ್ವಾರದೇಶದೊ |
ಳಿಂದುಧರ ತಾ ನಿಂದು ಶಿಷ್ಯರ |
ವೃಂದವಂ ನೋಡುತ್ತ ನುಡಿದನು ಮಧುರವಚನದಲಿ ||
ಇಂದು ನಾಂ ಪೊರಡುವೆನು ಸಮ್ಮುದ |
ದಿಂದ ನೀವುಗಳೆಲ್ಲ ನಿಮಗಾ |
ನಂದು ಪೇಳಿದ ತೆರದಿ ತೆರಳುವುದೆಂದು ವಿನಯದಲಿ || ೧೧



ಶ್ರೀಮದುಮಾಶಂಕರಃ

ಶಾಂತಂ ಪದ್ಮಾಸನಸ್ಥಂ ಶಶಿಧರಮುಕುಟಂ ಪಂಚವಕ್ತ್ರಂ ತ್ರಿನೇತ್ರಂ ।
ಶೂಲಂ ವಜ್ರಂ ಚ ಖಡ್ಗಂ ಪರಶುಮಭಯದಂ ದಕ್ಷಭಾಗೇವಹಂತಮ್॥
ನಾಗಂ ಪಾಶಂ ಚ ಘಂಟಾಂ ಪ್ರಳಯಹುತವಹಂ ಸಾಂಕುಶಂ ವಾಮಭಾಗೇ।
ನಾನಾಲಂಕಾರಯುಕ್ತಂ ಸ್ಫಟಿಕಮಣಿನಿಭಂ ಪಾರ್ವತೀಶಂ ನಮಾಮಿ ॥

ಅರುಹುತೀ ಪರಿಯತ್ರಿಜಾತನ |
ಕರವ ಪಿಡಿದಲ್ಲಿಂದ ಮುಂದಕೆ |
ತೆರಳಿ ಗುಹೆಯೊಳಪೊಗುತಲೀರ್ವರದೃಶ್ಯರಾಗಿರಲು ||
ಸರಸಿಜಾಂಘ್ರಿಪ್ರಮುಖಶಿಷ್ಯರು |
ಗುರುವರನು ಕಾಣದಿರೆ ಮನದಲಿ |
ಮರುಗುತಿರಲಾಗಸದೆ ಕೇಳಿದುದಾ ಮಹಾನಿನದ || ೧೨

ಮರುಗದಿರಿ ಮರುಗದಿರಿ ಶಿಷ್ಯರು |
ವರಯತೀಶನು ಗುಹೆಯ ಪೊಗಲಾ |
ವರವಿರಿಂಚಿಪ್ರಮುಖಸುರರೈತಂದು ಭಕ್ತಿಯಲಿ ||
ಚರಣಕೆರಗಿದರಾಗ ವಿಘ್ನೇ |
ಶ್ವರನು ಗುಹ ನಂದೀಶ ಮುಖ್ಯರ |
ನೆರವಿಯೈತಂದೆರಗುತಿರ್ದುದು ಹರನ ಚರಣದಲಿ || ೧೩

ಯತಿತನವ ತಾನುಳಿದು ಗಿರಿಜಾ |
ಪತಿತನವ ತಾ ತಳೆದು ವರಪಾ |
ರ್ವತಿಯು ಸಹಿತೇರುತ್ತ ನಂದೀಶ್ವರನನಾ ಬಳಿಕ ||
ಅತಿಶಯದ ವಿಭವದಲಿ ಮಹದು |
ನ್ನತದ ಕೈಲಾಸವನು ವರಪಶು |
ಪತಿಯು ಸಾರ್ದನೆನುತ್ತ ವಾಚಿಸಿದುದು ನಭೋನಿನದ || ೧೪

ಎಂದು ಪೇಳ್ದಾಗಸದ ನುಡಿಯು ಸ
ನಂದನಾದಿಗಳೆಲ್ಲ ಲಾಲಿಸು |
ತಿಂದುಧರನೊಳಪೊಕ್ಕ ಗುಹೆಯಾ ದ್ವಾರಕೈತಂದು ||
ವಂದಿಸುತ ತದ್ವಾರದೇಶಕೆ |
ನಿಂದು ಕರಗಳ ಮುಗಿದು ಬಳಿಕಾ |
ನಂದದಿಂ ತೆರಳಿದರು ಗುರುವರನಾಜ್ಞೆಯಾದಂತೆ || ೧೫

ವರಸುರೇಶನು ಶೃಂಗಗಿರಿಗಾ |
ಸರಸಿಜಾಂಘ್ರಿ ದ್ವಾರಕಾಪುರಿ |
ಗೊರೆವುದೇನಾ ತೋಟಕಾರ್ಯನು ಬದರಿಕಾಶ್ರಮಕೆ ||
ತೆರಳೆ ಹಸ್ತಾಮಲಕನಾಗಲು |
ವರಜಗನ್ನಾಥವನು ಸಾರ್ದನು |
ಗುರುವಿನಾಜ್ಞೆಯ ಸಲಿಸುತಿರ್ದರು ಶಿಷ್ಯರನುದಿನವು || ೧೬

ಇದು ಶುಭಪ್ರದವಿದು ಸುಖಪ್ರದ |
ವಿದುವೆ ಪರಮಾದ್ವೈತತತ್ವ |
ಪ್ರದವಿದನು ಲಾಲಿಸಲು ವರಪುರುಷಾರ್ಥ ಸಿದ್ಧಿಪುದು ||
ಇದನು ಪಠಿಸುವ ಪುಣ್ಯವಂತರ |
ಮದನಹರನಿಷ್ಟಾರ್ಥವೀಯುತ |
ಮುದದೆ ರಕ್ಷಿಪನೆನುತ ನುಡಿದನು ಸೂತನೊಲವಿನಲಿ || ೧೭

ಎಂದು ಸೂತನು ಪೇಳ್ದ ಚರಿತೆಯ |
ನಂದು ಲಾಲಿಸಿ ಸಕಲ ಸನ್ಮುನಿ |
ವೃಂದವಾತನಿಗೆರಗಿ ಸತ್ಕರಿಸಿದರು ಭಕ್ತಿಯಲಿ ||
ಇಂದುಮೌಳಿಯ ಚರಿತೆಯನು ಸಾ |
ನಂದದಿಂ ವಿವರಿಸಿದ ಬಳಿಕಾ |
ಸಂದ ಪೌರಾಣಿಕನು ನಡೆದನು ನಿಜನಿಕೇತನಕೆ || ೧೮

ಜಲಜಪಾದನು ಮೇಣು ಹಸ್ತಾ |
ಮಲಕ ತೋಟಕರೆಂಬ ಮೂವರು |
ನೆಲಸಿ ಗುರುವರ ತಮಗೆ ನೇಮವನಿತ್ತ ದೇಶದಲಿ |
ಹಲವು ವರ್ಷಗಳಿದ್ದು ನಿಜಕರ |
ಜಲಜಸಂಜಾತರನು ಪೀಠದೆ |
ನೆಲೆಗೊಳಿಸುತಾ ಬಳಿಕ ಪಡೆದರು ಮೋಕ್ಷಪದವಿಯನು || ೧೯

ವರಸುರೇಶ್ವರನೊಲಿದು ತುಂಗಾ |
ವರನದೀತೀರದಲಿ ಶೋಭಿಪ |
ಪರಮಪುಣ್ಯಕ್ಷೇತ್ರವೆನಿಸುವ ಶೃಂಗಗಿರಿಯೊಳಗೆ ||
ಸರಸತಿಯ ವರಚಂದ್ರಮೌಳೀ |
ಶ್ವರನ ಗುರುಶಂಕರನ ಲಂಬೋ |
ದರನ ಪೂಜಿಸುತಿರ್ದನುನ್ನತಭಕ್ತಿಭಾವದಲಿ || ೨೦

ವಿಹಿತದಿಂದದ್ವೈತತತ್ವದ |
ಮಹಿಮೆಯನು ವಿವರಿಸುತ ಸಂತತ |
ಬಹುಜನಂಗಳಿಗೊಲಿದು ಬೋಧಿಸಿ ಸೂತ್ರಭಾಷ್ಯವನು ||
ಮಹಿಯೊಳೇಳ್ನೂರಬುದು ಪರಿಯಂ |
ತಹತಸಂಭ್ರಮದಿಂದಲಿರುತಿ |
ರ್ದಹಿಮಕರಸಂದದಲಿ ತೇಜವ ಹರಹಿದನು ಧರೆಗೆ || ೨೧

ಇಳೆಯೊಳಗೆ ಧರ್ಮವನು ಶಾಶ್ವತ |
ಗೊಳಿಸಿ ವರವೇದಾಂತಮತವನು |
ನೆಲೆಗೊಳಿಸುತಾಚಂದ್ರತಾರಕಮಾದ ಕೀರ್ತಿಯನು |
ಗಳಿಸಿ ವರಶಾರದೆಯ ಪೀಠದೆ |
ನಿಲಿಸುತುತ್ತಮಶಿಷ್ಯನೊಬ್ಬನ |
ನಳಿನಸಂಭವಪುರವನೈದಿದನಾ ಸುರೇಶ್ವರನು || ೨೨

ಯತಿಸುರೇಶನ ಶಿಷ್ಯ ಬಹುಸಂ |
ಮತದಿ ಧರ್ಮವ ಪೊರೆದು ನಿರ್ಮಲ |
ಮತಿಯೆನಿಪ ಶಿಷ್ಯನನು ಸಂಸ್ಥಾನದಲಿ ನೆಲೆಗೊಳಿಸೆ ||
ಯತಿಪರಂಪರೆಯಿಂತು ಗಿರಿಜಾ |
ಪತಿಯ ದಯೆಯಿಂ ಬೆಳೆದು ಬರುತೀ |
ಕ್ಷಿತಿಯೊಳುತ್ತಮಯಶವ ಪಡೆಯುತ್ತಿರುವುದಿನ್ನೆಬರ || ೨೩

ಈ ಪರಂಪರೆಯೊಳಗೆ ಸಂಪಿ |
ದ್ರೂಪಸಪರಬ್ರಹ್ಮರೂಪಿನ |
ತಾಪಸೋತ್ತಮನೆನಿಪ ವಿದ್ಯಾರಣ್ಯಯತಿವರನು |
ಔಪನಿಷದರ ಸಲಹಿ ತನ್ನಿಂ |
ದಾಪನಿತು ಭಾಷ್ಯಗಳ ವಿರಚಿಸು |
ತಾ ಪವಿತ್ರಾಸನದೆ ಶೋಭಿಸುತಿರ್ದನೊಲವಿನಲಿ || ೨೪

ಬಳಿಕಲಲ್ಲಿಂ ಮುಂದೆ ಯತಿಕುಲ |
ತಿಲಕರೀ ಶಾರದೆಯ ಪೀಠದೆ |
ನೆಲಸಿ ಪರಮಾದ್ವೈತತತ್ವಾಮೃತವ ಬೋಧಿಸುತ ||
ಅಲಸದತಿಧರ್ಮದಲಿ ರಾಜ್ಯವ |
ಸಲಹುತಿಹ ನೃಪತಿಗಳ ದೆಸೆಯಿಂ |
ಹಲವು ಮನ್ನಣೆಗಳನು ಪಡೆಯುತಲಿಹರು ವಿಭವದಲಿ || ೨೫

ವರಯತಿಪ ಶಂಕರನ ಕರುಣದೆ |
ಧರೆಯ ಸದ್ಧರ್ಮದಲಿ ಪಾಲಿಪ |
ನರಪ ನಾಲ್ವಡಿಕೃಷ್ಣಭೂಪನು ವಿಪುಲಭಕ್ತಿಯಲಿ ||
ನಿರತ ಪೂಜಿಸುತಿರಲು ಸಂಭ್ರಮ |
ವೆರಸಿ ಶೃಂಗೇರಿಯಲಿ ಶಂಕರ |
ಗುರು ಪರಂಪರೆ ರಂಜಿಸುತ್ತಿಹುದಿಂದು ಪರಿಯಂತ || ೨೬

ಇಂತು ಶಂಕರದಿವ್ಯಚರಿತೆಯ |
ಕಂತುರಿಪು ಶಂಕರನು ಕರುಣಿಸಿ |
ದಂತೆ ವಿರಚಿಸುತಾನು ಶಂಕರಚರಣಕರ್ಪಿಸಿದೆ ||
ಶಾಂತಮಾನಸರಾದ ಸದ್ಗುಣ |
ವಂತರೀ ಕೃತಿಯೊಳಗೆ ದೋಷಾ |
ನಂತವನು ಭಾವಿಸದೆ ಪಠಿಪುದು ಲೇಸ ಸಂಚಿಪುದು || ೨೭

ಓದಿ ಕಲಿತುದಿದಲ್ಲ ಕವಿತೆಯು |
ಹಾದಿ ಪರಿಚಯವಿಲ್ಲ ಯತಿವರ |
ಮಾಧವನ ಕರುಣದಲಿ ವಿರಚಿತಮಾದುದೀ ಚರಿತೆ ||
ಓದಿ ಕೇಳಿವರಿಷ್ಟಸಿದ್ಧಿಯು |
ಮೋದದಿಂ ನೀಡುವುದು ನಿರ್ಮಲ |
ರಾದವರಿಗಿದು ಸಿದ್ಧ ಕವಿತೆ ಕುಮಾರಮಾಧವನ || ೨೮

ಈ ತೆರದ ಕಾವ್ಯವನು ವರವಿ |
ಖ್ಯಾತಯತಿಶಂಕರಕರಾಂಬುಜ |
ಜಾತಪಾರಂಪರೆಗೆ ಸೇರಿದ ಯತಿಕುಲೋತ್ತಮರ ||
ಪೂತಪಾವನಚರಣಪಂಕೇ |
ಜಾತಯುಗ್ಮದೊಳರ್ಪಿಸುತ್ತಲಿ |
ಸಾತಿಶಯಭಕ್ತಿಯಲಿ ನಮಿಸುತಲಿರುವೆನನವರತ || ೨೯

ಗುರುಪದಾಂಬುಜಸೇವೆ ಸಾಕ್ಷಾ |
ತ್ಪರಶಿವನ ಪದಸೇವೆಯೆಂದೀ |
ಗುರುಚರಿತ್ರೆಯ ನಾನು ರಚಿಸಿದೆನರಿತ ರೀತಿಯಲಿ ||
ಪರಶಿವನು ತಾನಿದಕೆ ಫಲವನು |
ಕರುಣಿಸುವೊಡಾಫಲವು ಸಲ್ಲಲಿ |
ನರಪತಿಗೆ ನನ್ನೊಡೆಯ ನಾಲ್ವಡಿಕೃಷ್ಣಭೂಪತಿಗೆ || ೩೦

ಮಂಗಳಂ ಶಂಕರಯತೀಶಗೆ |
ಮಂಗಳಂ ವರತುಂಗಭದ್ರೆಗೆ |
ಮಂಗಳಂ ಶ್ರೀರತ್ನಗರ್ಭವತಳೆದ ಗಣಪತಿಗೆ ||
ಮಂಗಳಂ ಶ್ರೀಶಾರದಾಂಬೆಗೆ |
ಮಂಗಳಂ ಶ್ರೀಚಂದ್ರಮೌಳಿಗೆ |
ಮಂಗಳಂ ಶ್ರೀಚಂದ್ರಶೇಖರಭಾರತೀಯತಿಗೆ || ೩೧

ಮಂಗಳಂ ಶ್ರೀಚಾಮುಂಡಿಕಾಂಬಿಗೆ |
ಮಂಗಳಂ ಮೈಸೂರು ದೇಶಕೆ |
ಮಂಗಳಂ ರಾಜೇಂದ್ರ ನಾಲ್ವಡಿಕೃಷ್ಣಭೂಪತಿಗೆ ||
ಮಂಗಳಂ ಪದಿನಾಲ್ಕು ಲೋಕಕೆ |
ಮಂಗಳಂ ಗುರುಭಕ್ತ ನಿಚಯಕೆ |
ಮಂಗಳಂ ಶ್ರೀಕಂಠದೇವನ ಪಾದಪಂಕಜಕೆ || ೩೨

—: ಸಂಧಿ ಮೂವತ್ತೊಂಭತ್ತಕ್ಕೆ ಪದ್ಯ ೧೯೩೪ಕ್ಕೆ ಮಂಗಳ :—

ಇತಿಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯ ಶ್ರೀಮಚ್ಛಂಕರಾಚಾರ್ಯ
ಪಾದಪದ್ಮಾರಾಧಕ ಶ್ರೀಶೃಂಗಗಿರಿ ಶ್ರೀಮಜ್ಜಗದ್ಗುರು ಶ್ರೀಚಂದ್ರಶೇಖರ
ಭಾರತೀಯತೀಂದ್ರ ಚರಣಾರವಿಂದ ಮಕರಂದ ಮಧುಪಾನಭೃಂಗ
ಶ್ರೀ...ಹಡ್ಲಿ ಶ್ರೀಶೃಂಗಗಿರಿ ಶ್ರೀಮಜ್ಜಗದ್ಗುರು ಶ್ರೀವಿದ್ಯಾಭಿನವ
...ಕೇಶ್ವರ ಭಾರತೀ ಯತೀಂದ್ರ ಚರಣಾರವಿಂದ
...ಕರನ ಕರು...ಳೀಪಟಲ ಪರಿಚುಂಬಿತೋತ್ತಮಾಂಗ
...ರ್ಯದಲಿ ...**ವನವಕಾಳಿದಾಸ ಕುಮಾರಮಾಧವ**
ಪೌರ...ಕೃಷ್ಣಭೂಮಣಿ ಸಾಲಿಗ್ರಾಮ ಶ್ರೀಕಂಠಶಾಸ್ತ್ರಿ ವಿರಚಿತಮಪ್ಪ
...ತಿರಲು

|| ಶ್ರೀ ||

...ರಿಯಲಿ

...ಪರೆ

ಕರ್ಣಾಟಕ

# ಶಂಕರವಿಜಯ

## ಪದ್ಯಕಾವ್ಯಂ

ಮಂಗಳಮಾದುದು

—: ಶ್ರೀಸದ್ಗುರು ಚರಣಾರವಿಂದಾರ್ಪಣಮಸ್ತು :—